ಎಂ. ವೆಂಕಟಸ್ವಾಮಿ

# ರೂಪ ರಾಶಿಯರು



# ರೂಪರಾಶಿಯರು

**(Beautiful ladies)**

ಡಾ. ಎಂ. ವೆಂಕಟಸ್ವಾಮಿ



ಸಂಕಲ್ಪ ಪ್ರಕಾಶನ

ನಂ.೧, ೧ನೇ ಅಡ್ಡರಸ್ತೆ , ೧ನೇ ಮುಖ್ಯರಸ್ತೆ ,
ದೀಪಾಂಜಲಿನಗರ, ಬೆಂಗಳೂರು-೫೬ ೦೦೨೬.

**"ROOPARAASHIYARU" -** A Social Novel Written by **Dr. M. Venkataswamy,**
No. 519, 39th Block, Type 5, CPWD Qtrs, HSR Layout, Bangalore.
Ph : 9449041334, E-mail : alemarimvs@gmail.com

**Published By :**
**L.P. Sharath**
**Sankalpa Publications**
No.1, 1st Cross,
1st Main Road, Deepanjalinagar,
Bangalore - 560 026.



**First Impression :** 1999
**Second Impression :** 2009

**Pages :** 196

**Price :** Rs. 150.00

**Paper :** NS Maplitho 70 GSM

**Cover Page :** Pundalika Kalliganur

**DTP & Printed at:**
**Jagruthi Printers**
56/1-6, Narasimhaiah Garden,
Kottigepalya, Magadi Main Road,
Bangalore - 560 091. Ph : 23583850

## ಲೇಖಕನ ನುಡಿ
### (ಪ್ರಥಮ ಮುದ್ರಣದಿಂದ)

ರೂಪರಾಶಿಯರು ನನ್ನ ಚೊಚ್ಚಲ ಕಾದಂಬರಿ. ಮೊದಲಿಗೆ ಕವನಗಳನ್ನು ಬರೆಯಲು ಪ್ರಾರಂಭಿಸಿದ ನನಗೆ ಇಂತಹ ಒಂದು ಕಾದಂಬರಿ ಬರೆದುದ್ದಕ್ಕೆ ಆಶ್ಚರ್ಯವೆನಿಸುತ್ತದೆ. ಒಂದು ಕಾಲದಲ್ಲಿ ಹೇರಳ ಇಂಗ್ಲಿಷು ಮತ್ತು ತೆಲುಗು ಕಾದಂಬರಿಗಳನ್ನು ಓದುತ್ತಿದ್ದ ನನಗೆ ಕನ್ನಡದಲ್ಲಿ ಒಂದು ವಿಶಿಷ್ಟವಾದ ಕಾದಂಬರಿಯನ್ನು ಬರೆಯುವ ಹಂಬಲವಿತ್ತು. ಈ ಕಾದಂಬರಿಯನ್ನು ಬರೆಯುವ ಮುಂಚೆ ವಿಶೇಷವಾಗಿ ಕೆಲವು ಪುಸ್ತಕಗಳನ್ನು : ವಿಜ್ಞಾನ, ಸಾಮಾನ್ಯ ಪರಿಜ್ಞಾನ, ಶೃಂಗಾರಕ್ಕೆ ಸಂಬಂಧಪಟ್ಟ ಮಾಹಿತಿಗಳನ್ನು ಕಲೆಯಾಕಿ ಅದಕ್ಕೆ ತಕ್ಕ ಹಾಗೆ ಕತೆಯನ್ನು ಪೋಣಿಸಿದೆ. ಅನಂತರ ಅದನ್ನು ವಿಭಿನ್ನವಾಗಿ ಕನ್ನಡದಲ್ಲಿ ಬರೆಯಲು ಕೂಡ ಪ್ರಯತ್ನಿಸಿದ್ದೇನೆ, ಅದು ಎಷ್ಟರ ಮಟ್ಟಿಗೆ ಸಫಲವಾಗಿದೆ ಎನ್ನುವುದು ಓದುಗರಿಗೆ ಬಿಟ್ಟಿದ್ದೇನೆ. ಒಟ್ಟಿನಲ್ಲಿ ಒಂದು ಹೊಸ ರೀತಿಯ ಕಾದಂಬರಿಯನ್ನು ಬರೆಯಲು ಪ್ರಯತ್ನಿಸಿದ್ದೇನೆ ಎನ್ನುವುದು ನನ್ನ ಭಾವನೆ. ಇದು ನನ್ನ ನಿರೀಕ್ಷೆಗೆ ಮೀರಿ ಕನ್ನಡ ಪ್ರಭ ದಿನಪತ್ರಿಕೆಯಲ್ಲಿ : ವಿಶಿಷ್ಟ, ವಿನೂತನ ದೈನಿಕ ಧಾರಾವಾಹಿಯಾಗಿ 70 ದಿನಗಳ ಕಾಲ ಹರಿದುಬಂದಿದ್ದು ಈ ಕಾದಂಬರಿಯ ಇನ್ನೊಂದು ವಿಶೇಷ.

ಕೃತಜ್ಞತೆಗಳು: ಈ ಕಾದಂಬರಿಯನ್ನು ಕನ್ನಡಪ್ರಭದಲ್ಲಿ ಪ್ರಕಟಿಸಿದ ದಿ. ವೈ.ಎನ್. ಕೃಷ್ಣಮೂರ್ತಿ ಮತ್ತು ದಿ. ರಮಾಕಾಂತ್ ಅವರಿಗೆ. ಈ ಧಾರಾವಾಹಿಯನ್ನು ಪುಸ್ತಕದ ರೂಪದಲ್ಲಿ ಪ್ರೀತಿಯಿಂದ ಪ್ರಕಟಿಸಿದ ಮೆ॥ ಗೀತಾಂಜಲಿ ಪಬ್ಲಿಕೇಷನ್ಸ್‌ನ ಗೌರವ ಸಂಪಾದಕರು ಮತ್ತು ಸ್ವತಃ ಲೇಖಕರಾಗಿರುವ ಶ್ರೀ ನಿಡಸಾಲೆ ಪುಟ್ಟಸ್ವಾಮಯ್ಯನವರಿಗೆ, ಅಂದವಾಗಿ ಮುದ್ರಿಸಿದ ಮೆ॥ ಚಂದನ ಪ್ರಿಂಟರ್ಸ್ ಬಳಗಕ್ಕೆ, ಕಾದಂಬರಿಯನ್ನು ಮೆಚ್ಚಿ, ವಿಮರ್ಶಿಸಿ ಬರೆದ ಅನೇಕ ಓದುಗ, ಮಿತ್ರರಿಗೆ ಮತ್ತು ಓದುತ್ತಿರುವ ನಿಮಗೆ, ನನಗೆ ವಿದ್ಯೆ, ಬುದ್ಧಿ ಕೊಟ್ಟ ನನ್ನ ಸೋದರತ್ತೆ ಶ್ರೀಮತಿ ಪಾಪಮ್ಮ ನಾಗಭೂಷಣಂ ಅವರಿಗೆ, ಅಂತಿಮವಾಗಿ ಪ್ರೀತಿಯ ಪತ್ನಿ ಶ್ರೀಮತಿ ಸುಶೀಲ ಮತ್ತು ಮಗನಾದ ಎಂ.ವಿ. ಕ್ರಾಂತಿಗೆ.

ಬೆಂಗಳೂರು – 1999

**– ಡಾ. ಎಂ. ವೆಂಕಟಸ್ವಾಮಿ**

## ಎರಡನೇ ಆವೃತ್ತಿಗೆ ಎರಡು ಮಾತು...

ರೂಪರಾಶಿಯರು, ಈ ಸೊಗಸಾದ ಕಾದಂಬರಿ ಪ್ರಕಟವಾಗಿ ಹತ್ತು ವರ್ಷಗಳಾಗಿ ಈಗ ಎರಡನೇ ಮುದ್ರಣ ಕಾಣುತ್ತಿದೆ. ಕನ್ನಡ ಪ್ರಭ ಪತ್ರಿಕೆಯಲ್ಲಿ ದೈನಿಕ ಧಾರಾವಾಹಿಯಾಗಿ ಪ್ರಕಟವಾದ ಸಮಯದಲ್ಲಿ ಈ ಕಾದಂಬರಿಯಲ್ಲಿ ಅಶ್ಲೀಲ ವಾಕ್ಯಗಳಿವೆ ಇದನ್ನು ಇಡೀ ಕುಟುಂಬ ಓದುವ ಪತ್ರಿಕೆಯಲ್ಲಿ ಪ್ರಕಟಿಸುವುದು ಸರಿಯೇ ಎಂದು ಹಲವರು ಆಗಿನ ಸಂಪಾದಕರಾದ ದಿ. ವೈಎನ್‌ಕೆ ಮತ್ತು ದಿ. ರಮಾಕಾಂತ್ ಅವರಿಗೆ ಪತ್ರಗಳನ್ನು ಬರೆದು ನಿಲ್ಲಿಸುವಂತೆ ಕೇಳಿಕೊಂಡಿದ್ದರು. ನನ್ನನ್ನು ಕರೆಸಿದ ರಮಾಕಾಂತ್ ಅವರು ಕಾದಂಬರಿ ತುಂಬಾ ವಿಶಿಷ್ಠ ಮತ್ತು ವಿನೂತನವಾಗಿದೆ ಕೆಲವು ಕಡೆ ಕೆಲವು ವಾಕ್ಯಗಳನ್ನು ತೆಗೆದು ಹಾಕಲು ಹೇಳುತ್ತೇನೆ, ಆದರೆ ಟಿವಿಗಳಲ್ಲಿ, ಸಿನಿಮಾಗಳಲ್ಲಿ ಕದ್ದು ಮುಚ್ಚಿ ಎಲ್ಲಾ ನೋಡ್ತಾರೆ ಬಿಡಿ; ಎಂದಿದ್ದರು. ಅನಂತರ ಅದು ಪೂರ್ಣವಾಗಿಯೇ ಪ್ರಕಟವಾಗಿತ್ತು.

ಈ ಕಾದಂಬರಿಯನ್ನು ಓದಿದ ಮಹಿಳೆಯರೊಬ್ಬರು ಹಾಸನದಿಂದ ಫೋನ್ ಮಾಡಿ ಸುಮಾರು ಅರ್ಧಗಂಟೆ ನನ್ನ ಜೊತೆಗೆ ಅಳುತ್ತಾ ಜಗಳವಾಡಿದ್ದರು. ಎಷ್ಟೋ ರೀತಿಯಲ್ಲಿ ಸಮಾಧಾನ ಮಾಡಿದರು ಅವರು ಒಪ್ಪಲಿಲ್ಲ. ನೀವು ಕೊನೆಯಲ್ಲಿ ಆ ರೀತಿಯಾಗಿ ಕಾದಂಬರಿಯನ್ನು ಮುಕ್ತಾಯ ಮಾಡಬಾರದಿತ್ತು ಎನ್ನುವುದು ಅವರ ವಾದ. ಆಕೆಯ ಪತಿ "ಅಲ್ರೀ ಸ್ವಾಮಿ ನನ್ನ ಪತ್ನಿ ನಿಮ್ಮ ಕಾದಂಬರಿ ಓದಿದ ಮೇಲೆ ಮೂರು ದಿನದಿಂದ ಊಟಾನೇ ಮಾಡಲಿಲ್ಲವಲ್ರೀ...? ಎಂದು ಬೈಯ್ದಿದ್ದರು. ಅದು ನಾನು ಯೋಚಿಸಿದ ಮುಕ್ತಾಯ. ಅದು ಬರೀ ಕಾದಂಬರಿ ಎಂದು ಎಷ್ಟೇ ಹೇಳಿದರೂ ಆ ದಂಪತಿಗಳು ನನ್ನನ್ನು ಪೂರ್ಣವಾಗಿ ತರಾಟೆಗೆ ತೆಗೆದುಕೊಂಡಿದ್ದರು. ಈ ಕಾದಂಬರಿ ಬಂದ ಮೇಲೆ ಮೂಡಲ ಮರೆಯಲ್ಲಿ, ನೀ ನಡೆವ ದಾರಿಯಲ್ಲಿ ಮತ್ತು ಬೆಂಗಳೂರು Y2K50-Y2K64 ಕಾದಂಬರಿಗಳು ಅದೇ ರೀತಿ ಧಾರಾವಾಹಿಗಳಾಗಿ ಪ್ರಕಟವಾದವು.

ಈ ಹತ್ತು ವರ್ಷಗಳಲ್ಲಿ ನಾನು ಬರೆದ 20 ಕೃತಿಗಳು ಪ್ರಕಟವಾಗಿವೆ. ಕಾದಂಬರಿ, ವಿಜ್ಞಾನ, ಕಾವ್ಯ, ವಿಮರ್ಶೆ, ಸಂಶೋಧನೆ ಮತ್ತು ಪ್ರವಾಸ ಕತೆಗಳು ಇತ್ಯಾದಿ. ಈ ಕಾದಂಬರಿಯನ್ನು ಓದಿ ಮತ್ತೆ ಸೊಗಸಾಗಿ ಹೊರತಂದಿರುವ ಮಿತ್ರರಾದ ಶ್ರೀ ಪುಟ್ಟಣ್ಣಯ್ಯ, ಅಂದವಾಗಿ ಮುದ್ರಿಸಿರುವ ಜಾಗೃತಿ ಪ್ರಿಂಟರ್ಸ್‌ನ

ನಿಡಸಾಲೆ ವಿಜಯ್ ಮತ್ತು ಮುದ್ದಾದ ಮುಖಪುಟ ಬಿಡಿಸಿರುವ ಕಲಾವಿದ ಮಿತ್ರರಾದ ಶ್ರೀ ಪುಂಡಲೀಕ ಕಲ್ಲಿಗನೂರು ಹಾಗೂ ಹಿಂಬದಿಯ ಚಿತ್ರ ತೆಗೆದ ಶ್ರೀ ಕೆ. ಚಂದ್ರಶೇಖರ್ ಅವರಿಗೆ ನನ್ನ ಕೃತಜ್ಞತೆಗಳು. ಇನ್ನೊಂದು ವಿಶೇಷವೆಂದರೆ ಈ ಕಾದಂಬರಿಯನ್ನು ಆದಷ್ಟು ಚೆನ್ನಾಗಿ ಮತ್ತೆ ಪರಿಷ್ಕರಿಸಲಾಗಿದ್ದು ಮತ್ತೆ ಓದುಗರು ಪ್ರೀತಿಯಿಂದ ಸ್ವೀಕರಿಸುತ್ತಾರೆ ಎನ್ನುವ ನಂಬಿಕೆ ಇದೆ.

ಶಿಲ್ಲಾಂಗ್
ನವೆಂಬರ್ 2009

– ಡಾ. ಎಂ. ವೆಂಕಟಸ್ವಾಮಿ
alemarimvs@gmail.com
ಜಂಗಮ : 9449041334

# ರೂಪರಾಶಿಯರು

**(Beautiful ladies)**

"Sex is n't the best thing in the world or the worst thing in the world - but there is nothing else quite like it."- W.C. Fields

ರಾಜಧಾನಿ ಬೆಂಗಳೂರು ಮುಂದಿನ ದಿನಗಳಲ್ಲಿ ಬರಲಿರುವ ತೊಂದರೆಗಳೆಲ್ಲವನ್ನೂ ಬದಿಗಿಟ್ಟು ದಶದಿಕ್ಕುಗಳಲ್ಲಿ ತನ್ನ ಟೆಂಟ್ಯಾಕಲ್ಸ್ ಚಾಚುತ್ತಾ, ತನ್ನ ಪರ್ಯಾಯ ಶಿಲೆ ಮುಸಿಡಿಯ ಮೇಲೆ ಗಟ್ಟಿಸಿಕೊಳ್ಳುತ್ತಲೇ ಬೆಳೆಯುತ್ತಿದೆ. ಪುಷ್ಯಮಾಸದ ಸೊಬಗನ್ನು ಸವಿಯುತ್ತಿರುವ ಬೆಂಗಳೂರು ಬಾಲಸೂರ್ಯನ ಕಿರಣಗಳಲ್ಲಿ ಹೊರಳಾಡುತ್ತಾ, ಆಕಳಿಸುತ್ತಾ ದೈನಂದಿನ ಕಾರ್ಯದಲ್ಲಿ ತೊಡಗಲು ಸಿದ್ಧವಾಗುತ್ತಿದೆ.

ಜಯನಗರದ ಬಡಾವಣೆಯಲ್ಲಿ ಒಂದು ಸುಸಜ್ಜಿತ ಮನೆ. ಮನೆಯ ಮುಂದೆ ಅಂದವಾದ ಹೂದೋಟ, ವಿಧವಿಧವಾದ ಹೂವುಗಳು. ಮಾಲಿ ಒಂದು ಪಕ್ಕದಿಂದ ಗಿಡಗಳಿಗೆ ನೀರುಣಿಸುತ್ತಿದ್ದಾನೆ. ಗಿಡಗಳು ಸುಂದರವಾಗಿ ತಾಯಿಯಿಂದ ಪ್ರೀತಿ ಪಡೆಯುವಂತೆ ಸ್ನಾನಮಾಡುತ್ತಾ ಗಾಳಿಯಲ್ಲಿ ಆಡಿಕೊಳ್ಳುತ್ತಿವೆ. ತೋಟದ ಇನ್ನೊಂದು ಮೂಲೆಯಲ್ಲಿರುವ ಪೋರ್ಟಿಕೋದಲ್ಲಿ ಕೆಂಪು ಪ್ಲಾಸ್ಮಾ ಬಣ್ಣದ ಬೆಂಟ್ಲೆ ಕಾರು ಕಾಯುತ್ತಿದೆ.

ಈ ಸುಸಜ್ಜಿತ ಮನೆಯ ಮಧ್ಯದ ಒಂದು ಕೋಣೆಯಲ್ಲಿ ಇಮ್ಮಡಿ ಪಲ್ಲಂಗದ ಮೇಲೆ ಮೆತ್ತನೆ 'ಕರ್ಲಾನ್' ಹಾಸಿಗೆ. ಹಾಸಿಗೆಯ ಮೇಲೆ ಉದ್ಯಾನ ನಗರದ ಅತಿ ಸುಂದರ ಚೆಲುವೆ ಮಲಗಿದ್ದಾಳೆ. ಕೇವಲ ೨೦ ವಸಂತಗಳು ಮತ್ತು ೭೩ ದಿನಗಳನ್ನು ತುಂಬಿಕೊಂಡಿರುವ ಈ ಚೆಲುವೆಯ ದೇಹ ನವಿರು ಜೈಪುರದ ಬ್ಲಾಂಕೇಟ್ ಒಳಗಿಂದ ಸೌಂದರ್ಯ ಸ್ಫೋಟಗೊಂಡಂತೆ ಅಲ್ಲಲ್ಲಿ ಪ್ರದರ್ಶಿಸಿದೆ.

ಜಾನ್‌ಸನ್ ಮತ್ತು ನಿಕೋಲಸ್‌ನ ಗುಲಾಬಿ ಕೆಂಪು ಮಿಶ್ರಿತ ಬಣ್ಣಗಳನ್ನು ಬಳಿದುಕೊಂಡಿರುವ ಗೋಡೆಗಳು, ಅಲ್ಲಲ್ಲಿ ಬಹಳ ಸೊಗಸಾದ ಮತ್ತು

ಅಪರೂಪವಾಗಿ ಸಂಗ್ರಹಿಸಿರುವ ವಸ್ತುಗಳನ್ನೂ ನೇತಾಕಿಕೊಂಡಿವೆ. ಉದಾಹರಣೆಗೆ ಮೇ ತಿಂಗಳಲ್ಲಿ ಮಣಿಪುರದ ಕಣಿವೆಗಳಲ್ಲಿ ಅರಳುವ ವಿಶ್ವವಿಖ್ಯಾತ 'ಲಿಲ್ಲಿ' ಹೂವುಗಳನ್ನು ತುಂಬಿಕೊಂಡ ಬೆಟ್ಟಗುಡ್ಡಗಳ ದೃಶ್ಯ, ಅಷ್ಟೇ ಪ್ರಖ್ಯಾತವಾದ ಶಿಲ್ಲಾಂಗಿನ ಬೆಟ್ಟಗಳ ಆಲ್ಬಮ್ ಬಹಳ ಸರಳವಾದಿ ಕ್ಯಾನ್‌ವಾಸ್‌ನಿಂದ ಬಿಡಿಸಿದ ಎರಡು ಕುದುರೆಗಳು ಕೆನೆಯುವ ಚಿತ್ರದ ಹಿಂದೆ ಭೋರ್ಗರೆಯುವ ಸಮುದ್ರದಲೆಗಳು ಹೀಗೆ...

ಇಮ್ಮಡಿ ಪಲ್ಲಂಗದ ಇನ್ನರ್ಧ ಭಾಗದಲ್ಲಿ ಪ್ರೀತಿಯ ಹ್ಯಾಂಡ್ಸಮ್ ಗಂಡ ಪವನ ಮಲಗಿದ್ದಾನೆ. ೨೮ ವಸಂತಗಳನ್ನು ದಾಟಿರುವ ಪವನ್ ೧೮೫.೫ ಸೆಂ.ಮೀ ಎತ್ತರವಿದ್ದು, ವಿಶಾಲವಾದ ರೋಮೆದೆ ಹೊಂದಿದ್ದು ಹೆಣ್ಣುಗಳನ್ನು ಪ್ರೇಮಿಸಲೆಂದೇ ಹುಟ್ಟಿದವನಂತೆ ಕಾಣಿಸಿಕೊಳ್ಳುತ್ತಾನೆ.

ಸುಂದರವಾದ ಹೆಂಡತಿ, ಅಂದವಾದ ಮನೆ, ಬೆಂಟ್ಲಿ ಕಾರು, ಎಲ್ಲಾ ಸೌಕರ್ಯಗಳು ತುಂಬಿಕೊಂಡುವಂತಹ ಉದ್ಯೋಗ ಇವುಗಳನ್ನೆಲ್ಲ ಕೇವಲ ೨೮ ವರ್ಷಗಳ ವಯಸ್ಸಿನಲ್ಲೇ ಗಳಿಸಿರುವ ಪವನ್‌ನ ಸಾಧನೆ ವ್ಯಾಪಾರಮಂಡಲಿ ಸಮುದಾಯದಲ್ಲಿ ಹುಬ್ಬೇರಿಸುವಂತೆ ಮಾಡಿಬಿಟ್ಟಿದೆ.

ಪವನ್ ಒಬ್ಬ ನುರಿತ ಎಕ್ಸಿಕ್ಯೂಟಿವ್ ಅಷ್ಟೇ ಅಲ್ಲ. ಬಾಡಿ ಗೆಶ್ಚರ್ಸ್‌ನಿಂದ ಇರುವೆ ಪ್ರಪಂಚ ಕಾಸ್‌ಮಿಕ್ ಪ್ರಪಂಚದವರೆಗೂ ಮಾತಾಡಬಲ್ಲ ಕುಶಲ ಮಾತುಗಾರ. ಅವನು ಮಲಗಿರುವ ಕೊಠಡಿಗೆ ಗುಲಾಬಿ ಬಣ್ಣ ಬಳಿಯುವ ಮುನ್ನ ಪ್ರಾಚಿಗೆ ಹೇಳಿದ್ದಾನೆ. ಪ್ರಾಚಿ, ಕಂಪು ಬಣ್ಣ ದೇಹದೊಳಗೆ ಕಾವು ಮತ್ತು ಉತ್ಸಾಹ ಉತ್ಪತ್ತಿ ಮಾಡುತ್ತದೆ. ಅಂದರೆ ಕಾಮ ಇಮ್ಮಡಿಗೊಳ್ಳುತ್ತದೆ ಎಂದು.

ರಾತ್ರಿ ಮಲಗುವಾಗ ಪವನ್ ಎಷ್ಟೇ ಕೊಸರಾಡಿದರೂ, ಪ್ರಾಚಿ ಅವನ ಮನೋಹರ ಕಾಮ ಮಿಲನಕ್ಕೆ ಒಪ್ಪಿಗೆ ಕೊಡಲಿಲ್ಲ. ಪ್ರಾಚಿ ಅತ್ಯುತ್ತಮ ಕಾಟನ್ ಪ್ಯಾಂಟಿ ಮತ್ತು ಬ್ರಾನಲ್ಲಿ ಸಿಂಗರಿಸುವ ಮೇಜಿನ ಮುಂದೆ ನಿಂತು ಕನ್ನಡಿಯಲ್ಲಿ ಪ್ರತಿಯೊಂದು ಅಂಗವನ್ನೂ ಪವನ್ ಕೈಗಳಿಂದ ಅಳತೆ ಮಾಡಿಸಿಕೊಂಡಳು.

೧೨೮ ಪೌಂಡ್‌ನ ಪ್ರಾಚಿಯ ಸಂಖ್ಯೆಗಳು ೩೩.೫೦, ೨೨.೫೦, ೩೩.೫೦ ಎತ್ತರ ೧೬೮ ಸೆಂ.ಮೀ, ಮೂಗು ೧³/₄ ಅಂಗುಲ, ಬಾಯಿಯ ಆಗಲ ೨³/₄ ಅಂಗುಲ, ಜೊತೆಗೆ ಪ್ರಪಂಚದ ಪ್ರೀತಿಯನ್ನು ಗಳಿಸಿರುವ ಬೆಳ್ಳಿಯ ಚಂದ್ರ, ಬಂಗಾರ ಸೂರ್ಯ, ವಜ್ರದ ನಕ್ಷತ್ರಗಳ ಸಾಟಿಗೆ ನಿಲ್ಲುವಂತಹ ಚೆಂದವನ್ನು ಹೊಂದಿದ್ದಾಳೆ ಪ್ರಾಚಿ.

ಗೋಡೆಯ ಹೆಗಲಿನಲ್ಲಿ ಮೆತ್ತನೆಯ ಚೂಪಾದ ಹಿಮಾಲಯ ಶಿಖರಗಳ

ಮೇಲೆ ತನ್ನ ಕೆಲಸ ತಾನು ಮಾಡುತ್ತಿರುವ ಗಡಿಯಾರದಲ್ಲಿ, ತನ್ನ ಪ್ರೀತಿಯ ಪ್ರಾಚಿಯ ಸಣ್ಣ ಮುಳ್ಳು ದಕ್ಷಿಣ ಧ್ರುವದಲ್ಲೂ, ಪವನ್‌ನ ಉದ್ದ ಮುಳ್ಳು ಉತ್ತರ ಧ್ರುವದಲ್ಲೂ ಸೇರಿ ನೇರವಾಗಿ ಒಂದಾದಾಗ (ಪವನ್ ಎರಡು ಮುಳ್ಳುಗಳನ್ನು ನೋಡಿದಾಗ ಪ್ರೀತಿಯಿಂದ ಪ್ರಾಚಿ ನಿನ್ನದು ಸಣ್ಣ ಮುಳ್ಳು, ನನ್ನದು ದೊಡ್ಡ ಮುಳ್ಳು ಎಂದು ನಗುತ್ತಾನೆ) ಅದೊಂದು ವಿಚಿತ್ರ ಹಕ್ಕಿ ಕೂಗಿಕೊಳ್ಳುತ್ತ ಗಂಟೆ ಆರಾಯಿತು.

ಪ್ರಾಚಿ ಮೆಲ್ಲನೆ ತನ್ನ ಕಣ್ಣುರೆಪ್ಪೆಗಳನ್ನು ಬಿಡಿಸುತ್ತಾ ಎದುರಿಗಿದ್ದ ಕೆನೆಯುವ ಕುದುರೆಗಳ ಚಿತ್ರ ನೋಡಿ ತುಟಿಗಳಲ್ಲಿ ಏನೋ ಮುದ್ರಿಸಿಕೊಂಡಳು. ಪವನ್ ಕಡೆಗೊಮ್ಮೆ ನೋಡಿ, ಕನಿಕರದಿಂದ ತಲೆ ಕೂದಲಲ್ಲಿ ಬೆರಳುಗಳನ್ನು ತೂರಿಸಿ, ಬಲಕೈ ಮತ್ತು ಬಲಕಾಲನ್ನು ಅವನ ಮೇಲೆ ಹಾಕಿ, ಮೃದುವಾಗಿ ಅಪ್ಪಿಕೊಂಡು ಅವನ ಕೆನ್ನೆಯ ಮೇಲೆ ತನ್ನ ಕೆನ್ನೆ ಇಟ್ಟು, ಕಣ್ಣು ಮುಚ್ಚಿಕೊಂಡಳು ಕೆಲವು ಕ್ಷಣಗಳು. ಎಲ್ಲೋ ಅವನಲ್ಲಿ ಏನೋ ಚಲನೆಯಾದಂತಾಗಿ, ಓ ! ದೇವರೆ ಎಂದು ಚಂಗನೆ ಮಂಚದಿಂದ ಹಾರಿ ಸಿಂಗರಿಸುವ ಮೇಜಿನ ಮುಂದೆ ನಿಂತುಕೊಂಡಳು ಪ್ರಾಚಿ.

ಈ ದಿನ ಸಾಯಂಕಾಲ ಅಂದರೆ ೫ ಗಂಟೆಗೆ ರವೀಂದ್ರ ಕಲಾಕ್ಷೇತ್ರದಲ್ಲಿ ನಡೆಯಲಿರುವ 'ಮಿಸ್ ಬೆಂಗಳೂರು' ಸೌಂದರ್ಯ ಸ್ಪರ್ಧೆಯಲ್ಲಿ ಯಾರು "ಮಿಸ್ ಬೆಂಗಳೂರು" ಆಗಿ ಆಯ್ಕೆಯಾಗುತ್ತಾರೋ ನೋಡಬೇಕು. ಹೆಸರಿಗೆ ಮಾತ್ರ ಮಿಸ್ ಬೆಂಗಳೂರು ಸ್ಪರ್ಧೆಯಾದರೂ, ಸ್ಪರ್ಧೆಗೆ ದೇಶದ ವಿವಿಧ ನಗರಗಳಿಂದ ಹಲವು ರೂಪರಾಶಿಯರು ಬರಲಿದ್ದು, ಇದೊಂದು "ಮಿಸ್ ಇಂಡಿಯಾ" ಸ್ಪರ್ಧೆಯೇ ಆಗಿದೆ. ಈಗಾಗಲೇ ತಿಳಿದಿರುವ ಸಮಾಚಾರದ ಮೇಲೆ ಬರೋಡದ ದರ್ಶನಾ ಪಟೇಲ್, ಡೆಲ್ಲಿಯ ರೂಪಾ ಕನ್‌ವಲ್ಕರ್ ಮತ್ತು ಮುಂಬಯಿಯ ಅರುಣಾ ತಂಡೋಲ್ಕರ್ ಮುಖ್ಯ ಸ್ಪರ್ಧಿಗಳು.

ಒಟ್ಟಿನಲ್ಲಿ ಎಲ್ಲಾ ರೀತಿಯ ಮುನ್ನೆಚ್ಚರಿಕೆಗಳನ್ನು ಸುಮಾರು ಒಂದು ವರ್ಷದಿಂದ ಕಟ್ಟುನಿಟ್ಟಾಗಿ ಅನುಸರಿಸಿಕೊಂಡು ಬಂದಿರುವ ಪ್ರಾಚಿ ದಿನಾ ಬಿಟ್ಟು ದಿನಾ ಹಗುರವಾಗಿ ವ್ಯಾಯಾಮ ಮಾಡಿ ತನ್ನ ಎಲ್ಲಿರಬೇಕಾದ ಚೆಲುವನ್ನು ಅಲ್ಲಿರಿಸಿಕೊಂಡಿದ್ದಾಳೆ. ಡಾಕ್ಟರ್ ಸೂಚನೆಯ ಪ್ರಕಾರ ಆಹಾರವನ್ನು ಕ್ಯಾಲೋರಿಗಳ ಅಳತೆಯಲ್ಲಿ ತೆಗೆದುಕೊಂಡಿದ್ದಾಳೆ. ಕಾಫಿ, ಟೀ, ಎಲ್ಲಾ ಬಿಸಿ ಪಾನೀಯಗಳನ್ನು ದೂರವಿರಿಸಿ ತಂಪು ಪಾನೀಯಗಳನ್ನು ಆಯ್ಕೆ ಮಾಡಿಕೊಂಡು ಮಿಲಿ ಲೀಟರ್‌ಗಳ ಅಳತೆಯಲ್ಲಿ ತೆಗೆದುಕೊಂಡಿದ್ದಾಳೆ.

ಇನ್ನೂ ಕಣ್ಣು, ಮೂಗು, ಕೆನ್ನೆ, ಗಲ್ಲ, ತುಟಿ, ಕೂದಲು, ಚರ್ಮ ಪ್ರತಿಯೊಂದನ್ನು ಅನೇಕ ಗಂಟೆಗಳು ನೋಡುತ್ತಾ ಆರೋಗ್ಯ ಮತ್ತು ಬ್ಯೂಟಿಕೇರ್

ಪುಸ್ತಕಗಳನ್ನು ಓದಿ ಪ್ರತಿಯೊಂದು ಅಂಗವನ್ನೂ ಬಹಳ ನಾಜೂಕಾಗಿ ಸುಂದರ ರೂಪಕ್ಕೆ ತಂದುಕೊಂಡಿದ್ದಾಳೆ. ತನ್ನದೇ ಆದ ಸಂಯೋಗ ಮತ್ತು ಕಲ್ಪನೆಯನ್ನು ಹಲವು ಆರೋಗ್ಯ ಮತ್ತು ಬ್ಯೂಟಿಕೇರ್ ತಜ್ಞರ ಜೊತೆಗೆ ಚರ್ಚಿಸಿ, ಸಲಹೆಗಳಿಂದ ಲಾಭ ಪಡೆದಿದ್ದಾಳೆ. ಈಗ ಬೆಳ್ಳಿ ಪರದೆಯ ಮೇಲೆ ಅವಳ ಕಣ್ಣು ಬಿದ್ದಿದೆ.

ಎಲ್ಲಾ ರೀತಿಯಲ್ಲೂ ತೃಪ್ತಿ ಹೊಂದಿರುವ ಪ್ರಾಚಿ ಒಂದು ಪುಟ್ಟ ಕೆಲಸಕ್ಕೂ ಬಹಳ ಯೋಚಿಸುತ್ತಾಳೆ. ಇದರಿಂದ ಲಾಭವಾಗಬಹುದೆ ಅಥವಾ ಚೆಲುವಿಗೆ ಧಕ್ಕೆಯಾಗಬಹುದೆ ಎಂದು. ಇತ್ತೀಚೆಗೆ ಬೆಂಗಳೂರಿನಲ್ಲಿ ಬಹಳ ಹೆಸರು ಗಳಿಸಿರುವ 'ಹಚ್ಚೆ' ಪ್ಯಾರಲರ್‌ಗೆ ಹೋಗಿ ಗಲ್ಲದ ಗುಳಿಯಲ್ಲಿ ಒಂದು ಮಿ.ಮೀ. ಸುತ್ತಳತೆಯ ಕಪ್ಪು ಹಚ್ಚೆಯನ್ನು ಹಚ್ಚೆ ಮಾಡಿಕೊಂಡು ಬಿಟ್ಟಿದ್ದಾಳೆ. ನಕ್ಕಾಗ ಆಳವಾಗಿ ಕಾಣುತ್ತಿದ್ದ ಆ ಗುಳಿಯಲ್ಲಿಯೇ ಎಷ್ಟೋ ಗಂಡಸರು ಬಿದ್ದು ಕೈ ಕಾಲು ಮುರಿದುಕೊಂಡಿದ್ದರು. ಆದರೆ ಗುಳಿಯ ಆಳ ಈಗ ತುಸು ಕಮ್ಮಿಯಾದಂತೆ ಕಾಣುತ್ತಿದ್ದು ಪ್ರಾಚಿ ನಕ್ಕಾಗ ಅವಳನ್ನೇ ಎದುರಿಸುತ್ತಿರುವಂತೆ ತೋರುತ್ತಿತ್ತು. ಇದರ ಬಗ್ಗೆ ಪವನ್‌ಗೆ ಹೇಳಿದಾಗ ಪವನ್ ಹೇಳಿದ್ದ. 'ಮಿಸ್ ಬೆಂಗಳೂರು ಸ್ಪರ್ಧಿಸಿದ್ದರೆ ಖಂಡಿತ ನೀನೇ ಆಯ್ಕೆಯಾಗುತ್ತಿದ್ದೆ ಎಂದು "ನಾವಿಬ್ಬರು ಲೀಗಲ್ ಆಗಿ ಮದುವೆಯಾಗದೆ ಇದ್ದಿದ್ದರೆ ಒಳ್ಳೆಯದಿತ್ತು" ಪ್ರಾಚಿ ಹೇಳಿದಳು.

ಪ್ರಾಚಿ ಲವಲವಿಕೆಯಿಂದ ಹಂಸದಂತೆ ಸಾವಿರಾರು ಕಣ್ಣುಗಳ ಮುಂದೆ ಕಲಾಕ್ಷೇತ್ರದಲ್ಲಿ ಕಿರೀಟವಿಟ್ಟುಕೊಂಡು ವೇದಿಕೆ ಮೇಲೆ ಶಿಸ್ತಾಗಿ ನಡೆದು ಬರುವಂತೆ ಸ್ನಾನದ ಕೊಠಡಿಗೆ ನಡೆಯತೊಡಗಿದಳು.

ಇಂದಿನ ಕಾರ್ಯಕ್ರಮಗಳ ಬಗ್ಗೆ ಮತ್ತೊಮ್ಮೆ ಮೆಲುಕು ಹಾಕಿಕೊಂಡು ಸ್ನಾನ ಮುಗಿಸಿ ಬಾಂಬೆ ಡೈಯಿಂಗ್‌ನ ಅತ್ಯುತ್ತಮ ಸ್ನಾನದ ಹತ್ತಿಯ ಟವಲ್ ಸುತ್ತಿಕೊಂಡು ಶೃಂಗಾರದ ಮೇಜಿನ ಮುಂದೆ ಹಾಜರಾದಳು.

ಕಣ್ಣುಬ್ಬುಗಳನ್ನು ಹಗುರವಾಗಿ ತ್ರೆಡ್ಡಿಂಗ್ ಮಾಡಿಕೊಂಡು ಹರ್ಬಲ್ ಫೇಸ್ ಪ್ಯಾಕ್ ಮಾಡಿಕೊಳ್ಳುವುದು ಮಾತ್ರ ಉಳಿದಿತ್ತು. ಅದನ್ನ ಕಲಾಕ್ಷೇತ್ರಕ್ಕೆ ಹೋಗುವ ಮುನ್ನ ತಾನೇ ಮಾಡಿಕೊಳ್ಳಬೇಕೆಂದು ತೀರ್ಮಾನಿಸಿದ್ದರಿಂದ ಸದ್ಯಕ್ಕೆ ಪವನ್‌ನನ್ನು ಎಬ್ಬಿಸಲು ಮತ್ತೆ ಹಾಸಿಗೆಯ ಕಡೆ ನಡೆಯತೊಡಗಿದಳು. ಅಷ್ಟೊತ್ತಿಗೆ ಬರೀ ನಿಕ್ಕರ್‌ನಲ್ಲಿ ವ್ಯಾಯಾಮ ಮಾಡುತ್ತಿದ್ದ ಪವನ್‌ನನ್ನು ನೋಡಿದ ಪ್ರಾಚಿ 'ಅರೆ ಪವನ್ ಜಾಗಿಂಗ್ ಹೋಗಲಿಲ್ಲವೆ ?' ಎಂದಿದ್ದೆ 'ಇಲ್ಲಾ... ಪ್ರಿಯೆ, ೩.೩೦ಕ್ಕೆಲ್ಲಾ ಆಫೀಸ್‌ಗೋಗಬೇಕು. ಈದಿನ ಖಾಸಗಿ ಕಾರ್ಯದರ್ಶಿಗಳ ಸಂದರ್ಶನವಿದೆ. ಪ್ರಶ್ನೆಮಾಲಿಕೆ ತಯಾರಿಸಬೇಕಿತ್ತು' ಎಂದ.

"ಅರೆ... ನೀವು ಪ್ರಶ್ನೆಮಾಲಿಕೆ ತಯಾರಿಸುತ್ತೀರ ? ಇಲ್ಲ, ನೀವು ಹಾಗೆ ನೇರವಾಗಿ ಪ್ರಶ್ನೆ ಕೇಳಿ" ಎಂದಳು.

"ಪ್ರಾಚಿ, ಪ್ರತಿ ಘಳಿಗೆಯೂ ಹೊಸ ಹೊಸ ಶೋಧನೆಗಳು ಹೊರಬೀಳುತ್ತಿರುವ ಈ ದಿನಗಳಲ್ಲಿ ಜ್ಞಾನ ಒಂದು ಘಳಿಗೆಯಿಂದ ಇನ್ನೊಂದು ಘಳಿಗೆಗೆ ಮಾರ್ಪಾಟಾಗುತ್ತದೆ".

"ಅಬ್ಬಾ ನಿಮ್ಮಿಷ್ಟ" ಎಂದಳು ಪ್ರಾಚಿ. ಪವನ್ ಒಳಗೊಳಗೆ ಮುಗುಳು ನಗುತ್ತಾ ತನ್ನ ಕೆಲಸ ಮುಂದುವರಿಸಿದ.

ಪ್ರಾಚಿ ಹೊರಕ್ಕೆ ಬಂದು ತೋಟದಲ್ಲಿ ಸುಂದರವಾಗಿ ಹೊಸದಾಗಿ ಅರಳಿದ, ಅರಳಿಕೊಳ್ಳುವ ಸೂರ್ಯನ ರಶ್ಮಿಗೆ ತವಕಿಸುವ ಮೊಗ್ಗುಗಳನ್ನು ನೋಡುತ್ತಾ ನಿಂತಿದ್ದಾಳೆ. ಪವನ್ ತನ್ನ ಕಾರ್ಯಕ್ರಮಗಳನ್ನು ಚಕಚಕನೆ ಮುಗಿಸುತ್ತಾ ಬಂದು, ಅರ್ಧಗಂಟೆ ಮುಂಚೆ ಮೆದುಳು ಬ್ಯಾಂಕಿಗೋಗಿ ಮತ್ತೆ ಕಛೇರಿಗೆ ಹೋಗಬೇಕೆಂದು ಕೊಂಡನು.

ಅಸ್ಸಾಂ ಟೀ ತೋಟಗಳಲ್ಲಿ ಒಂದೊಂದು ಗಿಡವು ಹತ್ತಾರು ವರ್ಷಗಳು ಬರೀ ರೂಪಾಯಿ ನೋಟುಗಳಂತೆ ಚಿಗುರುವ ಎಲೆಗಳ ಕೆಳಗೆ ಪೃಥ್ವಿಯ ಒದ್ದೆಯಾದ ತಪ್ಪಲುಗಳಲ್ಲಿ ಬಹಳ ನಾಜೂಕಾಗಿ ವಿಚಿತ್ರವಾಗಿ ಕಲೆಗಾರನೂ ಊಹಿಸದ ರೀತಿಯ ಬೇರುಗಳಿರುತ್ತವೆ. ಅಂಥವೇ ಬೇರುಗಳಲ್ಲಿ ಮಾಡಿಸಿ ನಿಲ್ಲಿಸಿದ ಡೈನಿಂಗ್ ಟೇಬಲಿನ ಮೇಲೆ ಬೆಳಗಿನ ಉಪಹಾರ ತಯಾರಾಗಿ ಕಾದಿದೆ. ಅಡಿಗೆ ಭಟ್ಟ ಪಕ್ಕದಲ್ಲೇ ನಿಂತಿದ್ದಾನೆ.

ಪವನ್ ಮತ್ತು ಪ್ರಾಚಿ ಮೇಜಿನ ಕಡೆಗೆ ನಡೆದು ಬಂದಿದ್ದೆ, ಅಡಿಗೆ ಭಟ್ಟ ಎರಡು ಕುರ್ಚಿಗಳನ್ನು ಮೇಜಿನಿಂದ ಬಿಡಿಸಿ ಜಾಗ ಮಾಡಿಕೊಡುತ್ತಾನೆ. ಇಬ್ಬರು ತೆಳುವಾದ ನ್ಯಾಪ್‌ಕಿನ್ ತೆಗೆದುಕೊಂಡು ತೊಡೆ ಮೇಲಾಕಿಕೊಳ್ಳುತ್ತಾರೆ.

ಪ್ರಾಚಿ ಇನ್ನೆರಡು ಮೂರು ವರ್ಷಗಳಲ್ಲಿ 'ಮಿಸ್ ಬೆಂಗಳೂರು' ಮತ್ತೆ 'ಮಿಸ್ ಇಂಡಿಯಾ' ನಂತರ 'ಮಿಸ್ ವರ್ಲ್ಡ್'ಗೆ ಸ್ಪರ್ಧಿಸಿ ಅನಂತರ ಮದುವೆಯಾಗಬೇಕೆಂದು ಕೊಂಡಿದ್ದಳು. ಆದರೆ ಹಾಗೆ ನಡೆಯಲಿಲ್ಲ. ಮದುವೆಯಾದ ಮೇಲೆ ಹೆಂಗಸರು ಮಿಸ್ ಇಂಡಿಯಾ, ಮಿಸ್ ವರ್ಲ್ಡ್ ಯಾವುದೇ ಸ್ಪರ್ಧೆಗೆ ಸ್ಪರ್ಧಿಸಲು ಅನರ್ಹರಾಗಿ ಬಿಡುತ್ತಾರೆ.

ಈಗ ಮತ್ತೊಂದು ದಾರಿ ಹಿಡಿಯಬೇಕೆಂದುಕೊಂಡಿದ್ದಾಳೆ. ರೂಪದರ್ಶಿಯಾಗಿ ಹೆಸರು ಮಾಡಿ ಸಿನಿಮಾ ನಟಿಯಾದರು ಸರಿ ಎನ್ನುವ ಆಸೆ ಮಾತ್ರ ಉಳಿದಿದೆ.

ಇತ್ತೀಚೆಗೆ ನಡೆದ ಕೆಲವು ಅನಿರೀಕ್ಷಿತ ಘಟನೆಗಳಿಂದ ಅವಳ ಮದುವೆ ಪವನ್ ಜೊತೆ ನಡೆದೇ ಹೋಯಿತು. ಎಲ್ಲವೂ ಒಂದೇ ಸಲಕ್ಕೆ ಕನಸಿನಲ್ಲಿ ನಡೆದಂತೆ ಆಗಿಹೋಯಿತು. ಮದುವೆಯಾಗುವುದಕ್ಕೆ ಮೊದಲೇ ಪ್ರಾಚಿ ಮತ್ತು ಪವನ್ ಹಲವು ಭವಿಷ್ಯದ ರಚನಾಕ್ರಮಗಳನ್ನು ಒಟ್ಟುಗೂಡಿಸಿ ಒಡಂಬಡಿಕೆ ಮಾಡಿಕೊಂಡೆ ಮದುವೆಯಾಗಿದ್ದಾರೆ. ಇವುಗಳಲ್ಲಿ ರೂಪದರ್ಶಿಯಾಗುವುದಕ್ಕೆ ಬೇಕಾಗುವ ಸಹಾಯ ಮತ್ತು ಯಾವ ರೀತಿಯ ಕಟ್ಟುನಿಟ್ಟುಗಳು ಇರಬಾರದೆಂದು ತಿಳಿಸಿದ್ದಾಳೆ.

ಅಷ್ಟೇ ಅಲ್ಲ, ಅವಳ ಸೌಂದರ್ಯಕ್ಕೆ ಮದುವೆಯಿಂದ ಯಾವ ರೀತಿಯ ಧಕ್ಕೆಯೂ ಆಗಬಾರದು. ಈ ವಿಷಯದಲ್ಲಿ ಪ್ರಾಚಿಯ ಅನುಮತಿಯಿಲ್ಲದೆ ಏನೂ ನಡೆಯಬಾರದು. ಇವೆಲ್ಲಕ್ಕಿಂತ ಮಿಗಿಲಾಗಿ ಎಲ್ಲಾ ವಿಧಗಳಲ್ಲೂ ಪ್ರಾಚೀಯ ಮನೋಭಾವಗಳನ್ನು ಅರ್ಥಮಾಡಿಕೊಂಡು ಅವಳ ಸೌಂದರ್ಯಕ್ಕೆ ಯಾವ ರೀತಿಯ ಹಾನಿಯೂ ಆಗದಂತೆ ತನ್ನೆಲ್ಲಾ ಆಸೆಗಳನ್ನೂ ನೆರವೇರಿಸಿಕೊಳ್ಳುವ ಪವನ್ ಅವಳಿಗೆ ಅಚ್ಚುಮೆಚ್ಚು ಗಂಡನಾಗಿಬಿಟ್ಟಿದ್ದಾನೆ ಕೇವಲ ಮದುವೆಯಾದ ಒಂಭತ್ತು ತಿಂಗಳುಗಳಲ್ಲಿ.

ಪವನ್ ಎದುರಿಗಿರುವ ಬೆಳಗಿನ ಫಲಾಹಾರದ ಕೆಲವು ತಿನಿಸುಗಳನ್ನು ರುಚಿ ನೋಡುತ್ತ ಪ್ರಾಚಿಯ ಸೌಂದರ್ಯವನ್ನು ನಂಜಿಕೊಳ್ಳುತ್ತಿದ್ದಾನೆ. ಹೆಣ್ಣುಗಳ ಪ್ರತಿಯೊಂದು ಅಂಗವು ಚೆಲುವಾದವೆ. ಕೆಲವು ಹೆಣ್ಣುಗಳಿಗೆ ಕೆಲವು ಅಂಗಗಳು ಮೇರು ಮನೋಹರವಾಗಿರುತ್ತವೆ. ಪ್ರಾಚಿಗೆ ಮಾತ್ರ ಎಲ್ಲಾ ಅಂಗಸೌಷ್ಠವಗಳು ಲಾವಣ್ಯ ರಮಣೀಯವಾಗಿ ಇವೆಯಲ್ಲಾ ಎಂದುಕೊಳ್ಳುತ್ತಿದ್ದಾನೆ.

'ಪವನ್' ಎನ್ನುತ್ತಾಳೆ ಪ್ರಾಚಿ. ಅರೆಘಳಿಗೆ ಭೂಮಿಗೆ ಇಳಿದು ಬಂದ ಪವನ್ ಎದ್ದುನಿಂತು ಪ್ರಾಚಿಯ ಕಡೆಗೆ ನಡೆದು ಬರುತ್ತಾನೆ. ಅಡಿಗೆಭಟ್ಟ ಇಬ್ಬರು ಇರುವ ಸ್ಥಳದಿಂದ ಸಾಮಾನ್ಯವಾಗಿ ದೂರವೇ ಇದ್ದು ಕರೆದಾಗ ಮಾತ್ರ ಹಾಜರಿಯಾಗುತ್ತಾನೆ. ಎರಡು ಕೈಗಳನ್ನು ಪ್ರಾಚಿಯ ಭುಜಗಳ ಮೇಲಿಟ್ಟು ೧೮೫ ಸೆಂ.ಮೀ. ಉದ್ದದ ದೇಹವನ್ನು ಬಗ್ಗಿಸಿ ಬಲಕೆನ್ನೆಗೊಂದು ಸೋಕಿ ಸೋಕದಂತಹ ಹೂ ಮುತ್ತುಕೊಟ್ಟು, ತುಟಿಗಳ ಕಡೆ ನೋಡುತ್ತಾನೆ. 'ರಾತ್ರಿ ಸತಾಯಿಸಿದ್ದಕ್ಕೆ ಕ್ಷಮಿಸಿ' ಎಂದ ಪ್ರಾಚಿ ಲಘುವಾದ ಒಂದು ಚುಂಬನ ನೀಡಿ ರಾತ್ರಿಗೆ ನಿನ್ನ ಪೂರ್ತಿ ಖೋಟಾ ತುಂಬಿಕೊಡುತ್ತೇನೆ ಎಂದಳು.

ಆ ಮಾತಿನಿಂದ ಹುರುಪುಗೊಂಡ ಪವನ್ "ಪ್ರಾಚಿ, ಪ್ಲಾಟೋ ಏನೇಳಿದ್ದಾನೆ ಗೊತ್ತ?" ಇಂತಹ ಒಟ್ಟುಗೂಡಿಸಿಕೊಂಡ ತತ್ವಜ್ಞಾನಿಗಳ ಮಾತುಗಳನ್ನ ಕೇಳಬೇಕೆಂದರೆ ಬಹಳ ತವಕಿಸುವ ಪ್ರಾಚಿ 'ಏನೆಂದು' ಎಂದಳು ಕಾತುರವಾಗಿ.

"The soul which has seen most truth shall come to the earth as a lover" ಎಂದ. "ಹಾಗೆ ಇನ್ನೇನಂದ..." ಎಂದಳು.

"The soul which has seen truth in the third grade shall be a politician" ಹೇಳಿದ.

ಮುಖವನ್ನು ಒಂದು ಪ್ರಶ್ನೆಯಾಗಿಸಿಕೊಂಡು ನಗಾಡಿದಳು. ಬೆಳಗಿನ ಬಿಗುಮಾನ ಬಿಡಿಬಿಡಿಯಾಗಿ ಬಿಚ್ಚಿಕೊಂಡು ಹಗುರವಾಗಿ ಉಲ್ಲಾಸವಾಗಿ ಹರಿಯತೊಡಗಿತು.

ಪವನ್ ಬೂದುಬಣ್ಣದ ಷರಟಿನ ಮೇಲೆ ೪೫° ಗಳಲ್ಲಿ ಗೆರೆಗಳು ಬಂದಿರುವ ಜೋಡಿಯಾಕ್ ಟೈ ಧರಿಸಿ ಪಿನ್‌ದಿಂದ ಷರ್ಟ್‌ಗೆ ಸಿಕ್ಕಿಸಿಕೊಂಡು ಗ್ರೇ ಬಣ್ಣದ ಸೂಟ್ ಧರಿಸಿ, ತೆಳುವಾಗಿ ಪೌಡರ್ ಲೇಪಿಸಿಕೊಂಡು ತಲೆ ಬಾಚಿಕೊಳ್ಳತೊಡಗಿದ. ಅಷ್ಟರಲ್ಲಿ ಪ್ರಾಚಿ ಪವನ್‌ನ ಬ್ರೀಫ್‌ಕೇಸ್‌ಗೆ ಆಫೀಸಿಗೆ ತೆಗೆದುಕೊಂಡುಹೋಗುವ ವಸ್ತುಗಳೆಲ್ಲವನ್ನೂ ತುಂಬಿ ಪವನ್ ಕೈಗೆ ಕೊಟ್ಟಳು. ಪವನ್ ಒಮ್ಮೆ ತೆಗೆದು ನೋಡಿ ಮುಚ್ಚಿದ.

ದಿನನಿತ್ಯ ಪವನ್ ಪ್ರಾಚಿಗೆ ತನ್ನ ವಿದಾಯ ಕಾಣಿಕೆ ನೀಡುತ್ತಿದ್ದ ರೀತಿಗಿನ್ನ ಇಂದು ಅಪ್ಯಾಯಮಾನವಾಗಿ ತಬ್ಬಿಕೊಂಡು ಚುಂಬಿಸಿ ಅವಳ ತುಟಿಗಳನ್ನು ಮೃದುವಾಗಿ ಸವರಿ, ಹೊರಕ್ಕೆ ಹೆಜ್ಜೆ ಹಾಕಿದ.

"ನೀವು ೫ ಗಂಟೆ ಒಳಗೆ ಮನೆಗೆ ಬರಬೇಕು" ಪ್ರಾಚಿ ಹೇಳಿದಳು. ಪವನ್ "ಖಂಡಿತ ಬರುತ್ತೇನೆ, ಬೈ ಚಾನ್ಸ್ ತಡವಾದರೆ ನೇರವಾಗಿ ಕಲಾಕ್ಷೇತ್ರಕ್ಕೆ ಬರುತ್ತೇನೆ" ಎಂದೇಳಿ ಕಚೇರಿಯ ಅಂಬಾಸಿಡರ್ ಕಾರಿನೊಳಗೆ ಕುಳಿತುಕೊಂಡು, ಸೀದಾ ಬ್ರೈನಾಬ್ಯಾಂಕ್ ಕಡೆ ಕಾರನ್ನೋಡಿಸುವಂತೆ ಡ್ರೈವರ್‌ಗೆ ತಿಳಿಸಿದ. ಪ್ರಾಚಿ ಬೆಂಟ್ಲಿ ತೆಗೆದುಕೊಂಡು ಪಾರ್ಲರ್ ಕಡೆ ಓಡಿಸಿದಳು.

ಬ್ರೈನ್‌ಬ್ಯಾಂಕ್ ಎನ್‌ಸೈಕ್ಲೋಪೀಡಿಯಾದಿಂದ ಪವನ್ ಇರುವ ಕಾರು ಬೆಂಗಳೂರಿನ ಮುಖ್ಯ ರಸ್ತೆಗಳಲ್ಲಿ ಸಾಗುತ್ತಾ ಕೊನೆಗೆ ತನ್ನ ಕಚೇರಿ ಇರುವ ಸ್ಥಳ ತಲುಪಿತು. ಬ್ರೀಫ್‌ಕೇಸ್ ತೆಗೆದುಕೊಂಡ ಪವನ್ ಲಿಫ್ಟ್ ಮುಖಾಂತರ ತನ್ನ ಕೋಣೆ ಸೇರಿಕೊಂಡು, ಅಲ್ಲಿನ ತನ್ನ ಕೆಳಗಿನ ಅಧಿಕಾರಿಗಳಿಗೆ ಅಂದಿನ ಕೆಲಸದ ಬಗ್ಗೆ ಆದೇಶಿಸಿ ಮತ್ತೆ ಇನ್ನೊಂದು ಅಂತಸ್ತಿನಲ್ಲಿರುವ ಪರ್ಸನಲ್ ಅಧಿಕಾರಿಯ ಕೋಣೆಯ ಕಡೆ ನಡೆಯತೊಡಗಿದ.

ಈಗಾಗಲೇ ಸಂದರ್ಶನ ನಡೆಯುವ ಹಾಲಿನಲ್ಲಿ ಸುಮಾರು ೧೦ ಜನ, ಅದರಲ್ಲಿ ೪ ಯುವತಿಯರು ಮತ್ತು ೬ ಯುವಕರು ಕಾಯುತ್ತಿದ್ದಾರೆ. ಸಂದರ್ಶನಕ್ಕೆ

ಮುಂಚೆಯೇ ಅವರ ಎಲ್ಲಾ ಹಿನ್ನಲೆ ಮತ್ತು ಅನುಭವಗಳನ್ನು ಶೇಖರಿಸಿ ಕೆಲವರನ್ನು ಮಾತ್ರ ಸಂದರ್ಶನಕ್ಕೆ ಕರೆದಿದ್ದಾರೆ. ಅದರಲ್ಲಿ ಇಬ್ಬರು ಯುವತಿಯರ ಭಾವಚಿತ್ರಗಳು ಈಗಾಗಲೇ ಕಂಪನಿಯ ಅಧಿಕಾರಿಗಳಲ್ಲಿ ತುಸು ಕಂಪನವೆಬ್ಬಿಸಿವೆ. ಎಲ್ಲಾ ಕಂಪನಿಗಳಲ್ಲೂ ಅದರಲ್ಲೂ ಖಾಸಗೀ ಕಂಪನಿಗಳಲ್ಲಿ ಸೂಕ್ಷ್ಮ ಮತ್ತು ಚುರುಕು ಬುದ್ಧಿಯ ಜೊತೆ ರೂಪವು ಮುಖ್ಯವಾದುದರಿಂದ ಅಂದವಾದ ಹೆಣ್ಣುಗಳಿಗೆ ಹೆಚ್ಚು ಪ್ರಧಾನ್ಯತೆ ದೊರಕುತ್ತದೆ.

ಕಂಪನಿಯ ಖಾಸಗಿ ಅಧಿಕಾರಿಯ ಎಡಭಾಗದಲ್ಲಿ ಪವನ್ ಕುಳಿತಿದ್ದು, ಬಲಗಡೆ ಮುಖ್ಯ ಸೇಲ್ಸ್ ಅಧಿಕಾರಿ ಕುಳಿತಿದ್ದಾನೆ. ಮೂವರು ಒಬ್ಬರನ್ನೊಬ್ಬರು ನೋಡಿಕೊಂಡರು. ಖಾಸಗಿ ಅಧಿಕಾರಿ ಕರೆಗಂಟೆ ಒತ್ತಿದ. ಹೊರಗಡೆಯೇ ಕಾದಿದ್ದ ಆಳು ಬಾಗಿಲನ್ನು ತಳ್ಳಿ ಒಳಕ್ಕೆ ಬಂದ.

ಪವನ್ ಹೇಳಿದ ಹೆಸರನ್ನು ಆಳು ಹೊರಗೆ ಹೇಳಿದ. ಒಬ್ಬೊಬ್ಬರಾಗಿ ಒಳಗಿಂದ ಹೊರಕ್ಕೆ, ಹೊರಗಡೆಯಿಂದ ಒಳಕ್ಕೆ ಬರತೊಡಗಿದರು. ಈಗ ಪವನ್ ಗಂಟೆ ಬಾರಿಸಿ ಮಿಸ್ ರುಚಿ ಎಂದ. ಆಳು ಬಾಗಿಲಲ್ಲಿ ನಿಂತು ಮತ್ತೆ ಅದೇ ಹೆಸರನ್ನು ಕರೆದ.

ಮಿಸ್ ರುಚಿ ಜೊತೆಯಲ್ಲಿ ತಂದಿದ್ದ ಸರ್ಟಿಫಿಕೇಟ್‌ಗಳ ಫೈಲೊಂದನ್ನು ಕೈಯಲ್ಲಿಡಿದುಕೊಂಡು ಕೋಣೆಯ ಕಡೆ ನಡೆಯತೊಡಗಿದಳು. ಕೈಯಲ್ಲಿ ಹಾಗೇ ಒಂದು ಸಣ್ಣ ಹಣದ ಪರ್ಸ್ ಕೂಡ ಇದೆ.

'ಮೇ ಐ ಕಮಿನ್ ಸರ್' ಎನ್ನುತ್ತ ರುಚಿ ಬಾಗಿಲು ತಳ್ಳಿ ಒಳಬಂದಳು. 'ದಯವಿಟ್ಟು ಬನ್ನಿ' ಎಂದು ಮಧ್ಯೆ ಕೂತಿರುವ ದಢೂತಿ ಚಶ್ಮಾಧಾರಿ ಒಳಕ್ಕೆ ಆಹ್ವಾನಿಸಿದ. ಪವನ್ ಏನೋ ಬರೆದು ಮುಗಿಸಿ ತಲೆ ಎತ್ತಿ ರುಚಿಯ ಕಡೆ ನೋಡಿದ. ಅವನ ಏಕಾಗ್ರತೆಯ ಕೊಂಡಿ ಎಲ್ಲಿಯೋ ಒಮ್ಮೆ ಕಳಚಿಕೊಂಡು ಮತ್ತೆ ಜೋಡಣೆಯಾಯಿತು.

"ಒಳ್ಳೆ ಸೆಕ್ಸ್ ಅಪೀಲ್ ಇರುವ ಮುಖ" ಭಾವನೆಗಳನ್ನು ಅಪರೂಪವಾಗಿ ಪ್ರದರ್ಶಿಸಬಲ್ಲ ಸುಂದರ ಕಣ್ಣುಗಳು. ಒಂದೇ ನೋಟಕ್ಕೆ ಪವನ್‌ನ ಕಣ್ಣುಗಳ ಹಿನ್ನೆಲೆಯಲ್ಲಿ ಅರ್ಥಮಾಡಿಕೊಂಡವಳಂತೆ ಸೆರಗನ್ನು ತುಸು ಸರಿಪಡಿಸಿಕೊಂಡು, ಎದೆಯ ತುಂಬ ಉಸಿರನ್ನು ತುಂಬಿಕೊಂಡು ಎದೆಗಳ ಭಾರವನ್ನು ಜಾಸ್ತಿ ಮಾಡಿಕೊಂಡಳು.

ಇಷ್ಟು ಸಣ್ಣ ವಯಸ್ಸಿನಲ್ಲೇ ಸಂದರ್ಶನ ಕಮಿಟಿಯಲ್ಲಿ ಸೇರಬೇಕಾದರೆ ಒಳ್ಳೇ ಚತುರಗಾರನೆ ಅಲ್ಲದೆ ಹೆಚ್ಚು ಪ್ರಶ್ನೆಗಳನ್ನು ಇವನೇ ಕೇಳಬಹುದೆಂದು ಊಹಿಸಿಕೊಂಡು ಬಿಟ್ಟಳು ರುಚಿ ಮನದಲ್ಲೆ.

ತೋರಿಸಿದ ಕುರ್ಚಿಯಲ್ಲಿ ಕುಳಿತು ಮೂವರು ಗಂಡಸು ಅಧಿಕಾರಿಗಳ ಎದುರಿಗೆ ಒಮ್ಮೆಲೆ ಧೈರ್ಯ ತಂದುಕೊಂಡು ಮನಸ್ಸನ್ನು ಸ್ವಲ್ಪ ಹಗುರವಾಗಿಸಿಕೊಳ್ಳಲು ಪ್ರಯತ್ನಿಸಿದಳು. ಕಂಪನಿ ಖಾಸಗಿ ಅಧಿಕಾರಿ ಪವನ್ ಕಡೆ ನೋಡುತ್ತ, "ಎಸ್ ಪ್ಲೀಸ್" ಎಂದ. ರುಚಿಯ ಫೈಲನ್ನು ಪವನ್ ಕೈಗೆ ತೆಗೆದುಕೊಳ್ಳುತ್ತಾ "ಯು ಆರ್ ಮಿಸ್ ರುಚಿ, ಎಂ.ಎ., ಜಿಯಾಗ್ರಫಿ ಆಂಡ್ ಐ.ಸಿ.ಡಬ್ಲ್ಯೂ" ಎಂದ. ರುಚಿ ತುಟಿಗಳ ಮೇಲೆ ನಗುವನ್ನು ಮೂಡಿಸಿಕೊಳ್ಳುತ್ತಾ 'ಎಸ್' ಎಂದಳು.

"ನಿಮಗೆ ಗೊತ್ತೇಯಿದೆ ಅನ್ನಿಸುತ್ತೆ. ಬರೀ ನಮ್ಮ 'ಸಬ್ಜೆಕ್ಟ್' ಅಲ್ಲ. ಕೆಲವು ಬೇರೆ ಬೇರೆ ಪ್ರಶ್ನೆಗಳನ್ನೂ ಇಂದಿನ ಪೃಥ್ವಿಯ ಚಟುವಟಿಕೆಗಳ ಬಗ್ಗೆಯೂ ಕೇಳುತ್ತೇವೆ" ಎಂದ ಸೇಲ್ಸ್ ಅಧಿಕಾರಿ. "ನಾನು ಸ್ವಾಗತಿಸುತ್ತೇನೆ" ರುಚಿ ಹೇಳಿದಳು.

"ಪೃಥ್ವಿಯ ಅತ್ಯಂತ ಹಳೆಯ ಅಕ್ಷರ ಮತ್ತು ಇಂಗ್ಲಿಷ್ ಭಾಷೆಯಲ್ಲಿ ಹೆಚ್ಚೆಚ್ಚಾಗಿ ಸಾಮಾನ್ಯವಾಗಿ ಉಪಯೋಗಿಸುವ ಅಕ್ಷರ ಯಾವುದು ?"

'O' ಮತ್ತು 'E' ಅಕ್ಷರ, 'ಗುಡ್'.

"ಬರ್ಮುಡಾ ತ್ರಿಕೋನದ ವಿಶೇಷವೇನು ? ಈ ತ್ರಿಕೋನಗಳಲ್ಲಿರುವ ಮೂರು ನಗರಗಳ್ಯಾವುವು?"

"ಈ ತ್ರಿಕೋನದಲ್ಲಿ ಇದುವರೆವಿಗೂ ಹಲವಾರು ಜನರ ಪ್ರಾಣ, ವಿಮಾನಗಳು ಮತ್ತು ಹಡಗುಗಳು ಆಶ್ಚರ್ಯದ ರೀತಿಯಲ್ಲಿ ಮಾಯವಾಗಿದೆ. ಇನ್ನು ತ್ರಿಕೋನದ ನಗರಗಳು ಫ್ಲೋರಿಡಾ ಬೆರ್‌ಮುಡಾ ಮತ್ತು ಪ್ರೊಟೊರಿಕೊ".

"ಗುಡ್"

"ತಲೆ ಕೂದಲಿನಲ್ಲೇನಿರುತ್ತದೆ ?"

"ಕಪ್ಪು ಪಿಗ್ಮೆಂಟ್ ಜೊತೆಗೆ ಕತ್ತಲಲ್ಲೂ ಹೊಳೆಯುವಷ್ಟು ವಿದ್ಯುತ್ ಶಕ್ತಿಯ ಹೊಳಪಿರುತ್ತದೆ".

ಆ ಪ್ರಶ್ನೆಗೆ ಉತ್ತರ ಸರಿಯೋ, ತಪ್ಪೋ ತನಗೆ ಗೊತ್ತಿಲ್ಲದೆ, ಉತ್ತರ ಕೊಟ್ಟ ರೀತಿಗೆ ಸರಿಯೇ ಇರಬೇಕೆಂದು 'ವೆರಿಗುಡ್' ಎಂದ.

ಈ ಪ್ರಶ್ನೆಗಳ ಜೊತೆಜೊತೆಗೆಯೇ ಸೇಲ್ಸ್ ಅಧಿಕಾರಿ ವ್ಯಾಪಾರದ ಬಗ್ಗೆ ಪ್ರಶ್ನೆಗಳನ್ನು ಕೇಳುತ್ತಿದ್ದಾನೆ.

"ಈ ಭೂಮಿ ಒಂದು ಚೌಕಾಕಾರದ ಕಾಗದವೆಂದುಕೊಳ್ಳೋಣ. ಆ

ಕಾಗದವನ್ನು ಸಮವಾಗಿ ಎಷ್ಟು ಮಡಿಸಬಹುದು ಐ ಮೀನ್ 'ಫೋಲ್ಡ್' ಮಾಡಬಹುದು ?"

"ಕೇವಲ ೮ ಸಲ ಎಂದಳು ರುಚಿ.

ಪವನ್ ತನ್ನ ಬ್ರೈನ್ ಬ್ಯಾಂಕ್ ಜ್ಞಾಪಕ ಬಂದರು ಸುಮ್ಮನೆ ನೋಡುತ್ತಲೇ ಇದ್ದ. ಖಾಸಗಿ ಅಧಿಕಾರಿ ಮೆಲ್ಲಗೆ ಪವನ್ ಕಡೆ ನೋಡಿದ. ಅವನಿಗೆ ಬಹಳ ಕ್ಲಿಷ್ಟವಾದ ಪ್ರಶ್ನೆಗಳನ್ನು ಕೇಳುವುದು ಸರಿ ಎನಿಸಲಿಲ್ಲ.

"ನೀವು ಭೂಗೋಳಶಾಸ್ತ್ರವಲ್ಲದೆ" ಎಂದಿದ್ದೆ ತಡ "ಹೌದು" ಎಂದಳು. ಪವನ್‌ನ ಬಾಯಲ್ಲಿರುವ ಪ್ರಶ್ನೆ ಆದಷ್ಟು ಬೇಗ ಹೊರಬೀಳಲಿ ಎನ್ನುವುದೇ ಅವಳ ಆತುರ.

"ಮಹಾರಾಷ್ಟ್ರದ ಲೂನಾರ್ ಸರೋವರ, ಹಿಮಾಲಯದ ಮಾನಸ ಸರೋವರ ಮಣೀಪುರದ ಲೋಕ್‌ಟಕ್ ಸರೋವರ ಗಳಿಗಿರುವ ವ್ಯತ್ಯಾಸ ಏನು ?"

ಲೂನಾರ್ ಸರೋವರ ಬಹುಶಃ ಭೂಮಿಗೆ ಬಂದು ಬಡಿದ ಉಲ್ಕಾಶಿಲೆಯಿಂದ ಆಗಿರಬೇಕು? ಮಾನಸ ಸರೋವರ ಭೂಮಿಯ ಅತಿ ಎತ್ತರದಲ್ಲಿರುವುದಲ್ಲದೆ, ನಮ್ಮ ಪುರಾಣದ ಶಿವ ಪಾರ್ವತಿ... ಹೀಗೆ ಹೇಳುತ್ತಿದ್ದಂತೆ ತಡೆಹಾಕಿದ ಪವನ್ "ಇನ್ನೊಂದು ಪ್ರಶ್ನೆ" ಎಂದ.

ಒಬ್ಬ ೩೦ ಕಿಲೋ ತೂಕದ ಒಂದು ವಸ್ತುವನ್ನು ಸಾಗಿಸುತ್ತಿದ್ದಾನೆ. ಆ ವಸ್ತು ಕೆಳಕ್ಕೆ ಬಿದ್ದು ಒಡೆದುಹೋಯಿತು ೫ ತುಂಡುಳಾಗಿ. ಅಲ್ಲಿ ಎಲ್ಲವನ್ನು ಬಹಿರಂಗವಾಗಿ ಮಾರಲು ಪ್ರಾರಂಭಿಸಿದ ಮನುಷ್ಯ, ಬಂದವರಿಗೆಲ್ಲ ೧ ರಿಂದ ೩೦ ಕಿಲೋದೊಳಗೆ ಎಷ್ಟು ಕಿಲೋ ಕೇಳಿದರು ಎತ್ತಿ ತೋರಿಸುತ್ತಿದ್ದಾನೆ. ಹಾಗಾದರೆ ಒಡೆದಿರುವ ೫ ತುಂಡುಗಳ ಒಂದೊಂದರ ತೂಕವೆಷ್ಟು ?

'ಒಂದು ನಿಮಿಷ' ಎಂದು ರುಚಿ ಬಿಳಿ ಹಾಳೆಯೊಂದನ್ನು ಕೈಗೆ ತೆಗೆದುಕೊಂಡು ಲೆಕ್ಕ ಹಾಕಿ ನಿಮಿಷದೊಳಗೆಯೇ ಹೇಳಿದಳು. ಉತ್ತರ ೧, ೨, ೪, ೮ ಮತ್ತು ೧೫ ಕಿಲೋಗಳ ತುಂಡುಗಳು.

ಪವನ್‌ನ ಬ್ರೈನ್ ಬ್ಯಾಂಕ್ ಎಲ್ಲೋ ಸೋರಿಹೋದಂತೆ ಕಾಣಿಸಿತು. ಇನ್ನೊಂದು ಪ್ರಶ್ನೆ 'ಚೆಸ್ ಬೋರ್ಡ್' ಕಂಡಿಡಿದವರು ಯಾರು ಗೊತ್ತೆ? ಹೆಸರು ಗೊತ್ತಿಲ್ಲ, ಪುರಾಣ ಭಾರತದ ರಾಜರ ಆಸ್ಥಾನದಲ್ಲಿದ್ದ ಒಬ್ಬ ಮಂತ್ರಿ ಆ ಮಂತ್ರಿ ೬೪ ಚೌಕಗಳಲ್ಲಿ ನಡೆಯುವ ಕಾಳಗವನ್ನು ರಾಜನಿಗೆ ತೋರಿಸಿದಾಗ ರಾಜ ಬಹಳ ಖುಷಿಯಿಂದ ನೀನು ಇಷ್ಟಪಡುವ ವಸ್ತುವನ್ನು ಕೇಳು ಎನ್ನುವಂತೆ ಸೂಚಿಸಿದ. ಮಂತ್ರಿ

ಕೇಳಿದ್ದೇನು ಗೊತ್ತೆ...? ಒಂದನೇ ಚೌಕಕ್ಕೆ ಒಂದು ಗೋದಿ ಕಾಳು, ಎರಡನೇ ಚೌಕಕ್ಕೆ ಎರಡು ಗೋದಿಕಾಳು, ಮೂರಕ್ಕೆ ನಾಲ್ಕು ಕಾಳು, ನಾಲ್ಕಕ್ಕೆ ಎಂಟುಕಾಳು ಹೀಗೆ ೬೪ ಚೌಕಗಳಿಗೆ ಆಗುವ ಕಾಳುಗಳನ್ನು ಕೊಡುವಂತೆ ಕೇಳುತ್ತಾನೆ. ಅಂದರೆ ರಾಜ ಎಷ್ಟು ಕಾಳು ಕೊಡಬೇಕಾಗುತ್ತದೆ?

ಸ್ವಲ್ಪ ರಿಯಾಕ್ಟ್ ಆದಂತೆ ರುಚಿ ಪವನ್ ಕಡೆ ನೋಡಿದಳು. ಪವನ್ ಸುಮ್ಮನೆ ನೋಡತೊಡಗಿದ. 'ಉತ್ತರ ಕೊಡಬಲ್ಲೆ, ಆದರೆ ನನಗೆ ಕೆಲವು ದಿನಗಳ ಸಮಯ ಬೇಕೆಂದಳು', ರುಚಿ.

ಪವನ್ ಒಮ್ಮೆ ನಕ್ಕು "ವೆರಿಗುಡ್ ವೆಲ್‌ಡನ್ ನೀವು ಅದಕ್ಕೆ ಉತ್ತರ ಕೊಡದಿದ್ದರೂ ನಿಮಗೆ ಅಂಕ ಕೊಡಲಾಗುತ್ತದೆ" ಎಂದ. ಈಗ ನೀವು ಹೋಗಬಹುದು ಎಂದರು ಖಾಸಗಿ ಅಧಿಕಾರಿ. ರುಚಿ 'ವಂದನೆಗಳು' ಎನ್ನುತ್ತಾ ಪವನ್ ಕಡೆಗೊಮ್ಮೆ ನೋಡಿ ಹೊರನಡೆದಳು.

ಗಂಟೆ ಒತ್ತಿ, 'ಮಿಸೆಸ್ ಆಕಾಶ್' ಎಂದ ಪವನ್. ಬಾಗಿಲಲ್ಲಿ ನಿಂತಿದ್ದ ಆಳು ಮಿಸೆಸ್ ಆಕಾಶ್ ಎಂದ ತಕ್ಷಣ, ಮಿಸೆಸ್ ಆಕಾಶ್ ಫೈಲೊಂದನ್ನು ಕೈಯಲ್ಲಿಡಿದು ಹೆಗಲಲ್ಲಿ ವ್ಯಾನಿಟಿ ಬ್ಯಾಗೊಂದನ್ನು ತೂಗುಹಾಕಿಕೊಂಡು "ಎಕ್ಸ್‌ಕ್ಯೂಸ್ಮಿ" ಎನ್ನುತ್ತಾ ಬಾಗಿಲನ್ನು ತಳ್ಳಿ ಒಳಕ್ಕೆ ಬಂದು ಖಾಸಗಿ ಅಧಿಕಾರಿ ತೋರಿಸಿದ ಕುರ್ಚಿಯಲ್ಲಿ ಕುಳಿತುಕೊಂಡಳು. ಏನೋ ಬರೆದು ಮುಗಿಸಿದ ಪವನ್ ತಲೆ ಎತ್ತಿ ನೋಡಿದ. ಸಾಕಷ್ಟು ಸೆಕ್ಸ್ ಜೀವನ ಅನುಭವಿಸಿದ ಎದೆಗಳು, ತಿಳಿಗೆಂಪು ಹಚ್ಚಿಕೊಂಡಿರುವ ಮೋಹದ ದಪ್ಪನೆ ತುಟಿಗಳು.

ದಪ್ಪದ ತುಟಿಗಳನ್ನು ನೋಡಿದ ತಕ್ಷಣ ಪವನ್‌ಗೆ ಅಮೇರಿಕದ ಇತ್ತೀಚಿನ ಕೆಲವು ಮಾಡೆಲ್‌ಗಳ ಚಿತ್ರಗಳು ಕಣ್ಣೆದುರಿಗೆ ಬಂದವು. ಸೂಕ್ಷ್ಮವಾದ ದಪ್ಪದ ತುಟಿಗಳು ಮತ್ತು ಅವರ ಎತ್ತರ ಸಾವಿರಾರು ಡಾಲರ್‌ಗಳನ್ನು ಸಂಪಾದಿಸಿಕೊಡುವ ಆ ಮಾಡೆಲ್‌ಗಳ ಆಸ್ತಿ. ಸಾಕಷ್ಟು ಶಾಂತ ತುಂಬಿಕೊಳ್ಳಬಲ್ಲ ಮುಖ.

"ಯು ಆರ್ ಮಿಸೆಸ್ ಆಕಾಶ್, ಎಂ.ಎಸ್ಸಿ, ಭೌತಶಾಸ್ತ್ರ ?"

ಹೌದು ಎಂದಳು ಆಕೆ ರೂಢಿಯಾದಂತೆ ಸಾಮಾನ್ಯವಾಗಿ.

"ಚಂದ್ರನ ಮೇಲೆ ಎತ್ತರವಾದ ಬೆಟ್ಟಗಳಾವುವು ? ಎತ್ತರವೆಷ್ಟು ?"

"ಲೀಸಾರ್ ಬೆಟ್ಟಗಳು, ೨೫,೬೮೬ ಅಡಿಗಳು"

"ಭೂಮಿ ಒಂದು ಗಂಟೆಗೆ ೧೦೦೦ ಕಿ.ಮೀ. ವೇಗದಲ್ಲಿ ಸುತ್ತುತ್ತದೆಂದು ಕೊಳ್ಳೋಣ. ಢಾಕಾದಿಂದ ಕಲ್ಕತ್ತಾಗೆ ೫೦೦ ಕಿ.ಮೀ. ದೂರವಿದೆ. ಭೂಮಿ

ಪೂರ್ವದಿಂದ ಪಶ್ಚಿಮಕ್ಕೆ ಸುತ್ತುತ್ತಿದೆ. ಢಾಕಾದಿಂದ ಹೊರಡುವ ವಿಮಾನ (ಭಾರತದ ಕಾಲಮಾನದ ಪ್ರಕಾರ) ಸಾಯಂಕಾಲ ೪ ಗಂಟೆಗೆ ಹೊರಟು ಕಲ್ಕತ್ತಾಗೆ ೪.೪೫ ಗಂಟೆಗೆ ತಲುಪುತ್ತದೆ. ಅಂದರೆ ಆ ವಿಮಾನ ಒಂದು ನಿಮಿಷಕ್ಕೆ ಎಷ್ಟು ಕಿ.ಮೀ. ವೇಗದಲ್ಲಿ ಸಾಗುತ್ತದೆ'?

ಅರೆಘಳಿಗೆ ಯೋಚಿಸಿ, ಕಾಗದ ತೆಗೆದುಕೊಂಡು ಲೆಕ್ಕಾಚಾರ ಮಾಡತೊಡಗಿದಳು. ಸೆಕೆಂಡುಗಳು ಉರುಳಿ ಒಂದು ನಿಮಿಷಕ್ಕೆ ಹತ್ತಿರವಾಗುತ್ತಾ ಬಂತು. ಕೋಣೆ ನಿಶ್ಯಬ್ದವಾಗಿದೆ.

ಪವನ್ "ಇನ್ನೊಂದು ಪ್ರಶ್ನೆ" ಎಂದ. ಅಷ್ಟರಲ್ಲಿ ಮಿಸೆಸ್ ಆಕಾಶ್ "೧೧.೧೧ ಕಿ.ಮೀ." ಎಂದಳು. ಪವನ್ ಪರವಾಗಿಲ್ಲ ಎಂದುಕೊಂಡು, "ಭೂಮಿಯ ವೇಗ (೧೦೦೦ ಕಿ.ಮೀ) ಇದರಲ್ಲಿ ಏನೂ ಪ್ರಭಾವ ಬೀರುವುದಿಲ್ಲವೆ", ಎಂದು ನಕ್ಕ.

ಜೊತೆ ಜೊತೆಯೇ ಸೇಲ್ಸ್ ಅಧಿಕಾರಿ ವ್ಯಾಪಾರದ ಬಗ್ಗೆ ಪ್ರಶ್ನೆಗಳನ್ನು ಕೇಳುತ್ತಲೇ ಇದ್ದಾನೆ. "ಇನ್ನೊಂದು ಕೊನೆ ಪ್ರಶ್ನೆ", ಎಂದ ಪವನ್.

"ಭೂಮಿಯಿಂದ ಚಂದ್ರನಿಗೆ ಅಂದರೆ ಮೇಲ್ಮೈನಿಂದ ಮೇಲ್ಮೈಗೆ ಇರುವ ದೂರವೆಷ್ಟು?" "೩೭,೪೦,೯೯೨ ಕಿಲೋಮೀಟರು" "ಗುಡ್" "ಒಂದು ಕಾಗದದ ದಪ್ಪ ೦.೧ ಸೆ.ಮೀ ಇದೆ ಎಂದುಕೊಳ್ಳೋಣ. ಅದನ್ನು ಸಮವಾಗಿ ಮತ್ತೆ ಸಮವಾಗಿ ಮಡಚುತ್ತಾ ಹೋದರೆ ಭೂಮಿಯಿಂದ ಚಂದ್ರನಿಗೆ ತಲುಪಲು ಎಷ್ಟು ಸಲ ಮಡಚಬೇಕಾಗುತ್ತದೆ?"

ಮಿಸೆಸ್ ಆಕಾಶ್ ಮತ್ತೆ ಕಾಗದ ತೆಗೆದುಕೊಂಡು ಲೆಕ್ಕಾಚಾರ ಹಾಕತೊಡಗಿದಳು. ಸೆಕೆಂಡುಗಳು ಉರುಳಿ ನಿಮಿಷವಾಗುತ್ತಾ ಬಂತು. ಉತ್ತರ ಹೇಳಿದಳು.

"ವೆಲ್‌ಡನ್ ಮಿಸೆಸ್ ಆಕಾಶ್, ನೀವೀಗ ಹೋಗಬಹುದು ದಯವಿಟ್ಟು" ಎಂದರು ಖಾಸಗಿ ಅಧಿಕಾರಿ. ಮಿಸೆಸ್ ಆಕಾಶ್ ಎಲ್ಲರಿಗೂ ನಮಸ್ಕರಿಸಿ ಹೊರಕ್ಕೆ ನಡೆದಳು.

ಗಂಟೆ ೪.೩೦ ಆದರೂ ಪವನ್ ಮನೆಗೆ ಬರಲಿಲ್ಲ.

ಪ್ರಾಚಿ ಧಾರಾಕಾರವಾದ ಬಿರುಗಾಳಿ ಮಳೆ ಬೀಳುತ್ತಿರುವಾಗ ತನ್ನ ಜೊತೆ ಹಕ್ಕಿಗಾಗಿ ಗೂಡಿನಲ್ಲಿ ಕಾದಿರುವ ಹೆಣ್ಣಕ್ಕಿಯಂತೆ ಪೇಚಾಡುತ್ತಿದ್ದಾಳೆ. ಗೋಡೆಯ ಗಡಿಯಾರದಲ್ಲಿನ ಮುಳ್ಳುಗಳು ಸಮಯವನ್ನು ಅಟ್ಟಿಸಿಕೊಂಡೋಗುತ್ತಿವೆ. ಬೀದಿಯಲ್ಲಿ ಹೋಗುವ ಪ್ರತಿಯೊಂದು ಕಾರನ್ನು ನೋಡುತ್ತಿದ್ದಾಳೆ.

ಮನಸ್ಸನ್ನು ಸ್ವಲ್ಪ ತಾಳ್ಮೆಗೆ ತಂದುಕೊಂಡು ತನಗೆ ಬೇಕಾಗಿರುವ ವಸ್ತುಗಳೆಲ್ಲವನ್ನು ತೆಗೆದುಕೊಂಡು ಕಾರನ್ನು ಪೋರ್ಟಿಕೋದಿಂದ ಹೊರಕ್ಕೆ ಓಡಿಸಿದಳು. ಕಾರು ಓಡುತ್ತಿದ್ದಂತೆ ಮನಸ್ಸು ಸ್ವಲ್ಪ ಹಗುರವಾಯಿತು. ಕಾರು ರವೀಂದ್ರ ಕಲಾಕ್ಷೇತ್ರದ ಹಜಾರದೊಳಕ್ಕೆ ಪ್ರವೇಶಿಸುತ್ತದೆ. ಆಗಲೇ ಹಲವು ವಾಹನಗಳು ಅಲ್ಲಿ ನಿಂತಿವೆ.

ಪ್ರಾಚಿ ತಾನೆ 'ಮಿಸ್ ಬೆಂಗಳೂರು' ಎಂಬಂತೆ ವಯ್ಯಾರವಾಗಿ ಇಳಿದು ಕಲಾಕ್ಷೇತ್ರದ ಮೆಟ್ಟಿಲು ಹತ್ತಲು ಪ್ರಾರಂಭಿಸುತ್ತಾಳೆ. ಆಗ ಪವನ್‌ನ ಕಾರು ಕಲಾಕ್ಷೇತ್ರದ ಹಜಾರದೊಳಕ್ಕೆ ನುಗ್ಗಿ ಬರುತ್ತದೆ. ಈಗ ಇಬ್ಬರು ಒಳಕ್ಕೆ ನಡೆದುಬರುತ್ತಾರೆ.

ಪ್ರಾಚಿಯ ಮನಸ್ಸು ಈಗ ಇನ್ನಷ್ಟು ಅಂದವಾಗಿ ಅರಳಿಕೊಂಡಿತು. ಕಲಾಕ್ಷೇತ್ರದ ಇನ್ನೊಂದು ಕೋಣೆಯಲ್ಲಿ ಈಗಾಗಲೇ ಸ್ಪರ್ಧೆಗೆ ಬಂದಿರುವ ಎಲ್ಲಾ ರೂಪದರ್ಶಿಯರ ಹಿನ್ನೆಲೆ ಅಂದರೆ ತೂಕ, ಎತ್ತರ, ಬಣ್ಣ, ಪ್ರತಿಯೊಂದು ಅಂಗದ ಅಳತೆ ಹೀಗೆ ಎಲ್ಲಾ ರೀತಿಯ ವಿವರಗಳನ್ನು ಒಟ್ಟುಗೂಡಿಸಿ ಮೊದಲನೆಯ ಅಂಕಪಟ್ಟಿಯನ್ನು ತಯಾರು ಮಾಡಿಯಾಗಿದೆ. ಇನ್ನು ಉಳಿದಿರುವುದು ವೇದಿಕೆಯ ಮೇಲೆ ಅವರು ನಡೆದು ಬರುವ ರೀತಿ ತೋರಿಸುವ ಲಾವಣ್ಯನೋಟ. ಪ್ರಶ್ನೆಗಳಿಗೆ ಉತ್ತರ, ಕೊನೆಯದಾಗಿ ನ್ಯಾಯಧೀಶರ ತೀರ್ಮಾನ.

ವೇದಿಕೆಯ ಮೇಲೆ ಮುಖ್ಯ ಅತಿಥಿಯಾಗಿ ಬೆಂಗಳೂರಿನ ನಗರಾಧ್ಯಕ್ಷ, ಸಭಾಧ್ಯಕ್ಷರಾಗಿ ಒಬ್ಬ ಖ್ಯಾತ ಕನ್ನಡ ನಟಿ ಮತ್ತು ಸೌಂದರ್ಯ ಸ್ಪರ್ಧೆಯ ನ್ಯಾಯಾಧೀಶರು ಈಗಾಗಲೇ ಹಾಜರಿಯಾಗಿದ್ದಾರೆ. ಇನ್ನು ಮುಂದಿನ ಸಾಲುಗಳಲ್ಲಿ ಹಲವು ನಟನಟಿಯರು, ಕವಿಗಳು, ಉದ್ಯಮಶೀಲರು, ವರದಿಗಾರರು ಸೌಂದರ್ಯ ಆರಾಧಕರು ಇನ್ನೂ ಅನೇಕ ಜನರ ವೇದಿಕೆಯ ಕಡೆ ನೋಡುತ್ತಾ ಕುಳಿತಿದ್ದಾರೆ. ಫೋಟೋಗ್ರಾಫರ್ಸ್ ಕೂಡಾ ರೆಡಿಯಾಗಿ ಕಾಯುತ್ತಿದ್ದಾರೆ.

ಪ್ರಾಚಿ ಪವನ್ ಎರಡನೇ ಪಂಕ್ತಿಯಲ್ಲಿ ಕುಳಿತಿದ್ದಾರೆ. ಸ್ಪರ್ಧೆ ಪ್ರಾರಂಭವಾಗಿ ರೂಪದರ್ಶಿಯರು ಹಂಸಗಳಂತೆ ಬಹಳ ಲಾವಣ್ಯವಾಗಿ ಒಬ್ಬೊಬ್ಬರಾಗಿ ಮೆಲ್ಲನೆ ನಡೆದುಬರುತ್ತಾ ಭಿನ್ನ ಭಿನ್ನ ಶೈಲಿಗಳಲ್ಲಿ ಮೈಯನ್ನು ಕುಲುಕಿಸುತ್ತಾ ನೋಡುವವರ ಹೃದಯಗಳನ್ನು ತುಟಿಗಳಲ್ಲಿ ತಂದು ನಿಲ್ಲಿಸಿದ್ದಾರೆ. ಫ್ಲಾಶ್‌ಗಳ ಮುಖಾಂತರ ಕ್ಯಾಮರಾಗಳಲ್ಲಿರುವ ರೀಲುಗಳು ತಮಗೆ ಕಾಣುವ ಪ್ರತಿಯೊಂದು ಶೃಂಗಾರ ಅಂಶವನ್ನು ಅಚ್ಚುಮಾಡಿಕೊಳ್ಳುತ್ತಿವೆ. ವಿಡಿಯೋ ಕ್ಯಾಮರಾಗಳಲ್ಲಿರುವ ರೀಲುಗಳು ತಮಗೆ ಕಾಣುವ ಪ್ರತಿಯೊಂದು ಶೃಂಗಾರ ಅಂಶವನ್ನು ಅಚ್ಚುಮಾಡಿಕೊಳ್ಳುತ್ತಿವೆ. ವಿಡಿಯೋ ಕ್ಯಾಮೆರಾಗಳು ಒಂದೇ ಸಮನೆ ಚಿತ್ರಿಸಿಕೊಳ್ಳುತ್ತಿವೆ. ಸುಂದರಿಯರ

ಕೇಶರಾಶಿ ವಿದ್ಯುತ್ತಾಂಶದಿಂದ ಜಗಜಗಿಸುವ ಬೆಳಕಿನಲ್ಲಿ ಇನ್ನಷ್ಟು ಹೊಳೆಯುತ್ತಿವೆ. ಭಾರತದ ಅತಿ ಸುಂದರ ಜೋಡಿ ಕಾಲುಗಳು, ಶ್ರೇಷ್ಠ ಸಂಸ್ಥೆಗಳು, ಭಾವನಾಪೂರ್ಣ ಕಣ್ಣುಗಳು, ನೋಡಿದ ತಕ್ಷಣ ಚುಂಬಿಸಲೆನ್ನುವ ಸೂಕ್ಷ್ಮ ತುಟಿಗಳು ಆಕಾಶದಲ್ಲಿ ಮಿನುಗುವ ಸುಂದರ ನಕ್ಷತ್ರಗಳು ಬೆಂಗಳೂರಿನ ಜನಗಳ ಮುಂದೆ ನಿಂತಿದ್ದಾರೆ.

ನ್ಯಾಯಾಧೀಶರು ಕೊನೆಯ ಅಂಕಿಪಟ್ಟಿಯನ್ನು ಸಭಾಧ್ಯಕ್ಷರಿಗೆ ತಲುಪಿಸುತ್ತಾರೆ. ನೋಡುವ ಜನರೆಲ್ಲಾ ಓ... ಓ... ಎಂದು ಕೂಗುತ್ತಾ ಚಪ್ಪಾಳೆ ತಟ್ಟಲು ಪ್ರಾರಂಭಿಸಿಬಿಟ್ಟಿದ್ದಾರೆ.

ಸಭ್ಯಾಧ್ಯಕ್ಷರು ಎದ್ದುನಿಂತು ವೇದಿಕೆಯ ಮುಂದಕ್ಕೆ ನಡೆದು ಬರುತ್ತಾ ಚೀಟಿಯನ್ನು ಕೈಯಲ್ಲಿಡಿದು ಎರಡೂ ಕೈಯಲ್ಲೂ ನಿಶ್ಯಬ್ದವಾಗಿರಲು ನಗುತ್ತಾ ಕೈಯಾಡಿಸುತ್ತಾರೆ. ರೂಪದರ್ಶಿನಿಯರಿಗಿಂತ ನೋಡುವ ಜನಕ್ಕೆ ಕುತೂಹಲ ಹೆಚ್ಚಾಗಿ ಅರೆ ಘಳಿಗೆ ನಿಶ್ಯಬ್ದವಾಗಿ ವೇದಿಕೆಯ ಕಡೆಗೆ ನೋಡುತ್ತಿದ್ದಾರೆ.

ಪ್ರಾಚಿ ಮತ್ತು ಪವನ್ ಕೂಡ ಕುತೂಹಲದಿಂದ ನೋಡುತ್ತಿದ್ದಾರೆ. ವೇದಿಕೆಯ ಮುಂದೆ ನಿಂತಿರುವ ಸಭಾಧ್ಯಕ್ಷರು, ನೋಡುತ್ತಿರುವ ಜನಗಳ ಹೃದಯಗಳಿಗೆ ತೊಂದರೆಕೊಡುವ ರೀತಿಯಲ್ಲಿ ಇನ್ನೆರಡು ಘಳಿಗೆ ನಗುತ್ತಾರೆ. ನಿಶ್ಯಬ್ದ ಹೊಡೆದೋಗಿ ಮತ್ತೆ ಓ... ಓ... ಎನ್ನುವ ಶಬ್ದ ಪ್ರಾರಂಭವಾಗುತ್ತದೆ. ಈಗ ಸಭಾಧ್ಯಕ್ಷರು ಹೇಳುವ ಹೆಸರು ಶಬ್ದವನ್ನು ಸೀಳಿಕೊಂಡು ಕಲಾಕ್ಷೇತ್ರದ ಗೋಡೆಗಳಿಗೆ ಬಡಿಯುತ್ತದೆ.

“ಮಿಸ್ ರೂಪಾ ಕನ್‌ವಲ್ಕರ್... ಮಿಸ್ ರೂಪಾ ಕನ್‌ವಲ್ಕರ್...?’

ಹೆಸರು ಕೇಳುತ್ತಿರುವ ಜನಗಳಲ್ಲಿ ಇನ್ನಷ್ಟು ವಿದ್ಯುತ್ ಸಂಚಾರವಾಗುತ್ತದೆ. ಈಗ ಹಾಲಿನ ತುಂಬ ವಿದ್ಯುತ್ ದೀಪಗಳು ಬೆಳ್ಳನೆ ಬೆಳಗತೊಡಗುತ್ತವೆ.

ರೂಪಾ “ಮಿಸ್ ಬೆಂಗಳೂರು” ಆಗಿ ವೇದಿಕೆಯ ಮೇಲೆ ಕಿರೀಟವನ್ನು ಧರಿಸಿ ತನ್ನ ಸಂತೋಷವನ್ನು ವ್ಯಕ್ತಪಡಿಸುತ್ತಿದ್ದಾಳೆ.

ಅದೇ ಸಮಯಕ್ಕೆ ಇನ್ನೊಂದು ಮೂಲೆಯಲ್ಲಿರುವ ಒಂದು ಜೋಡಿ ಕಣ್ಣುಗಳು ರೂಪಾ ಕನ್‌ವಲ್ಕರ್‌ಳ ಕಡೆ ಗಮನ ಕೊಡದೆ ಪ್ರಾಚಿಯ ರೂಪವನ್ನು ಆಸ್ವಾದಿಸುವುದರ ಜೊತೆಗೆ ಬೆಕ್ಕಸ ಬೆರಗಾಗಿ ‘ಮಿಸ್ ಯೂನಿವರ್ಸ್’ ಇದೆ. ಹಾಲಿನಲ್ಲಿದ್ದಾಳಲ್ಲ ಎಂದುಕೊಳ್ಳುತ್ತವೆ. ಅವಳ ಅದ್ಭುತ ಸೌಂದರ್ಯಕ್ಕೆ ಆ ಜೋಡಿ ಕಣ್ಣುಗಳು ಕೆಲವು ಕ್ಷಣಗಳು ಕುರುಡಾಗಿಬಿಡುತ್ತವೆ.

ರೂಪಾ, ‘ಮಿಸ್ ಬೆಂಗಳೂರು’ ಎನ್ನುವ ಪಟ್ಟಿಯನ್ನು ಧರಿಸಿ ತಲೆಯ ಮೇಲೆ ಹೊಳೆಯುವ ಮುಕುಟವಿಟ್ಟು, ಮತ್ತೊಮ್ಮೆ ವೇದಿಕೆಯ ಮುಂದಕ್ಕೆ ಬಂದು ಕೈಬೀಸಿ

ಗಾಳಿಗೆ ಚುಂಬಿಸುತ್ತಾಳೆ. ಜನರೆಲ್ಲ ಎದ್ದುನಿಂತು ಇನ್ನಷ್ಟು ಹತ್ತಿರಕ್ಕೆ ಎನ್ನುವಂತೆ ಕೈಬೀಸಿ ಕಣ್ಣುಗಳ ತುಂಬಾ ರೂಪದರ್ಶಿಯನ್ನು ತುಂಬಿಕೊಳ್ಳುತ್ತಾರೆ. ಕ್ಯಾಮೆರಾಗಳು ಬೆಳಕನ್ನು ಚೆಲ್ಲುತ್ತಾ ತಮ್ಮೊಳಗೆ ಚೆಲುವನ್ನು ತುಂಬಿಕೊಳ್ಳುತ್ತವೆ.



ಪವನ್ ಸ್ಟೀರಿಂಗ್ ಹಿಡಿದು ನಡೆಸುತ್ತಿದ್ದಾನೆ. ಬೆಂಟ್ಲಿ ಅಗಲವಾದ ರಸ್ತೆಗಳ ಮೇಲೆ ವಿದ್ಯುತ್ ದೀಪಗಳ ಕೆಳಗೆ ರಾಣಿಯಂತೆ ಸಾಗುತ್ತಿದೆ. ಪ್ರಾಚಿ ಬೆಳಿಗ್ಗೆ ಪವನ್‌ಗೆ ಹೇಳಿದ ಮಾತುಗಳನ್ನು ದಿನವೆಲ್ಲ ಮೆಲುಕು ಹಾಕಿಕೊಂಡಿದ್ದಲ್ಲದೆ ಈಗ ಅದೇ ಮಾತುಗಳನ್ನು ನೆನೆದುಕೊಂಡು ಖುಷಿಯಿಂದ ಕಾರನ್ನು ಓಡಿಸುತ್ತಿದ್ದಾನೆ. ಪ್ರಾಚಿ ಅವನ ಎಡ ಭುಜದ ಮೇಲೆ ಎರಡು ಕೈಗಳನ್ನಿಟ್ಟು ಮರವನ್ನು ಹಬ್ಬಿಕೊಂಡ ಬಳ್ಳಿಯಂತೆ ನೇತಾಡುತ್ತಿದ್ದಾಳೆ. ಇಬ್ಬರೂ ಮುದ್ದುಮುದ್ದಾದ ಪ್ರೀತಿ ವಾತ್ಸಲ್ಯದ ಭಾಷೆಯಲ್ಲಿ ಅಮಲೇರುವಂತೆ ಮಾತನಾಡಿಕೊಳ್ಳುತ್ತಿದ್ದಾರೆ. ಈ ರೀತಿಯ ಮಾತುಗಳು ಹೆಚ್ಚೆಚ್ಚಾಗಿ ಹೆಣ್ಣುಗಂಡು ಮೊದಮೊದಲು ಪ್ರೀತಿಸಿದಾಗ ಮಾತನಾಡಿಕೊಳ್ಳುತ್ತಾರೆ. ಅಷ್ಟೇ ಅಲ್ಲ ಈ ರೀತಿಯ ಮಾತುಗಳು ಕೆಲವೊಮ್ಮೆ ಜೀವನವೆಲ್ಲ ಉಳಿದುಬಿಡುತ್ತವೆ ಕೂಡ.

ಕಾರು ಪೋರ್ಟಿಕೋದಲ್ಲಿ ನಿಂತಿತು. ಪವನ್ ಕೈ ಪ್ರಾಚಿಯ ಹೆಗಲನ್ನು ಬಳಸಿಕೊಂಡೆ ಇತ್ತು. ಇಬ್ಬರು ಒಳಕ್ಕೆ ನಿಧಾನವಾಗಿ ನಡೆಯತೊಡಗಿದರು. 'ಪ್ರಾಚಿ, ಬೆಳಗಿನ ಮಾತುಗಳು ಜ್ಞಾಪಕವಿದೆ ತಾನೆ' ಎಂದು ನಕ್ಕ.

ಪ್ರಾಚಿ "ಓ ದೇವರೆ, ನಾನು ಮರೆತೆ ಹೋಗಿದ್ದೆ" ಎನ್ನುತ್ತಾ ನಾಚಿಕೆಗೊಂಡಳು. ಇಬ್ಬರು ಬಟ್ಟೆ ಬದಲಾಯಿಸಿ ಒಬ್ಬೊಬ್ಬರಾಗಿ ಸ್ನಾನ ಮಾಡಿದರು.

ನಮೋ ಧರ್ಮಾರ್ಥ ಕಾಮೋಭಸ್ತಕ,

ದ ಮೋಬ್ಯೋಗಿ ನಮೋನಮಃ

ತ್ರಿವರ್ಗ ಮೋಕ್ಷ ಕಾಮೋಭ್ಯ

ಕಾಮೋಭಸ್ತ್ವಮಿಕಂ ನಮಃ

ಜಗತ್ತಿನಲ್ಲಿಯೇ ಕಾಮ ಅತ್ಯುನ್ನತ ಆನಂದ ವಿಜಯವೆಂದು 'ಶತಪಥ ಬ್ರಾಹ್ಮಣದಲ್ಲೇ' ಹೇಳಲಾಗಿದೆ.

'ಪ್ರತಿಯೊಬ್ಬರಿಗೂ ಬೆತ್ತಲೆಗೊಳ್ಳಬೇಕೆಂದರೆ ಖುಷಿಯೆ ಆದರೆ ಸಂಕೋಚವೇಕೆ ಎನ್ನುತ್ತಾರೆ' ಮನೋವಿಜ್ಞಾನಿಯೊಬ್ಬರು.

ಪವನ್ ಮತ್ತು ಪ್ರಾಚಿ ಅಸ್ಸಾಂನ ಜೌಗುಗಳಲ್ಲಿ ಬೆಳೆಯುವ ಕೇನ್‌ನ ಅತ್ಯುತ್ತಮ ಆರಾಮ ಕುರ್ಚಿಗಳಲ್ಲಿ ಪಕ್ಕಪಕ್ಕದಲ್ಲಿ ಕುಳಿತಿದ್ದಾರೆ. ಎದುರಿಗೆ ಹೆಂಗಸರ ಪಾನಿ ಎಂದೆ ಪ್ರಸಿದ್ಧವಾದ 'ಜಿನ್' ಮತ್ತು ಕೆಲವು ಶ್ರೇಷ್ಠವಾದ ಪಾನೀಯಗಳ ಬಾಟಲ್‌ಗಳಿವೆ. ಜೊತೆಗೆ 'ಬಿಸಿಲೇರಿ' ಲವಣದ ನೀರು ಪ್ರಾಯ್ ಮಾಡಿದ ಚಿಕನ್ ತುಂಡುಗಳು ಇನ್ನೂ ಹಲವು ದಿನನಿತ್ಯದ ಭಕ್ಷ್ಯಗಳು ಮೇಜಿನ ಮೇಲಿವೆ.

"ಪ್ರಾಚಿ, ಲವಣದ ನೀರಿಗೂ ಮಾಮೂಲಿ ನೀರಿಗೂ ಇರುವ ವ್ಯತ್ಯಾಸವೇನು ಗೊತ್ತೆ...?"

"ಗೊತ್ತಿಲ್ಲ" ಪ್ರಾಚಿ ನಕ್ಕಳು. ಅಂತಹ ವಿಷಯಗಳನ್ನು ಮಾತನಾಡುವ ಸಮಯವೇ ಇದು ಎನ್ನುವಂತಿತ್ತು ಆ ನಗು. ಪ್ರಾಚಿಯ ನಗುವಿನ ಆಳದಲ್ಲಿರುವ ಗುಟ್ಟನ್ನು ಅರ್ಥಮಾಡಿಕೊಂಡ ಪವನ್ ಉತ್ತರಕೊಡಲಿಲ್ಲ.

ಒಂದೆರಡು ಸಲ ಔತಣಕೂಟಗಳಲ್ಲಿ ಸ್ವಲ್ಪ ರುಚಿ ನೋಡಿರುವ ಪ್ರಾಚಿ ಬೆಳಿಗ್ಗೆ ಕೊಟ್ಟ ಮಾತಿನಂತೆ ಮೊಟ್ಟ ಮೊದಲಿಗೆ ಪವನ್‌ನ ಮಾತು ತಳ್ಳಿ ಹಾಕಲಾರದೆ ಜಿನ್ ಕುಡಿಯುತ್ತೇನೆಂದು ಒಪ್ಪಿಕೊಂಡಿದ್ದಾಳೆ. ಪ್ರಾಚಿ ನೋಡು ನೋಡುತ್ತಿದ್ದಂತೆ ಎರಡು 'ಬೋರೋಸಿಲ್' ಗಾಜಿನ ಲೋಟಾಗಳಲ್ಲಿ 'ಜಿನ್' ಮತ್ತು 'ಜಾನಿವಾಕರ್' ಸರಾಗವಾಗಿ ತುಂಬಿಕೊಂಡವು. ದಕ್ಷಿಣ ಧ್ರುವದಲ್ಲಿ ಬರ್ಫಿನ ಗುಡ್ಡೆಗಳು ತೇಲಾಡಿದಂತೆ ಐಸ್ ಕ್ಯೂಬ್‌ಗಳು ಎರಡು ಲೋಟಾಗಳಲ್ಲಿ ತೇಲಾಡುತ್ತಿವೆ. ಪ್ರಾಚಿ ಒಂದು ರೀತಿಯ ಭಯದಿಂದ ತುಸುವೆ ಪುಳಕಗೊಂಡು ಕಣ್ಣು ಮುಚ್ಚಿ ಒಮ್ಮೆಲೆ ಗಂಟಲಿಗೆ ಸುರಿದುಕೊಂಡಳು. ಎದೆಯ ಹಿಂದಿನಿಂದ ಖಾರವಾಗಿ ಇಳಿದ ಮದ್ಯ ಅವಳ ಎದೆಯಲ್ಲಿ ತುಸು ಬಿಸಿ ಏರಿಸಿತು. ಅಷ್ಟರೊಳಗೆ ಎರಡು ಪೆಗ್‌ಗಳನ್ನು ಏರಿಸಿದ ಪವನ್ ಎದ್ದು ನಿಧಾನವಾಗಿ ಪ್ರಾಚಿಯ ಹತ್ತಿರಕ್ಕೆ ಬಂದು ಎರಡು ಕೆನ್ನೆಗಳನ್ನು ಮೃದುವಾಗಿ ಸವರುತ್ತಾ ದೀರ್ಘವಾಗಿ ಚುಂಬಿಸಿದ. ಆ ಚುಂಬನ ಸರಳವಾಗಿ ಆರಂಭವಾಗಿ ಹಾರಾಡುತ್ತಾ ದೀರ್ಘವಾಗಿ ಆಳವಾಗಿ ಶೃಂಗಾರವಾಗಿ ಒಳಹೊಕ್ಕಿ ಎರಡು ಆತ್ಮಗಳು ಒಂದಾದಂತಿತ್ತು.

ಪ್ರಾಚಿ ಯಾವ ರೀತಿಯ ವಿಶಿಷ್ಟ ಭಾವನೆಯೂ ತೋರಿಸದೆ ತನ್ನ ಎದೆಗಳನ್ನು ಪವನ್‌ಗೆ ಒಪ್ಪಿಸಿ ಜೀವನದ ಒಂದು ಶ್ರೇಷ್ಠ ರಾತ್ರಿಯನ್ನು ಅನುಭವಿಸಲು ಇನ್ನಷ್ಟು ಸಜ್ಜಾಗಿ ಪವನ್‌ನನ್ನು ಪ್ರೇರೇಪಿಸಿದಳು.

ಪ್ರಾಚಿ ಹಲವು ದಿನಗಳಿಂದ ಕಾಪಾಡಿಕೊಂಡು ಬಂದಿದ್ದ ಸೌಂದರ್ಯವನ್ನೆಲ್ಲ ಪವನ್ ಈ ರಾತ್ರಿ ಬಹಳ ಸೊಗಸಾಗಿ ಬಳಸಿಕೊಂಡ. ಅವರ ಜೀವನದಲ್ಲಿ ಅದೊಂದು ರಾತ್ರಿ ಅತ್ಯಂತ ಶ್ರೇಷ್ಠ ರಾತ್ರಿಯಾಗಿ ಉಳಿಯಿತು.

❖❖❖

ಬೆಂಗಳೂರು ಸಾಯಂಕಾಲದ ತಂಪಿನಲ್ಲಿ ನುಸುಳುತ್ತಿದೆ. ತಂಪನ್ನ ಮುದಗೊಳಿಸಲೆಂದೆ ಬೆಂಗಳೂರಿನ ಜನ ತೆಳುವಾದ ಬೆಚ್ಚನೆಯ ಬಟ್ಟೆಗಳನ್ನು ತೊಟ್ಟು ತಮ್ಮ ತಮ್ಮ ಕಸುಬುಗಳಲ್ಲಿ ತೊಡಗಿದ್ದಾರೆ. ಆಕಾಶದಲ್ಲಿ ನಕ್ಷತ್ರಗಳು ಮಿನುಗುತ್ತಿವೆಯಾದರೂ ಬೆಂಗಳೂರಿನ ವಿದ್ಯುತ್ ದೀಪಗಳು ನಕ್ಷತ್ರಗಳಿಗೆ ಅಷ್ಟೊಂದು ಪ್ರಾಧಾನ್ಯತೆ ಕೊಡದೆ ಒಂದನ್ನೊಂದು ಬೇದಿಸಿಕೊಂಡು ಒಂದೇ ಸಮನೆ ಬೆಳಕಿನ ರೇಖೆಗಳನ್ನು ಉತ್ಪತ್ತಿ ಮಾಡುತ್ತಿವೆ.

ಮನುಷ್ಯನಲ್ಲಿ ಎರಡು ಪರಿಹರಿಸಲಾರದ ದೌರ್ಬಲ್ಯಗಳಿವೆ. ಒಂದು ಕಾಮ, ಎರಡು ಐಶ್ವರ್ಯ. ಚರಿತ್ರೆಯಲ್ಲಿ ಐಶ್ವರ್ಯಕ್ಕಿಂತ ಕಾಮಕ್ಕಾಗಿ ಹೆಚ್ಚು ರಕ್ತದ ಓಕುಳಿ ನಡೆದಿದೆ. ಮೂಲ ಬೆಂಗಳೂರಿನ ಒಂದು ಹಳೆ ಶೈಲಿಯ ಮನೆಯ ಮುಂದೆ ಉದ್ದವಾದ ಒಂದು ಕಾರು ನಿಂತಿದೆ. ಒಳಗೆ ಕನ್ನಡಿ ಮುಂದೆ ೬ ಅಡಿ ಎತ್ತರದ ಒರಟಾದ ಒಂದು ಪುರುಷ ದೇಹ ನಿಂತಿದೆ. ಮುಖ ಒರಟಾಗಿದ್ದರು, ನೋಡುವವರಿಗೆ ಏನೋ ಒಂದು ಅಸಾಧಾರಣ ಆಕರ್ಷಣೆ ಆ ಮುಖದಲ್ಲಿ ಕಾಣಿಸುತ್ತದೆ. ಮನೆಯಲ್ಲಿ ಒಬ್ಬನೆ ಇರುವುದರಿಂದ ಮನೆಯೆಲ್ಲಾ ನಿಶ್ಯಬ್ದವಾಗಿದೆ. ಕಣ್ಣುಗಳೆಲ್ಲೂ ಒಂದು ರೀತಿಯಾದ ಹೊಳಪು ಮತ್ತು ಮೋಹದ ಶಕ್ತಿ ತುಂಬಿದ್ದು, ಆ ಕಣ್ಣುಗಳ ನೋಟ ಎದುರಿಸುವ ಹೆಣ್ಣುಗಳು ಕೆಲವರು ಕಾಮ ಉದ್ದೀಪನದಿಂದ ವಿಹ್ವಲರಾಗಿ ರೊಚ್ಚಿಗೆದ್ದರೆ, ಇನ್ನೂ ಕೆಲವು ಹೆಂಗಸರು ಕಾಲುಗಳಲ್ಲೆ ನಡುಕಗೊಂಡು ಗಾಬರಿಯಾಗುತ್ತಾರೆ.

ಹೊರಗೆ ಬಂದು ಬಾಗಿಲನ್ನು ಲಾಕ್ ಮಾಡಿದ ಒರಟು ಕೈಗಳು ಜೇಬಿನಲ್ಲಿದ್ದ ಯಾವುದೋ ವಸ್ತುಗಳನ್ನು ಮುಟ್ಟಿನೋಡಿ ಮತ್ತೊಮ್ಮೆ ದೃಢಪಡಿಸಿಕೊಳ್ಳುತ್ತವೆ. ಕೆಂಪು ಸೂರ್ಯನ ಚಿಹ್ನೆ ಇರುವ ಅಮೇರಿಕನ್ ನೀಲಿ ಜೀನ್ಸ್ ಪ್ಯಾಂಟಿನೊಟಕ್ಕೆ ತೆಳು ಬೂದು ಬಣ್ಣದ ಅಂಗಿಯನ್ನು ಟಕ್ ಮಾಡಲಾಗಿದೆ. ಕಪ್ಪಾದ ಗುಂಗುರ ಕೂದಲು, ಪೊದೆಮೀಸೆ.

ಹವಾನಿಯಂತ್ರಣ ನಗರದ ಚಳಿ ಯಾವ ರೀತಿಯಲ್ಲೂ ಅಪಾಯಕರವಲ್ಲವಾದ್ದರಿಂದ ಚಳಿಯನ್ನು ಇಷ್ಟಪಡುವ ಆ ಪುರುಷ ಉಣ್ಣೆಬಟ್ಟೆಯನ್ನು ಧರಿಸಿಕೊಂಡಿರಲಿಲ್ಲ. ಕಾರಿನ ಬಾಗಿಲನ್ನು ತೆಗೆದುಕೊಂಡು ಒಳಕ್ಕೆ ಬಗ್ಗಿ ನುಸುಳಿದ್ದೆ, ಇಗ್‌ನಿಷನ್ ಕೊಟ್ಟು, ಎಡಕಾಲಿನಲ್ಲಿ ಬ್ರೇಕ್ ಒತ್ತಿಕೊಂಡು, ಎಡಕೈಯಿಂದ ನ್ಯೂಟ್ರಲ್ ಗೇರನ್ನು ಒಂದನೇ ಗೇರಿಗೆ ಬದಲಿಸಿ, ಕ್ಲಚ್ಚನ್ನು ನಿಧಾನವಾಗಿ ಸಡಲಿಸಿ ಸ್ಟೀರಿಂಗ್‌ನ್ನು ತಿರುಗಿಸುತ್ತಾ ಕಾರನ್ನು ರಸ್ತೆಗೆ ಇಳಿಸಿದ. ಕಾರು ನಿಧಾನವಾಗಿ ರಸ್ತೆಯನ್ನು ಸವಿಯುತ್ತಾ ಸಾಗುತ್ತಿದೆ.

ಕಪ್ಪುಬಿಳುಪು ಚಿತ್ರಗಳನ್ನು ಬಹಳ ಇಷ್ಟಪಡುವ ಅವನ ಕಣ್ಣುಗಳು ನೋಡುತ್ತಿದ್ದ ದೃಶ್ಯಗಳೆಲ್ಲವನ್ನೂ ಕಪ್ಪು ಬಿಳುಪಿನಲ್ಲೆ ತುಂಬಿಕೊಳ್ಳಲು ಪ್ರಯತ್ನಿಸುತ್ತಿವೆ. ಬೆಂಗಳೂರಿನ ರಸ್ತೆಗಳಲ್ಲಿ ಸಾಯಂಕಾಲದ ಹೊತ್ತಿನಲ್ಲಿ ಓಡಾಡುವ ಬಹಳಷ್ಟು ಹೆಣ್ಣು ಗಂಡುಗಳು ನೂರಾರು ಉದ್ದೇಶಗಳ ಜೊತೆಗೆ ಒಂದು ಕಾಮನ್ ಉದ್ದೇಶವನ್ನು ತುಂಬಿಕೊಂಡು ಅಲೆದಾಡುತ್ತಿರುತ್ತಾರೆ.

ಪ್ರತಿಯೊಬ್ಬರ ಅಂಗಾಂಗಗಳು ಇನ್ನೊಬ್ಬರ ಅಂಗಗಳನ್ನು ಸ್ಪರ್ಶಿಸಲು ಪ್ರಯತ್ನಿಸುತ್ತಲೋ, ಸ್ಪರ್ಶಿಸುವುದನ್ನು ತಿಳಿದು ತಿಳಿಯದಂತೆ ಸ್ಪರ್ಶಿಸಿಕೊಳ್ಳುತ್ತಲೋ ಓಡಾಡುವ ಹೆಣ್ಣುಗಂಡುಗಳ ರೂಪಗಳನ್ನು ನೋಡಬೇಕು.

ಹೀಗೆ ಹಲವಾರು ವರ್ಷಗಳು, ಕಾಲುಗಳು ಸೋಲುವವರೆಗೂ ಓಡಾಡಿ ತಲೆ ಕೆಡಿಸಿಕೊಂಡಿರುವ ಆ ಪುರುಷ ಕಾರಿನೊಳಗಿಂದಲೇ ನೋಡುತ್ತಾ ಉದ್ರೇಕಗೊಳ್ಳುತ್ತಿದ್ದಾನೆ. ಆದರೆ ಇತ್ತೀಚಿನ ದಿನಗಳಲ್ಲೇಕೋ ಈ ರೀತಿಯ ಓಡಾಟ ಅವನಿಗೆ ತೃಪ್ತಿ ನೀಡಿಲ್ಲವಾದ್ದರಿಂದ ಜನಗಳ ಮಧ್ಯೆ ಓಡಾಡುವುದನ್ನು ನಿಲ್ಲಿಸಿದ್ದಾನೆ.

ಕಾರು ನಿಧಾನವಾಗಿ ಓಡುತ್ತಾ ಹೋಟೆಲ್ "ಸ್ಕೈಲ್ಯಾಬ್" ಕಾಂಪ್ಲೆಕ್ಸ್‌ನ ಪಬ್ ಬಾರಿನ ಮುಂದೆ ನಿಂತಿತು. ಪಬ್ ಪದ್ಧತಿ ಇತ್ತೀಚಿನ ಯುವ ಪೀಳಿಗೆಯಲ್ಲಿ ಒಂದು ರೀತಿಯ ಉತ್ಸಾಹ ತುಂಬಿರುವುದರ ಜೊತೆಗೆ ಬೆರೆತೋಗುವ, ಲೀಲಾಜಾಲವಾಗಿ ಒಡಂಬಡಿಕೆಗೊಳ್ಳುವ, ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳುವ, ಇನ್ನೂ ಹೇಳಬೇಕೆಂದರೆ ಗೆಳೆತನ ಬೆಳೆಸಿಕೊಳ್ಳುವುದಕ್ಕೆ ಸಹಾಯವಾಗಿದೆ.

ಆ ಪುರುಷ ಒಳಕ್ಕೆ ಪ್ರವೇಶಿಸುತ್ತಾನೆ. ಸುತ್ತಲು ಒಮ್ಮೆ ನೋಡಿ ಖಾಲಿ ಇರುವ ಮೇಜಿನ ಮುಂದೆ ಕುಳಿತು, ಸುತ್ತಲಿರುವ ಪರಿಸರಕ್ಕೆ ಮಾಮೂಲಿಯಾಗಿ ಹೊಂದಿಕೊಂಡವನಂತೆ ವರ್ತಿಸುತ್ತಾನೆ. ಹತ್ತಿರ ಬಂದ ಸೇವಕ 'ಎಕ್ಸ್‌ಕ್ಯೂಸ್‌ಮೀ ಸಾರ್' ಎನ್ನುತ್ತಾನೆ. ಎರಡು ಗ್ಲಾಸು ಒಂದು ಬಿಯರನ್ನು ಆಜ್ಞೆ ಮಾಡಿದ. ಸೇವಕ ಒಳಕ್ಕೆ ಹೋಗುತ್ತಾನೆ. ಸುತ್ತಲು ಸುಂದರವಾಗಿ ನೀಟಾಗಿ ಜೋಡಿಸಿರುವ ಮೇಜುಗಳು ಮತ್ತು ಕುರ್ಚಿಗಳು. ಅದೊಂದು ದೊಡ್ಡ ಹಾಲು, ಬಣ್ಣಬಣ್ಣದ ಹೂವಿಂದ ಮಕರಂದ ಹೀರುವ ಚಿಟ್ಟೆಗಳಿರುವ ಹೂವಿನ ತೋಟದಂತೆ ಕಾಣಿಸುತ್ತಿದೆ. ಗೋಡೆಗಳಲ್ಲಿ ವಿಧವಿಧ ವೈವಿಧ್ಯಮಯವಾದ ಕಲಾಕೃತಿಗಳಿದ್ದು, ಸ್ತಂಭಗಳು ಯಾವುದೋ ಮೊಗಲರು ಕಟ್ಟಿಸಿದ ಮಹಲುಗಳನ್ನು ಜ್ಞಾಪಕಕ್ಕೆ ತರಿಸುತ್ತಿವೆ.

ಸುತ್ತಲು ಮಂಜುಳ ಕಲರವ ತುಂಬಿದ ಹೆಣ್ಣು – ಗಂಡುಗಳು, ಅದರಲ್ಲೂ ಹೆಚ್ಚೆಚ್ಚಾಗಿ ಯುವಕ ಯುವತಿಯರು ಉಲ್ಲಾಸವಾಗಿ 'ಮುದ್ದಣ್ಣ ಮನೋರಮೆಯರ' ಸಲ್ಲಾಪವನ್ನು ನಡೆಸುತ್ತಿದ್ದಾರೆ. ಎರಡು ಗ್ಲಾಸುಗಳು ಮತ್ತು ಬಿಯರನ್ನು ತಂದ ಸೇವಕ

ಮೇಜಿನ ಮೇಲಿಟ್ಟು, 'ಬೇರೆ ಏನಾದರೂ ಅಗತ್ಯವೆ ಸಾರ್' ಎಂದು ಕೇಳುತ್ತಾನೆ. ಏನೂ ಅಗತ್ಯವಿಲ್ಲವೆನ್ನುವಂತೆ ತಲೆ ಆಡಿಸುತ್ತಾನೆ. ಸೇವಕ ಮತ್ತೆ ಬರುತ್ತೇನೆಂದು ಮುಂದೆ ನಡೆಯುತ್ತಾನೆ. ಎರಡು ಗ್ಲಾಸುಗಳು ಬಿಯರನ್ನು ತುಂಬಿಕೊಳ್ಳುತ್ತವೆ. ಪಬ್ ರೆಸ್ಟೋರೆಂಟ್‌ಗಳಲ್ಲಿ ಬಹಳಷ್ಟು ಬರುವ ಗಿರಾಕಿಗಳು ಸೌಹಾರ್ದ ಬೆಳೆಸಿಕೊಳ್ಳುವುದಕ್ಕೆಂದೇ ಸಂಪ್ರದಾಯಕವಾಗಿ ಒಂದು ಗ್ಲಾಸ್ ಹೆಚ್ಚಿಗೆ ತುಂಬುತ್ತಾರೆ.

ಈಗ ನಿಧಾನವಾಗಿ ಸುತ್ತಲು ನೋಡುತ್ತಾನೆ, ಆ ಮೂಲೆಯಿಂದೊಬ್ಬರು ಈ ಕಡೆಯಿಂದೊಬ್ಬರು ಅವನ ಕಡೆ ನೋಡಿ ಮುಗುಳು ನಗುತ್ತಾ ತಮ್ಮ ಗೆಳೆಯರ ಜೊತೆ ಲಲ್ಲೆ ಗರೆಯುತ್ತಿದ್ದಾರೆ. ಈಗ ಸುತ್ತಲು ಅಂದರೆ ೩೬೦°ಗಳ ವ್ಯಾಸದಲ್ಲಿ ನೋಡುತ್ತಾನೆ. ಬಲಗಡೆ ಹಿಂದಿನ ಎರಡನೆಯ ಮೇಜಿನ ಮುಂದೆ ಇಬ್ಬರು ಹೆಣ್ಣುಗಳು ಕುಳಿತಿದ್ದಾರೆ. ಒಂದು ಹೆಣ್ಣಿನ ಮುಖ ನೋಡಿದ್ದೆ ಅದರಿ ಬಿದ್ದವನಂತೆ ಮತ್ತೆ ನೋಡುತ್ತಾನೆ. ಮತ್ತೆ ಮತ್ತೆ ತಿರುಗಿ ನೋಡಿ ಸಾವಧಾನವಾಗಿ ಏನೋ ಒಳಗೊಳಗೆ ಹೇಳಿಕೊಂಡು ಗ್ಲಾಸಿನಲ್ಲಿದ್ದ ಬಿಯರನ್ನು ಒಮ್ಮೆ ಗುಟುಕರಿಸಿ ಅವರ ಕಡೆ ನೋಡಿ ಬಂದು ಹಿತವಾದ ಮತ್ತು ಸಂಪೂರ್ಣವಾದ ನಗು ಬೀರುತ್ತಾನೆ.

ಇಂಗ್ಲಿಷ್ ಕಾದಂಬರಿಗಳಲ್ಲಿ ಬರುವ ಕೆಲವು ವಾಕ್ಯಗಳು ಅವನ ಜ್ಞಾಪಕಕ್ಕೆ ಬಂದು ನಿಜವಾದ ವಾಕ್ಯಗಳೋ ಅಲ್ಲವೋ ಎಂದುಕೊಳ್ಳುತ್ತಾನೆ.

ಆ ಕಡೆಯಿಂದ ಅಷ್ಟೇ ಮಂದಹಾಸವಾದ ಮತ್ತು ಮಾದಕವಾಗ ನಗು ಎದುರಾದಾಗ ನಿಧಾನವಾಗಿ ಎದ್ದು ಮೇಜಿನ ಕಡೆ ನಡೆದು ಬರುತ್ತಾನೆ. ಅವನ ಕಡೆ ನೋಡಿದ ಆ ಹೆಣ್ಣುಗಳು ಒಂದೆರಡು ಕ್ಷಣ ವಿಲಕ್ಷಣ ಗೊಂದಲದಲ್ಲಿ ಸಿಲುಕಿಕೊಂಡಂತೆ, ಭ್ರಾಂತರಾಗುತ್ತಾರೆ.

ಮುಗುಳುನಕ್ಕ ಹೆಣ್ಣು ಯೌವ್ವನದ ಗಡಿಯಲ್ಲಿದ್ದು ನಿಜವಾಗಿಯೂ ಬೆಳದಿಂಗಳ ಬಾಲೆಯಂತೆ ಹೊಳಪು ಮೂಡಿಸುವ ಸೌಂದರ್ಯರಾಶಿಯಂತಿದ್ದಾಳೆ. ತುಸುವೆ ಬೆದರಿದಂತೆ ತೋರುವ ಕಣ್ಣುಗಳಲ್ಲಿ ತಂಪು ನಿರಂತರವಾಗಿ ಹೊಮ್ಮುತ್ತಿದೆ. ತಂಪು ಬಹಳ ಸಿಹಿಯಾದ ಭೌತಿಕ ವಸ್ತುಕೂಡ.

ಹತ್ತಿರ ಬಂದವನೆ ಬಹಳ ವಿನಮ್ರವಾಗಿ ಬಗ್ಗಿ ಕ್ಷಮಾಪಣೆ ಕೋರಿ "ನಿಮಗೆ ತೊಂದರೆ ಮಾಡಿದ್ದಕ್ಕೆ ನನಗೆ ಶಿಕ್ಷೆ ಕೊಡಬೇಕು" ಎನ್ನುತ್ತಾನೆ. ಮುಗುಳು ನಕ್ಕ ಸುಂದರಿ "ನಿಮಗೆ ಸ್ವಾಗತ" ಎನ್ನುತ್ತಾ ಕುರ್ಚಿ ತೋರಿಸುತ್ತಾಳೆ.

ಕೃತಜ್ಞತೆ ತಿಳಿಸುತ್ತಾ ಯಾವ ರೀತಿಯಾಗಿ ಮಾತುಗಳನ್ನು ಉಪಯೋಗಿಸಬೇಕೆಂದು ಯೋಚಿಸುತ್ತಲೇ ನಮ್ರವಾಗಿ ಕುಳಿತು ಅವಳ ಮುಖವನ್ನು ಯಾವ ರೀತಿಯ ಭಾವೋದ್ವೇಗವು ಇಲ್ಲದೆ ಒಮ್ಮೆ ನೋಡುತ್ತಾನೆ. ಒಂದು ಶ್ರೇಷ್ಠ

ಮಾಡೆಲ್ ಆಗುವ ಎಲ್ಲಾ ಲಕ್ಷಣಗಳು ಅವಳ ಮುಖದಲ್ಲಿದ್ದು ನಿಂತಾಗ ಮತ್ತು ನಡೆಯುವಾಗ ಯಾವ ರೀತಿಯಲ್ಲಿ ಇರುತ್ತಾಳೆ ಎಂದು ಊಹಿಸುವುದರ ಜೊತೆಗೆ "ನೀವು ಕೋಪಿಸಿಕೊಳ್ಳುವುದಿಲ್ಲವೆಂದರೆ ನಾನೊಂದು ಮಾತೇಳುತ್ತೇನೆ" ಎಂದು ಪೀಠಿಕೆ ಹಾಕಿದ.

ಆ ಹೆಣ್ಣು ಮತ್ತೊಮ್ಮೆ ಪ್ರಸನ್ನಳಾಗಿ ನಗುತ್ತಾ "ಧಾರಾಳವಾಗಿ ಹೇಳಬಹುದು" ಎನ್ನುತ್ತಾಳೆ. "ನಿಮಗೆ ಮಾಡೆಲ್ ಆಗುವ ಎಲ್ಲಾ ಲಕ್ಷಣಗಳೂ ಇವೆ. ನೀವು ಮಾಡೆಲ್ ತಾನೆ ?" ಪ್ರಶ್ನಿಸಿದ. "ಅರೆ, ನಿಮಗ್ಯಾಗೆ ಗೊತ್ತು ?" ಎನ್ನುತ್ತಾಳೆ ಪಕ್ಕದಲ್ಲಿದ್ದ ಇನ್ನೊಂದು ಹೆಣ್ಣು.

"ನನ್ನ ಹೆಸರು ಚಿರಂಜೀವಿ" ಅಂತ.

ಅಷ್ಟರಲ್ಲಿ ಆ ಹೆಣ್ಣು ನಗುತ್ತಾಳೆ, ಹರಿಯುವ ನದಿಯಂತೆ. "ಡಿಗ್ರಿಯಾಗಿದೆ, ಬಿ.ಇ., ಕಂಪ್ಯೂಟರ್‌ನಲ್ಲಿ, ತಂದೆ ತಾಯಿ ಯಾರೂ ಇಲ್ಲ. ಆದರೆ ನಮ್ಮ ಅಜ್ಜ, ಮುತ್ತಜ್ಜ ಆದಷ್ಟು ಆಸ್ತಿಯನ್ನು ಬಿಟ್ಟೋಗಿರುವುದರಿಂದ ಕೆಲಸ ಮಾಡುವ ಯೋಚನೆಯೇ ಇಲ್ಲ. ಏನಾದರೂ ಹಾಬಿಗಾಗಿ ಸ್ವಂತ ಉದ್ಯೋಗ ಮಾಡಬೇಕು. 'ಸಾರಿ ನಿಮ್ಮನ್ನ ತೊಂದರೆ ಮಾಡುತ್ತಿದ್ದೇನೆ" ಯಾವ ಉದ್ವೇಗವೂ ಇಲ್ಲದೆ ಹೇಳಿದ.

ಒಂದೆರಡು ಕ್ಷಣಗಳಾಯಿತು. "ನೀವು ಬಹಳ ಸುಂದರವಾಗಿದ್ದೀರ. ಒಂದು ನಗೆಹನಿ ಹೇಳುತ್ತೇನೆ. ನೀವು ನಕ್ಕರೆ ಬಹುಶಃ ಇನ್ನಷ್ಟು ಮತ್ತಷ್ಟು ಸೊಗಸಾಗಿರುತ್ತಿರೆಂದು" ನಿಲ್ಲಿಸಿದ. ಯಾವ ನಗೆಹನಿಯೂ ಇಲ್ಲದೆ ಇಬ್ಬರೂ ನಗಾಡಿದರು.

"ಏನೂ ಅಭ್ಯಂತರವಿಲ್ಲದಿದ್ದರೆ ನಿಮ್ಮ ಹೆಸರನ್ನು ತಿಳಿದುಕೊಳ್ಳಬಹುದೆ ?"

"ನನ್ನೆಸರು ಭಾವನಾ, ಇವಳು ನನ್ನ ಗೆಳತಿ ನಯನ ನಾವಿಬ್ಬರು ಮೆಡಿಸನ್ ವಿದ್ಯಾರ್ಥಿನಿಯರು ಲೇಡಿಸ್ ಹಾಸ್ಟೆಲ್‌ನಲ್ಲಿದ್ದೇವೆ. ನಾನು ಮಾಡೆಲಿಂಗ್ ತರಗತಿಗಳಿಗೂ ಹೋಗುತ್ತಿದ್ದೇನೆ".

"ಬಹಳ ಒಳ್ಳೆಯದು, ಒಂದು ದಿನ ನೀವು ದೊಡ್ಡ ಮಾಡೆಲ್ ಆಗುತ್ತೀರ. ಟಿ.ವಿ. ಸಿನಿಮಾದಲ್ಲೂ ಬರುತ್ತೀರ" ಎಂದ ಚಿರಂಜೀವಿ ಮತ್ತೆ ಮುಸಿಮುಸಿ ನಕ್ಕ. ಅವಳು ಚಿರಂಜೀವಿಯ ಕಡೆ ನೋಡಿದಳು.

ಸೇವಕ ಹತ್ತಿರ ಬಂದ. ಚಿರಂಜೀವಿ ಅವನ ಮೇಜಿನ ಮೇಲಿದ್ದ ಗ್ಲಾಸುಗಳು ಮತ್ತು ಬಿಯರನ್ನು ತಾನಿರುವ ಮೇಜಿಗೆ ತರಿಸಿಕೊಂಡು, ನಿಮಗೆ ಅಭ್ಯಂತರವಿಲ್ಲದೆ ಹೋದಲ್ಲಿ ಏನಾದರೂ ಬೇಕಿದ್ದರೆ ಅಪ್ಪಣೆ ಮಾಡಬೇಕೆಂದು ತೋರಿದ.

ಭಾವನಾ ಏನೂ ಬೇಡವೆಂದಳು; ಒಂದು ಅಪೂರ್ಣ ರೀತಿಯಲ್ಲಿ ಚಿರಂಜೀವಿ ಮಿನರಲ್ ವಾಟರ್ ಮತ್ತು ಕೆಲವು ತಿನಿಸುಗಳನ್ನು ಹೇಳಿ ಮೆಲುಧ್ವನಿಯಲ್ಲಿ ಒಂದು ನಗೆಹನಿ ಹೇಳಿದ. ಇಬ್ಬರು ಹಗುರವಾಗಿ ನಕ್ಕರು.

ಈಗ ಮೂವರು ಗ್ಲಾಸುಗಳಲ್ಲಿ ಬಿಯರನ್ನು ಸವಿಯುತ್ತಾರೆ, ಹಣ್ಣುಗಳ ರಸವನ್ನು ಸವಿದಂತೆ. ಅಷ್ಟರಲ್ಲಿ ಹತ್ತಿರ ಬಂದ ನಯನಳ ಬಾಯ್‌ಫ್ರೆಂಡ್ ನಯನಳನ್ನು ಕೈಹಿಡಿದು 'ಕ್ಷಮಿಸಿ' ಎನ್ನುತ್ತಾ ಕರೆದುಕೊಂಡು ಹೊರಕ್ಕೆ ನಡೆದುಬಿಟ್ಟ.

"ಬೈ... ಸೀಯು" ಎನ್ನುತ್ತಾ ನಯನ ಕೈಯಾಡಿಸಿ ಹೊರಟುಹೋದಳು. ಭಾವನಾ ಕೂಡ "ನಾನು ಹೊರಡುತ್ತೇನೆ" ಎಂದು ಎದ್ದು ನಿಂತಳು. ಚಿರಂಜೀವಿ ಕಾರ್ಯ ಕೆಟ್ಟಿತಲ್ಲಾ ಎಂದುಕೊಳ್ಳುತ್ತಾ "ನೀವೇನು ತಪ್ಪು ತಿಳಿಯುವುದಿಲ್ಲವೆಂದರೆ ಇನ್ನೈದು ನಿಮಿಷ ಇರಿ, ನಾನೂ ಹೋಗಬೇಕು" ಎನ್ನುತ್ತಾನೆ. ಸಮಯ ನೋಡಿಕೊಂಡ ಭಾವನಾ ಇನ್ನೂ ಸಮಯವಿರುವುದರಿಂದ ಮತ್ತೆ ಕುಳಿತುಕೊಳ್ಳುತ್ತಾಳೆ.

ಮತ್ತೆ ಒಂದೆರಡು ಜೋಕುಗಳನ್ನು ಹೇಳಿ ಭಾವನಾಳನ್ನು ನಗಿಸಿ "ನನ್ನದು ಕಾರಿದೆ ಬೇಕಾದರೆ ನಿಮ್ಮನ್ನು ಡ್ರಾಫ್ ಮಾಡುತ್ತೇನೆ" ಎನ್ನುತ್ತಾನೆ. "ಓ... ನಿಮ್ಮದು ಸ್ವಂತ ಕಾರಿದೆಯೆ?" ಎಂದು ಉದ್ಗರಿಸಿ ಮತ್ತೆ ಯಾಕೋ ಏನೋ ತುಸು ಯೋಚಿಸುತ್ತಾಳೆ.

ಸೇವಕನನ್ನು ಕರೆದ ಚಿರಂಜೀವಿ ಬಿಲ್ಲನ್ನು ಕೊಟ್ಟು ಮನಸ್ಸಿನಲ್ಲಿದ್ದ ತರಂಗಗಳನ್ನೆಲ್ಲಾ ಸದ್ಯಕ್ಕೆ ಹಾಗೆ ಬಚ್ಚಿಡುತ್ತಾ, ಭಾವನಾಳನ್ನು ಹೊರಕ್ಕೆ ಕರೆದುಕೊಂಡು ಬರುತ್ತಾನೆ.

ಹೊರಗಡೆ ನಿಂತಿದ್ದ ಕಾರನ್ನು ತೋರಿಸಿದ ಚಿರಂಜೀವಿ ಭಾವನಾಳನ್ನು ತಾನು ಡ್ರಾಪ್ ಮಾಡುವುದಾಗಿ ಮತ್ತೆ ಕೇಳುತ್ತಾನೆ. ಇನ್ನೂ ೭ ಗಂಟೆಯಾದುದರಿಂದ ಯಾವ ತೊಂದರೆಯೂ ಆಗುವುದಿಲ್ಲವೆನ್ನುವ ಧೈರ್ಯದ ಜೊತೆ, ಚಿರಂಜೀವಿ ತೋರಿಸಿದ ಆದಮ್ಯ ಸಭ್ಯತೆಯೆಲ್ಲಿ ನಂಬಿಕೆಯನ್ನಿಟ್ಟು.

"ನೋಡಿ ಮಿಸ್ಟರ್ ಚಿರಂಜೀವಿ, ನನ್ನನ್ನು (ಒಂದು ರಸ್ತೆಯ ಹೆಸರೇಳಿ) ಆ ರಸ್ತೆಯವರಿಗೂ ಬಿಟ್ಟರೆ ಸಾಕು, ಆ ಮೇಲೆ ನಾನೇ ಹೋಗುತ್ತೇನೆ" ಎಂದಳು. "ಖಂಡಿತವಾಗಿಯೂ ನೀವು ಇಲ್ಲಿಯೇ ಡ್ರಾಪ್ ಮಾಡಿ ಅಂದರೆ ಇಲ್ಲಿಯೆ ಡ್ರಾಪ್ ಮಾಡುತ್ತೇನೆ" ಇಬ್ಬರು ನಕ್ಕರು. ಎಡಗಡೆಯ ಬಾಗಿಲನ್ನು ತೆರೆದು ಭಾವನಾಳನ್ನು ಸೀಟಿನಲ್ಲಿ ಕೂರಿಸಿ ಮುಂದಿನಿಂದ ಬಲಗಡೆಗೆ ಬಂದು ಬಾಗಿಲು ತೆಗೆದು ಡ್ರೈವರ್ ಸೀಟಿನಲ್ಲಿ ಕುಳಿತು ಕಾರನ್ನು ನಿಧಾನವಾಗಿ ಓಡಿಸುತ್ತಾನೆ.

ಭಾವನಾ ಮನಸ್ಸಿನಲ್ಲೇ "ಎಷ್ಟೊಂದು ಸಭ್ಯ" ಎಂದುಕೊಳ್ಳುತ್ತಿದ್ದಾಳೆ. ಆಗಾಗ ವಿಸ್ಮಯಗೊಳಿಸುವ ಅವನ ಚುರುಕಾದ ಮುಖದ ರೇಖಾಕೃತಿಗಳನ್ನು ಹಾದುಹೋಗುವ ದೀಪಗಳ ಕೆಳಗೆ ನೋಡುತ್ತಾ ನೋಡುತ್ತಾ ಏನೋ ಒಂದು ಹೊಸ ಅನುಭವವನ್ನು ಪಡೆಯುತ್ತಿದ್ದಾಳೆ.

"ನಿಮಗೆ ಬಾಯ್‌ಫ್ರೆಂಡ್ಸ್ ಇಲ್ಲವೆ ?" ಚಿರಂಜೀವಿಯ ಮಾತಿನಿಂದ ಹೌಹಾರಿದ ಭಾವನಾ "ಇದ್ದಾರೆ, ಆದರೆ ನಿಜವಾದ ಬಾಯ್‌ಫ್ರೆಂಡ್ಸ್‌ಗಳು ಯಾರೂ ಇಲ್ಲ" ಎಂದಳು.

ಮೃದುವಾಗಿ ಅವಳಿಗೆ ಕೇಳಿಸಲೆಂದೇ ನಕ್ಕ ಚಿರಂಜೀವಿ "ಮೆಡಿಸನ್ ಓದುತ್ತಿದ್ದರೂ ಬಾಯ್‌ಫ್ರೆಂಡ್ಸ್ ಇಲ್ಲವೆ ? ಸಿನಿಮಾ ಆದರೂ ನೋಡುತ್ತೀರಾ ?" ಪ್ರಶ್ನಿಸಿದ.

ಏನೋ ಥಟ್ಟನೆ ಹೊಳೆದಂತಾಗಿ, "ಸಾರಿ, ಕಾರನ್ನು ಇಲ್ಲೇ ನಿಲ್ಲಿಸಿ" ಎಂದಳು. "ನೀವೇಳಿದ ರಸ್ತೆ ಇನ್ನೂ ಬರಲಿಲ್ಲವಲ್ಲ" ಎಂದು ಪಕ್ಕಕ್ಕೆ ತಿರುಗಿ ನೋಡಿದ. ಭಾವನಾ ಸುಮ್ಮನೆ ಇದ್ದರೂ ಸಣ್ಣಗೆ ರಿಯಾಕ್ಟ್ ಆಗಿದ್ದನ್ನು ಗಮನಿಸಿದ ಚಿರಂಜೀವಿ "ನನ್ನನ್ನು ಕ್ಷಮಿಸಿ ನಿಮ್ಮನ್ನು ಕೇಳಬಾರದಿತ್ತು" ಎನ್ನುತ್ತಲೇ ಬಲಕೈಯಲ್ಲಿ ಸ್ಟೀರಿಂಗ್ ತಿರುವಿಸುತ್ತಾ, ಎಡಕೈಯಲ್ಲಿ ಒಂದು ಸಣ್ಣ ಕೈ ಚೌಕ ತೆಗೆದು ಭಾವನಾಳ ತಲೆ ಹಿಂದೆ ಇಟ್ಟ. ಭಾವನಾ ಮುಂದಿನ ರಸ್ತೆಯನ್ನು ತೀಕ್ಷ್ಣವಾಗಿ ನೋಡುತ್ತಿದ್ದು ಕೈ ಚೌಕವನ್ನು ಗಮನಿಸಲಿಲ್ಲ. ಒಂದು ಒಳ್ಳೆಯ ಸುವಾಸನೆ ಭಾವನಾಳ ಮೂಗಿಗೆ ಬಂದಿದ್ದೆ ತಡ, ತಲೆ ತಿರುಗಿದಂತಾಗಿ ಜೋರಾಗಿ ಕಿರುಚಿಕೊಳ್ಳೋಣ ಎನ್ನುವಷ್ಟರಲ್ಲಿ ಚಿರಂಜೀವಿಯ ಎಡಕೈ ಭಾವನಾಳ ಬಾಯಿ ಮುಚ್ಚಿತ್ತು. ಕೇವಲ ಎರಡು ಮೂರು ಕ್ಷಣಗಳಷ್ಟೆ.

ಚಿರಂಜೀವಿಯ ಕಾರು ಎದುರಿಗೆ ಬಂದ ವೃತ್ತವನ್ನು ಸುತ್ತಿಕೊಂಡು ಅವನ ಮನೆಯ ಕಡೆ ಓಡತೊಡಗಿತು. ಭಾವನಾ ಆಯಾಸವಿಲ್ಲದೆ ನಿದ್ದೆಯಲ್ಲಿದ್ದಾಳೆ.



ಅದೊಂದು ಮಧ್ಯ ತರಗತಿಯ ಜನಗಳು ವಾಸಿಸುವ ಪ್ರದೇಶವಾಗಿದ್ದು, ಕಿಕ್ಕಿರಿದ ಜನ ಸಂದಣಿಯನ್ನು ತುಂಬಿಕೊಂಡಿರುವ ಗೂಡುಗಳಂತೆ ಮನೆಗಳು ಸಾಲುಸಾಲಾಗಿ ಕ್ರಮವಲ್ಲದ ರೀತಿಯಲ್ಲಿ ನಿಂತಿವೆ. ಜನರು ನೂರಾರು ರೀತಿಯ ಕಸುಬುಗಳಲ್ಲಿ ಬದುಕುವುದಕ್ಕಾಗಿಯೇ ಹೋರಾಡುತ್ತಿದ್ದಾರೆ.

ವಿನೋದ್ ತನ್ನ ಪುಸ್ತಕಗಳನ್ನೆಲ್ಲ ಹರಡಿಕೊಂಡು ೧೦ x ೧೦ ಅಡಿಯ ಕೊಠಡಿಯಲ್ಲಿ ಏನೋ ಓದುತ್ತಾ, ಏನೋ ಬರೆದುಕೊಳ್ಳುತ್ತಾ ಯಾವುದಾದರೂ ಕಥೆಯನ್ನು ಬರೆಯಬೇಕೆಂದು ಯೋಚಿಸುತ್ತಾ ಕಾಲ ಕಳೆಯುತ್ತಿದ್ದಾನೆ.

ಏನು ಬರೆದರೂ ಸರಿ, ಕನ್ನಡ ಪತ್ರಿಕೆಗಳ ಸಂಪಾದಕರು ಅವನ ಲೇಖನಿಗಳನ್ನು ಪ್ರಕಟಿಸಿದ್ದು ಮಾತ್ರ ಅಲ್ಲ. ಅವನೂ ಅಷ್ಟೇ ಬೇತಾಳನಂತೆ ಬಿಡಲೂ ಇಲ್ಲ. ಕನ್ನಡಿಗರ ಮೇಲೆ ಒಂದೊಂದು ಸಲ ಬಹಳ ಕೋಪ ಕಾರಿಕೊಳ್ಳುತ್ತಾನೆ. ಕನ್ನಡ ಜನ ಪತ್ರಿಕೆಗಳನ್ನು ಕೊಂಡುಕೊಳ್ಳುವುದು ಒಂದು ಕಡೆಗಿರಲಿ, ಓದುವ ಅಭ್ಯಾಸವಂತೂ ಇಲ್ಲವೆ ಇಲ್ಲ.

ಕವಿಯಾಗಿ ಹುಟ್ಟಿದರೆ ಮಲೆಯಾಳದಲ್ಲೊ, ಬಂಗಾಳದಲ್ಲೊ ಹುಟ್ಟಬೇಕೆಂದು ಕೊಳ್ಳುತ್ತಾನೆ. ಎಷ್ಟೋ ಕನ್ನಡ ಲೇಖಕರು, ಅವರ ಕಥೆಗಳು ಬೇರೆ ಭಾಷೆಗಳಲ್ಲಿ ಹೆಸರು ಗಳಿಸಿವೆ. ಈಗ ಸದ್ಯಕ್ಕೆ ಕನ್ನಡ ನೆಲೆಯಲ್ಲಿ ಹುಟ್ಟಿರುವುದರಿಂದ ಆಗೊಮ್ಮೆ ಈಗೊಮ್ಮೆ ಕನ್ನಡ ಜನಗಳನ್ನು ನಿಂದಿಸುತ್ತಾ ಬೆಂಗಳೂರಿನಲ್ಲೇ ಓಡಾಡುತ್ತಿದ್ದಾನೆ.

ತಂದೆ, ತಾಯಿ ಮಿಕ್ಕ ರಕ್ತ ಸಂಬಂಧವೆಲ್ಲ ದೂರದ ಊರಲ್ಲೆಲ್ಲೊ ಇದ್ದು, ವಿನೋದ್ ತಿಂಗಳಿಗೆ ಇಷ್ಟೂಂತ ಹಣ ಕಳಿಸಿ ತನ್ನ ಕೈತೊಳೆದುಕೊಳ್ಳುತ್ತಾನೆ.

ಬೆಳಿಗ್ಗೆಯಿಂದ ಸಾಯಂಕಾಲದವರೆಗೂ ಅಕ್ಕಪಕ್ಕದ ಮನೆಯವರಿಂದಿಡಿದು ಬೀದಿಗಳಲ್ಲಿ, ರಸ್ತೆಗಳಲ್ಲಿ, ತಾನಿರುವ ಆಫೀಸಿನಲ್ಲಿ ಎದುರಾಗುವ ಹೆಣ್ಣು ಮುಖಗಳನ್ನು ನೋಡಿ, ಓದಿ ತನ್ನಲ್ಲೇಳುವ ದಿನನಿತ್ಯದ ಕಾಮತರಂಗಗಳಲ್ಲಿ ಸಿಲುಕಿಕೊಂಡಿದ್ದಾನೆ. ಜೊತೆಗೆ ತಾನಿರುವ ಅಕ್ಕಪಕ್ಕದ ಮನೆಗಳ ಬಾಗಿಲುಗಳಲ್ಲಿ, ಕಿಟಕಿಗಳಲ್ಲಿ ಇನ್ನೂ ಅನೇಕ ಸಂದುಗೊಂದಿಗಳಲ್ಲಿ ಹಲವು ವಿಚಿತ್ರಗಳನ್ನು ನೋಡಿ ಉದ್ರೇಕಗೊಳ್ಳುತ್ತಾನೆ.

ಎಲ್ಲಕ್ಕಿಂತ ಮಿಗಿಲಾಗಿ ಪುರಾಣ ಕಥೆಗಳಿಂದ ಹಿಡಿದು ಇತ್ತೀಚಿನ ಮೂರನೇ ತರಗತಿಯ ಕನ್ನಡ ಸಿನಿಮಾಗಳ ನಾಯಕರಂತೆ ಹುಡುಗಿಯರ ಮುಂದೆ ಹಲವು ರೀತಿಯ ವಿಸ್ಮಯಗಳನ್ನು ಸೃಷ್ಟಿಸಿ ಅವರನ್ನು ಗೆಲ್ಲಬೇಕೆಂದುಕೊಳ್ಳುತ್ತಾನೆ.

ಐರೋಪ್ಯ ದೇಶಗಳಲ್ಲಿ ಕೊನೆಗೆ ಉಳಿಯುವ ಧೂಳನ್ನು 'ಡ್ರಾಪ್‌ಔಟ್' ಎಂದು ಕರೆಯುತ್ತಾರೆ. ಇವರೆ ಹಿಪ್ಪಿ ಜಿಪ್ಪಿಗಳೆಲ್ಲ. ಈ ಬೆಂಗಳೂರಿನಲ್ಲಿ ಅಂತಹ ಹೆಣ್ಣುಗಳು ಇದ್ದಾರೆ. ಆದರೆ ವಿನೋದ್ ಮಾತ್ರ ಅಲ್ಲಿಯೂ ಸಲ್ಲದೆ ಮಧ್ಯ ನಿಂತಿದ್ದಾನೆ. ಸದ್ಯಕ್ಕೆ ಕೈಯಲ್ಲೊಂದು ಉದ್ಯೋಗವಿದ್ದು ಇವೆಲ್ಲವನ್ನೂ ಯೋಚಿಸುವುದಕ್ಕೆ ಸಮಯಗಿಟ್ಟಿಸಿ ಕೊಂಡಿದ್ದಾನೆ.

ವಿನೋದ್ ಜೀವನದ ಮುಖ್ಯ ಆಕಾಂಕ್ಷೆ ಎಂದರೆ ಪ್ರೀತಿ ಮಾಡಿ ಮದುವೆಯಾಗುವುದು. ಈಗಾಗಲೇ ಯೋಚಿಸಿ ಯೋಚಿಸಿ ಹೆಣ್ಣುಗಳನ್ನು ಲೈನ್ ಹೊಡೆದು ಹೊಡೆದು ತಲೆಯಲ್ಲಿನ ಕೂದಲು ಉದುರಲು ಶುರುವಾಗಿದೆ.

ನಿಜವಾಗಿಯೂ ಹೆಣ್ಣು ಗಂಡು ತಮ್ಮ ಕಾಮ ಜೀವನದಲ್ಲಿ ಉಲ್ಲಾಸದ ಶಿಖರ ಮುಟ್ಟಬೇಕಾದರೆ ತಾರುಣ್ಯದ ಜೊತೆ ಅನುಭವವೂ ಬೇಕಂತೆ. ಈ ಮಾತನ್ನು

ಯಾರಿಂದಲೋ ತಿಳಿದುಕೊಂಡಿರುವ ವಿನೋದ್ ಬಹಳ ದಿನಗಳು, ತಿಂಗಳುಗಳು ಯೋಚಿಸಿ, ಅನುಭವವನ್ನು ಸಂಪಾದಿಸಿಕೊಳ್ಳಲು ಹೆಚ್ಚೆಚ್ಚು ಪುಸ್ತಕಗಳನ್ನು ತಿರುವಿ ಹಾಕಿದ್ದಾನೆ. ತನಗೆ ಹತ್ತಿರವಾದವರಲ್ಲೆಲ್ಲಾ ಕೇಳಿ ಕೇಳಿ ಉತ್ತರಗಳನ್ನು ಪಡೆದುಕೊಂಡಿದ್ದಾನೆ.

ಆದರೆ ಈಗ ಅವನಿಗೆ ಬೇಕಾಗಿರುವುದು ಪ್ರೇಯಸಿ, ಅದೂ ಕೂಡ ಪ್ರೀತಿಸಿ, ಪ್ರೇಮ ಸಲ್ಲಾಪ ನಡೆಸಿ ಅವನನ್ನು ವರಿಸಿ ಮದುವೆಯಾಗಬಯಸುವ ಹೆಣ್ಣು. ಅವನ ಹೆಂಡತಿ ಬಹಳ ಸುಂದರವಾಗಿ ಲಾವಣ್ಯವಾಗಿ ಅವನನ್ನು ಹೆಚ್ಚೆಚ್ಚು ರಮಿಸುವ ಪತ್ನಿಯಾಗಿರಬೇಕು. ಅದರ ಜೊತೆಗೆ ಇನ್ನೊಂದು ಮಾತು ಅವನನ್ನು ಆಗಾಗ ಕಾಡುತ್ತದೆ. ಸುಂದರ ಹೆಂಡತಿ ಗಂಡನಿಗೆ ಶತ್ರು ಎನ್ನುವುದು.

ಕನ್ನಡಿಯಲ್ಲಿ ಆಗಾಗ ಮುಖವನ್ನು ನೋಡಿಕೊಂಡು ತಾನು ಹುಟ್ಟಿದ ದಿನದಿಂದ ಇಂದಿನವರೆವಿಗೂ ಎಣಿಸುತ್ತಾ ಮನುಷ್ಯನ ಆಯುಷ್ಯ ಇಷ್ಟೊಂದು ಕಡಿಮೆಯೇ? ಎಂದುಕೊಳ್ಳುತ್ತಾನೆ. ತನಗೆ ಈಗ ೩೦ ವರ್ಷ ತುಂಬುತ್ತಿದೆ ಎಂದುಕೊಂಡಾಗ ಉಸಿರು ಗಕ್ಕನೆ ಗಂಟಲಿಗೆ ಬಂದು ಉಸಿರು ಕಟ್ಟಿದಂತಾಗಿ, ನಾಳೆಯೇ ಮದುವೆಯಾಗಬೇಕೆಂದುಕೊಳ್ಳುತ್ತಾನೆ.

ಇತ್ತೀಚೆಗೆ ಇನ್ನೊಂದು ದೊಡ್ಡ ಪ್ರಶ್ನೆ ಅವನನ್ನು ಹೆಬ್ಬಂಡೆಯಾಗಿ ಕಾಡತೊಡಗಿದೆ. ಮದುವೆಯಾಗುವುದಕ್ಕಿಂತ ಮುಂಚೆ ಹೆಣ್ಣನ್ನ 'ಕನ್ಯೆ' ಎಂದು ತಿಳಿದುಕೊಳ್ಳುವುದಾದರೂ ಹೇಗೆ ?

ಪೃಥ್ವಿಯ ಒಂದು ಕೊನೆಯಲ್ಲಿ ಉದಯಿಸುತ್ತಿದ್ದ ಇಜಿಪ್ಸಿಯನ್ ನಾಗರಿಕತೆಯ ಕಾಲದಲ್ಲಿ, ಹೆಣ್ಣನ್ನು ಮದುವೆಯಾದ ರಾತ್ರಿ ಬಿಳುಪು ಉಡುಪು ತೊಡಿಸಿ ಶೋಭನ ಮಾಡಿಸಿ ಬೆಳಿಗ್ಗೆ ರಕ್ತ ಕಲೆಗಳಿರುವ ಬಿಳಿಯ ಉಡುಪನ್ನೇ ಮನೆಯ ಮುಂದೆ ಜನರು ನೋಡುವುದಕ್ಕಾಗಿ ಇಡುತ್ತಿದ್ದು, ಆಗ ಮದುಮಗ (ರಾಜ) ಖುಷಿಯಾಗಿ ಭರ್ಜಿ ಹಿಡಿದು ಊರಲ್ಲೆಲ್ಲಾ ಶೂರನಂತೆ ಮೆರವಣಿಗೆ ಹೋಗುತ್ತಿದ್ದನಂತೆ.

ವಿನೋದ್ ಈಗ ೧೦ x ೧೦ ಅಡಿಯ ಕೋಣೆಯಲ್ಲಿ ಮರದ ಕಪ್ಪು ಹಲಗೆಯ ಮೇಲೆ ಕನ್ನಡದ ಕೆಲವು ಅಕ್ಷರಗಳನ್ನು ದೊಡ್ಡ ದೊಡ್ಡದಾಗಿ ಬರೆದು, ಅವುಗಳ ಕೆಲವು ಅಂಗಗಳನ್ನು ತನ್ನ ಯೋಚನೆಗೆ ತಕ್ಕದಾಗಿ ಮಡಿಸಿ, ಮುರಿದು ತಿದ್ದಿ, ತಿರಿವಿ ಏನೋ ಹೊಸ ಶೋಧನೆಯನ್ನು ಮಾಡುತ್ತಿದ್ದಾನೆ.

ಈ ಅಕ್ಷರಗಳಲ್ಲಿ ಹೆಣ್ಣಿನ ಎಲ್ಲಾ ಅಂಗಗಳನ್ನೂ ಕಂಡಿಡಿದು ಅವುಗಳಲ್ಲಿ ಬಣ್ಣಗಳನ್ನು ತುಂಬಿಸುತ್ತಿದ್ದಾನೆ. ಆ ಅಂಗಗಳು ಕೆಲವು ಹೆಣ್ಣಿನ ತೋಳುಗಳಾಗಿ,

ಎದೆಗಳಾಗಿ, ತೊಟ್ಟುಗಳಾಗಿ, ನಿತಂಬಗಳಾಗಿ ಇನ್ನೂ ಏನೇನೋ ಭಂಗಿಗಳಲ್ಲಿ ಅವನನ್ನು ಆಕರ್ಷಿಸುತ್ತವೆ. 'ಕನ್ನಡದ ವರ್ಣಮಾಲೆ' 'ಅ' ಇಂದ 'ಕ್ಷ' ವರೆವಿಗೂ ಹೆಣ್ಣಿನ ವೈಯ್ಯಾರವೇ ?

"Our entire cosmos has arisen out of the mutual love between 'PURUSH' and 'PRAKRITI' that is primordial being and primordial matter" ಎನ್ನುತ್ತದೆ ಒಂದು ತತ್ತ್ವ.

ಆದುದರಿಂದ ಕಾಸ್‌ಮಾಸ್‌ನ ಪ್ರತಿಯೊಂದು ಅಣುವು 'ಗಂಡಸುತನ' ಮತ್ತು 'ಸೌಂದರ್ಯ'ವನ್ನು ತುಂಬಿಕೊಂಡಿದೆ (ಸೌಂದರ್ಯ ಹೆಣ್ಣು).

ಇದೇ ರೀತಿಯಾಗಿ ಈಗ ವಿನೋದ್ ಒಂದು ರೀತಿಯ ಚಿಹ್ನೆ, ಗೆರೆಗಳನ್ನು ಭಾಷೆಯಾಗಿಸಿಕೊಂಡು ಕನ್ನಡ ಅಕ್ಷರಗಳಲ್ಲಿ ಹೆಣ್ಣಿನ ಪ್ರಾಕೃತಿಕ ಸೌಂದರ್ಯವನ್ನು ನೋಡುತ್ತಿದ್ದಾನೆ.

ಈಗ ವಿನೋದ್ ಹಲಗೆಯ ಮೇಲೆ ಬರೆದುಕೊಂಡು ನೋಡುತ್ತಿರುವ ಕೆಲವು ಅಕ್ಷರಗಳನ್ನು ನೀವು ದೊಡ್ಡದಾಗಿಸಿಕೊಂಡು ಅಂಗಾಂಗಳನ್ನು ಅವುಗಳಲ್ಲಿ ತುಂಬಿಕೊಂಡು ನೋಡಬಹುದು.

ಇ ಉ ಏ ಹೌ ಜ್ಞ ಇ

ಖ ಛ ಡ ದ ನ ಫ ಬ

ರ ಲ ಕ ಗ...?



ಚಿರಂಜೀವಿಯ ಕಾರು ಮನೆಯ ಮುಂದೆ ಕಾಂಪೌಂಡಿನ ಒಳಗೆ ನಿಂತುಕೊಂಡಿತು. ಮನೆಯ ಮುಂದೆಯೇ ಒಂದು ದೊಡ್ಡ ಮರವಿದ್ದು, ಸುತ್ತಲು ನೋಡಿದ. ಚಿರಂಜೀವಿ ಬಾಗಿಲು ತೆಗೆದುಕೊಂಡು ಹೊರಬಂದು ಮತ್ತೆ ಬಾಗಿಲು ಮುಚ್ಚಿ ಮನೆಯ ಬಾಗಿಲನ್ನು ತೆಗೆದಿಟ್ಟು, ಭಾವನಾಳ ದೇಹವನ್ನು ಅನಾಯಾಸವಾಗಿ ಒಳಕ್ಕೆ ಹೊತ್ತುಕೊಂಡು ಹೋದ. ಬಾಗಿಲು ಮುಚ್ಚಿಕೊಂಡಿತು.

ಭಾವನಾಳ ದೇಹ ಯಾವ ರೀತಿಯ ವಿರೋಧವು ತೋರಿಸದೆ ಸುಕೋಮಲವಾಗಿ ಹಾಸಿಗೆಯ ಮೇಲೆ ಬಿದ್ದಿದೆ. ಚಿರಂಜೀವಿ ಒಂದೊಂದೆ ಉಡುಪನ್ನು ಬಿಚ್ಚುತ್ತಾ ಅವಳ ರಮ್ಯವಾದ ಮುಖವನ್ನೇ ನೋಡುತ್ತಾ ಹತ್ತಿರಕ್ಕೆ ಬರತೊಡಗಿದ.

ತಾನು ಹತ್ತಿರದಿಂದ ನೋಡಿ ಅನುಭವಿಸಿದ ಮುಖಗಳಲ್ಲಿ ಭಾವನಾಳ ಮುಖ ಒಂದು ಮರೆಯಲಾರದ ಅಪರೂಪ ರೇಖಾಕೃತಿಯಾಗಿ ಅವನ ಮನದಲ್ಲಿ ಅಚ್ಚಾಗುತ್ತಾ ಹೋಗುತ್ತಿದೆ.

ನಿಜವಾಗಿಯೂ ಭಾವನಾಳನ್ನು ಈ ರೀತಿಯಾಗಿ ಮಾಡದೇ ಅವಳನ್ನು ಮೆಚ್ಚಿಸಿ ಅವಳ ಜೊತೆಗೆ ಸಲ್ಲಾಪ ನಡೆಸಿದ್ದರೆ ಎಷ್ಟೊಂದು ಸುಖ ಸಿಗುತ್ತಿತ್ತು ಎಂದುಕೊಳ್ಳುತ್ತಾ ಅವಳು ಧರಿಸಿದ್ದ ಬಟ್ಟೆಗಳನ್ನು ಒಂದೊಂದಾಗಿ ಬಿಚ್ಚುತ್ತಿದ್ದಾನೆ.

ಒಂದು ಶ್ರೇಷ್ಠ ಮಾದರಿ ಹೆಣ್ಣಿಗಿರಬೇಕಾದ ಸೌಂದರ್ಯವೆಲ್ಲ ಅವಳ ಅಂಗಾಂಗಗಳಲ್ಲಿ ತುಂಬಿಕೊಂಡಿದ್ದು, ಚಿರಂಜೀವಿ ಅವಳ ಒಂದೊಂದೇ ಅಂಗವನ್ನು ಮನಸ್ಸಿನ ತುಂಬಾ ತುಂಬಿಕೊಳ್ಳುತ್ತಿದ್ದಾನೆ.

ಗುಲಾಬಿಯ ದಳಗಳನ್ನು ಮಂಜಿನಲ್ಲಿ ತೊಳೆದಾಗ ತೋರುವ ನುಣುಪು ಕೆನ್ನೆಗಳು, ನೀಟಾಗಿ ಕಂಡೂ ಕಾಣಿಸದಂತೆ ಥ್ರೆಡ್ಡಿಂಗ್ ಮಾಡಿಸಿಕೊಂಡಿರುವ ಕಣ್ಣುಬ್ಬುಗಳು, ಅಗಲವಾದ ಹಣೆ, ಸಣ್ಣದಾಗಿ ಕಾಣುವ ಕೆನ್ನೆಯ ಗುಳಿಯನ್ನು ತೋರು ಬೆರಳಿಂದ ಮೃದುವಾಗಿ ಒತ್ತಿ ಗುಳಿಯ ಆಳವನ್ನು ನೋಡಿದ, ಕೋಮಲ ಮೂಗು. ಮೃದುವಾಗಿ ಮುಖವನ್ನು ಅವನ ಪುರುಷ ಕೈಗಳು ಸವರಿದವು.

ಈಗ ಅವನ ಕೈಗಳು ಗಲ್ಲದಿಂದ ಕೆಳಕ್ಕಿಳಿಯುತ್ತಾ ಎದೆಗಳ ಮೇಲೆ ಹರಿದಾಡಿದವು. ಸಂಪೂರ್ಣವಾದ ನಗ್ನದೇಹ, ಮೈ ಒಂದು ಅಪರೂಪವಾದ ಹೊಳಪಿನಿಂದ ಶೋಭಿಸುತ್ತಿದೆ. ಕೋಮಲ ಮೃದು ಎನ್ನುವ ಪದಗಳಿಗೆ ಅವನ ಬೆರಳುಗಳು ಈಗ ಅರ್ಥ ಹೇಳುತ್ತಿದ್ದವು. ಹೆಣ್ಣು ದೇಹ ಎಷ್ಟೊಂದು ಅದ್ಭುತ, ಎಷ್ಟೊಂದು ಆಕರ್ಷಕ. ಹೆಣ್ಣಿಗಾಗಿ ಪೃಥ್ವಿಯಲ್ಲಿ ಎಷ್ಟೊಂದು ರಕ್ತ ಹರಿದಿದೆ ಎನ್ನುವುದು ಸ್ವಲ್ಪ ಸ್ವಲ್ಪ ಅರ್ಥವಾದಂತಿದೆ ಅವನಿಗೆ.

ಕ್ಷಣಗಳು ಗೋಡೆಯ ಮೇಲೆ ಪಟಪಟನೆ ನಡೆಯುತ್ತಿದ್ದು, ಉಕ್ಕುವ ನದಿಗಳು ಸಮುದ್ರ ಸೇರುವಂತೆ ಅವನ ಬಯಕೆ ಕೊನೆಗೊಳ್ಳುತ್ತಾ ಬಂದಿತು.



ರಾತ್ರಿ ೯ ಗಂಟೆಯಾಗಿದ್ದು ಭಾವನಾ ತಾನು ಸೇರಬೇಕಾಗಿರುವ ಹಾಸ್ಟೆಲಿನ ಬಾಗಿಲು ಮುಂದೆ ಸ್ವಲ್ಪ ದೂರದಲ್ಲಿ ಗೋಡೆಯ ಪಕ್ಕದಲ್ಲಿ ಕುಕ್ಕುರುಗಾಲಲ್ಲಿ ಕುಳಿತಿದ್ದಾಳೆ. ಈಗ ಅವಳಿಗೆ ಅರೆಕೊರೆ ಪ್ರಜ್ಞೆ ಮೂಡುತ್ತಿದ್ದು ಜಾಗೃತಳಾಗುತ್ತಾಳೆ. ಕಪ್ಪಾಗಿ, ಮಬ್ಬು ಮಬ್ಬಾಗಿ ಅವಳ ಕಣ್ಣುಗಳಲ್ಲಿ ಎದುರಿನ ಆಕೃತಿಗಳು ಮೂಡಿಕೊಳ್ಳುತ್ತಿವೆ. ಒಮ್ಮೆಲೇ ಅವಳ ಹೃದಯ ಖಾಲಿಯಾದಂತಾಗಿ ತಾನಿರುವ

ಜಾಗದ ಬಗ್ಗೆ ಗುಮಾನಿಯಾಗಿ ಸುತ್ತಲೂ ತನ್ನ ಕಣ್ಣುಗಳಲ್ಲಿರುವ ಕೋನ್ಸ್‌ಗಳನ್ನು ಹಿಗ್ಗಿಸಿಕೊಂಡು ನೋಡುತ್ತಾಳೆ. ಆಯಾಸದ ಜೊತೆಗೆ ಎದ್ದು ನಿಂತುಕೊಳ್ಳಲೆತ್ನಿಸಿದಾಗ ತೊಡೆಗಳು ನಡುಗುತ್ತಿವೆ. ಇದ್ದಬದ್ದ ಶಕ್ತಿಯನ್ನೆಲ್ಲಾ ಒಟ್ಟುಗೂಡಿಸಿಕೊಂಡು ಎದ್ದು ನಿಂತು, ತನ್ನ ಕೈಗಳಿಂದ ಮೈಯೆಲ್ಲಾ ಮುಟ್ಟಿನೋಡಿಕೊಳ್ಳುತ್ತಾ, ಮನಸ್ಸಿನಲ್ಲೇ ಚೀರಿಕೊಳ್ಳುತ್ತಾಳೆ. ಕೈಯಲ್ಲಿದ್ದ ಗಡಿಯಾರ ೯.೧೦ ತೋರಿಸುತ್ತಿದೆ. ಸುತ್ತಲೂ ನೋಡಿದ ಭಾವನಾ ಹಾಸ್ಟೆಲ್ ಸಣ್ಣ ಗೇಟನ್ನು ತಳ್ಳಿಕೊಂಡು ಒಳಕ್ಕೆ ಪ್ರವೇಶಿಸುತ್ತಾಳೆ. ಒಬ್ಬರಿಬ್ಬರು ಎದುರಾದರೂ, ತನಗೆ ಹೆಚ್ಚು ಹತ್ತಿರದ ಗೆಳತಿಯರ್‍ಯಾರೂ ಎದುರಾಗದೆ ನೇರವಾಗಿ ತನ್ನ ಕೋಣೆಗೆ ಬಂದು ಬಾಗಿಲು ಮುಚ್ಚಿ ಕನ್ನಡಿಯಲ್ಲಿ ತನ್ನ ಮುಖ ನೋಡಿಕೊಳ್ಳುತ್ತಾಳೆ. ತನ್ನ ರೂಂಮೇಟ್ ಪಕ್ಕದ ರೂಮಿನಲ್ಲೊ ಅಥವಾ ಡೈನಿಂಗ್ ಹಾಲಿನಲ್ಲೊ ಇರುವುದರಿಂದ ಸಮಾಧಾನವಾಗಿ ಬಟ್ಟೆಗಳನ್ನು ಬಿಚ್ಚುತ್ತಿದ್ದಾಗ ಒಂದು ಕಾಗದ ಕೆಳಕ್ಕೆ ಬಿದ್ದ ಸದ್ದಾಗಿ, ಆ ಕಾಗದದಿಂದ ಇನ್ನಷ್ಟು ಭಯಪಟ್ಟವಳಂತೆ ತೆಗೆದುಕೊಳ್ಳಲೋ ಬೇಡವೋ ಎನ್ನುತ್ತಾ ಅರೆಘಳಿಗೆ ಯೋಚಿಸಿ, ಕೈಗೆ ತೆಗೆದುಕೊಂಡು ಬಿಚ್ಚಿ ನೋಡುತ್ತಾಳೆ.

ಇಂಗ್ಲಿಷ್‌ನಲ್ಲಿ ಬೆರಳಚ್ಚಿನ ಮೂರು ವಾಕ್ಯಗಳಿವೆ.

ನೀನು ಬಸಿರಾಗುವುದಿಲ್ಲ,

ನಾನು ಕ್ಷಮಾಪಣೆ ಕೇಳುತ್ತೇನೆ

ನನ್ನ ಹೆಸರು ಚಿರಂಜೀವಿಯಲ್ಲ

ಕಾಗದವನ್ನು ಆದಷ್ಟು ಹೆಚ್ಚಾಗಿ ಚೂರುಗಳು ಮಾಡಿ ಕಿಟಕಿಯಲ್ಲಿ ಬಿಸಾಡುತ್ತಾ ಬಟ್ಟೆ ಬದಲಾಯಿಸಿ ಹಾಸಿಗೆ ಮೇಲೆ ಉರುಳಿಕೊಂಡಳು. ಪೃಥ್ವಿ ನಿಧಾನವಾಗಿ ಪ್ರೊ.ಸಿ. ಚಂದ್ರಶೇಖರ್‌ರವರ ಬ್ಲಾಕ್‌ಡೊಲ್‌ನಲ್ಲಿ ನುಸುಳಿಕೊಂಡಂತಿದೆ ಅವಳಿಗೆ.



ಅರುಣಾಚಲ ಪ್ರದೇಶದಲ್ಲಿ ಅರುಣನ ಕಿರಣಗಳು ಮೊದಲಿಗೆ ಪರ್ವತಗಳನ್ನು ಚುಂಬಿಸುತ್ತಿರುವಾಗ ಮೂಡಿಕೊಳ್ಳುತ್ತಿರುವಾಗ, ಬೆಂಗಳೂರು ಇನ್ನೂ ನಸುಕಿನಲ್ಲೆ ತಂಪಾಗಿ ಸೊಂಪಾಗಿ ನಿದ್ದೆಯಲ್ಲಿದೆ. ಪೃಥ್ವಿ ಪೂರ್ವದಿಂದ ಪಶ್ಚಿಮಕ್ಕೆ ಸುತ್ತಿಕೊಳ್ಳುತ್ತಿರುವಂತೆ ಅರುಣ ಕಿರಣಗಳು ಬೆಂಗಳೂರಿನ ಮೇಲೆ ಪಸರಿಸುತ್ತವೆ. ತಂಪಿಗೆ ರಾತ್ರಿಯೆಲ್ಲಾ ಒಂದುಗೂಡಿ ಹೆಪ್ಪುಗಟ್ಟಿದ್ದ ಆಮ್ಲಜನಕ ಮತ್ತು ಜಲಜನಕದ ಕಣಗಳ ಸಂಕೋಲೆ ಕಿರಣಗಳ ಸ್ಫೋಟದಿಂದ ಬಿಚ್ಚಿಕೊಳ್ಳುತ್ತಾ ಬೆಳಕು ಇನ್ನಷ್ಟು ಸ್ಪಷ್ಟವಾಗಿ ಮೂಡುತ್ತಿದೆ.

ವಿನೋದ್‌ಗೆ ಇನ್ನೊಂದು ಸ್ವಶಕ್ತಿ ಕೂಡ ಇದೆ. ತನಗೆ ಕಾಣಿಸುವ ಕೆಲವು ಸುಂದರ ಮುಖ ರೇಖಾಕೃತಿಗಳನ್ನು ಕಣ್ಣುಗಳ ತುಂಬಾ ತುಂಬಿಕೊಂಡು ಮಿದುಳಿನಲ್ಲಿ ಮುದ್ರಿಸಿಕೊಳ್ಳುತ್ತಾನೆ. ನಂತರ ರಾತ್ರಿ ಮಲಗಿದ ಮೇಲೆ ಅವುಗಳನ್ನು ಮತ್ತಷ್ಟು ಸಂಯೋಗಿಸಿ ಬಯಸುವ ರೀತಿಯಲ್ಲಿ ಯೋಚಿಸುತ್ತಾ ಹೋಗುತ್ತಾನೆ. ನಿದ್ದೆ ನಿಧಾನವಾಗಿ ಶುರುವಾಗಿ ಗಾಡವಾಗಿ ಮತ್ತೆ ಬೆಳಗಿನ ಜಾವದ ಅರೆ ಎಚ್ಚರದಲ್ಲಿರುವಾಗ ಮುದ್ರೆಗೊಂಡಿರುವ ಕಣಗಳು ಸಂಯೋಗಗೊಂಡು ಅವನ ಯೋಚನಾಕ್ರಮದಲ್ಲಿ ಪ್ರತಿಕ್ರಿಯೆಗೊಳ್ಳುತ್ತವೆ. ಆಗ ಅವನು ಅಚ್ಚುಮಾಡಿಕೊಂಡಿದ್ದ ಹೆಣ್ಣು ಮುಖಗಳು ಇನ್ನಷ್ಟು ಸ್ಫುಟುವಾಗಿ ಲಾವಣ್ಯವಾಗಿ ಅವನ ಜೊತೆ ಆಡಿಕೊಳ್ಳುತ್ತವೆ. ಹೀಗೆ ತಾನು ಬಯಸುವ ಹೆಣ್ಣುಗಳ ಜೊತೆ ಶ್ರೀ ಕೃಷ್ಣನಂತೆ 'ಪ್ಲೂಟಾನಿಕ್' ಪ್ರೇಮದಲ್ಲಿ ಒಂದು ಪೈಸೆಯೂ ಖರ್ಚಿಲ್ಲದೆ, ಅಪಾಯವಿಲ್ಲದೆ ತನ್ನನ್ನು ತಾನೇ ತೊಡಗಿಸಿಕೊಳ್ಳುತ್ತಾನೆ.

ಅಕ್ಕಪಕ್ಕದ ಮನೆಗಳು ದೈನಂದಿನ ಕಾರ್ಯಕ್ರಮಗಳಲ್ಲಿ ತೊಡಗಿಕೊಂಡಂತೆ ವಿನೋದ್‌ನ ಬಣ್ಣದ ಕನಸುಗಳು ಕಳಚಿಕೊಳ್ಳುತ್ತವೆ. ತಾನು ಆಫೀಸಿಗೆ ಹೋಗಬೇಕಾಗಿರುವುದರಿಂದ ದೈನಂದಿನ ಕಾರ್ಯಗಳನ್ನು ಮುಗಿಸಿ ಒಂದಿಷ್ಟು ತಿಂಡಿ ಮಾಡಿ ತಿಂದು, ಸ್ವಲ್ಪ ಕ್ಯಾರಿಯರ್ ತುಂಬಿಕೊಂಡು ಕೆಲವು ಕನ್ನಡ ಪುಸ್ತಕಗಳನ್ನು ಕೈಚೀಲದಲ್ಲಿಟ್ಟುಕೊಂಡು ಬಿ.ಟಿ.ಎಸ್. ನಿಲ್ದಾಣಕ್ಕೆ ಹೆಜ್ಜೆ ಹಾಕುತ್ತಾನೆ.

ದಿಢೀರನೆ ಏನೋ ಜ್ಞಾಪಕಕ್ಕೆ ಬಂದು ಬೀದಿಯ ಇನ್ನೊಂದು ಕಡೆ ಇರುವ ಕ್ಯಾಸೆಟ್ ಅಂಗಡಿಗೆ ಹೋಗಿ ಕ್ಯಾಸೆಟ್ ಕೇಳುತ್ತಾನೆ. ವಿನೋದ್ ಮುಖ ನೋಡಿದ ಕ್ಯಾಸೆಟ್ ಭಂಡಾರದವನು ಒಳಕ್ಕೆ ಕರೆದುಕೊಂಡುಹೋಗಿ ಎರಡು ಮೂರು ಕ್ಯಾಸೆಟ್‌ಗಳನ್ನು ತೆಗೆದು ತೋರಿಸಿ ವಿನೋದ್‌ನ ಮುಖ ನೋಡುತ್ತಾನೆ. ಮತ್ತೆ ಭಂಡಾರದವ "ಸಾರ್ ಸಿಂಗಲ್ ಎಕ್ಸೋ, ಡಬಲ್ ಎಕ್ಸೊ, ತ್ರಿಭಲ್ ಎಕ್ಸೋ ಅಥವಾ ಅನಿಮಲ್ಲೋ" ಕೇಳುತ್ತಾನೆ. ಗಾಬರಿಗೊಂಡ ವಿನೋದ್ ಮಿಕಮಿಕನೆ ಅವನ ಮುಖ ನೋಡುತ್ತಾ ಸಿಂಗಲ್ ಎಕ್ಸ್, ಡಬಲ್ ಎಕ್ಸ್, ತ್ರಿಬಲ್ ಎಕ್ಸ್, ಅನಿಮಲ್ ಇವೆಲ್ಲಕ್ಕೂ ವ್ಯತ್ಯಾಸವೇನು? ಎನ್ನುತ್ತಾನೆ ಬಹಳ ನಾಚಿಕೆಪಡುತ್ತಾ. ಅಷ್ಟರಲ್ಲಿ ಕೌಂಟರ್‌ನಿಂದ ಯಾರೋ ಕರೆಯುತ್ತಾರೆ. "ಸ್ವಲ್ಪ ಇರಿ" ಎನ್ನುವ ಮಾತುಗಳು ಒಳಗಿಂದ ಹೊರಕ್ಕೆ ಬರುತ್ತವೆ.

"ನೋಡಿ ಸಾರ್ ನೀವು ಮದುವೆಯಾಗಿದ್ದೀರೋ ಇಲ್ಲವೋ?"

"ಮದುವೆ ಆಗಿರುವುದಕ್ಕೂ ಇದಕ್ಕೂ ಏನು ಸಂಬಂಧ?"

"ಇದೆ ಸಾರ್. ಸಿಂಗಲ್ ಎಕ್ಸ್ ಮದುವೆ ಆಗದವರಿಗೆ, ಡಬಲ್ ಎಕ್ಸ್

ಹೊಸದಾಗಿ ಮದುವೆ ಆದವರಿಗೆ, ಇನ್ನು ತ್ರಿಭಲ್ ಎಕ್ಸ್ ಮದುವೆಯಾಗಿ ಮಕ್ಕಳಾಗಿರುವವರಿಗೆ. ಇನ್ನು ಅನಿಮಲ್ಲಂತೂ ಬೆಂಗಳೂರಿನವರಿಗಲ್ಲ ಬಿಡಿ" ಎಂದ.

ಮತ್ತೆ ಕೌಂಟರ್‌ನಿಂದ ಕರೆ ಬಂದು, ಒಂದು ನಿಮಿಷ ಇರಿ ಎನ್ನುತ್ತಾ ಕೌಂಟರ್‌ಗೆ ಬಂದು ಕೇಳಿದ ಕ್ಯಾಸೆಟ್ಟೊಂದನ್ನು ಗಿರಾಕಿಗೆ ಕೊಟ್ಟು ಮತ್ತೆ ಒಳ ಬರುತ್ತಾನೆ. ವಿನೋದ್ ಅಷ್ಟರಲ್ಲಿಯೇ ಒಂದು ನಿರ್ಧಾರಕ್ಕೆ ಬಂದು "ತ್ರಿಭಲ್ ಎಕ್ಸ್ ಕೊಡಿ" ಎನ್ನುತ್ತಾನೆ. "ಇಪ್ಪತ್ತು ರೂಪಾಯಿ ಕೊಡಿ" ಎನ್ನುತ್ತಾ ಹಣ ತೆಗೆದುಕೊಂಡು ಕ್ಯಾಸೆಟ್‌ನ್ನು ಕೈ ಚೀಲದೊಳಕ್ಕಿಟ್ಟು "ಭದ್ರ ನಾಳೆ ಇಷ್ಟೊತ್ತಿಗೆ ಕೊಡಬೇಕು ಇಲ್ಲ ಅಂದರೆ ಮತ್ತೆ ಹಣ ಕೊಡಬೇಕಾಗುತ್ತದೆ" ಎಚ್ಚರಿಸುತ್ತಾನೆ.

ವಿನೋದ್ ಸುತ್ತಲೂ ನೋಡುತ್ತಾ ಬಿ.ಟಿ.ಎಸ್. ಬಸ್ಸಿಡಿದು ತಾನು ಸೇರಬೇಕಾಗಿರುವ ಆಫೀಸಿನೊಳಕ್ಕೆ ನಡೆದು ಬರುತ್ತಾನೆ. ಇನ್ನೂ ೧೦ ನಿಮಿಷ ಇರುವುದರಿಂದ ತನ್ನ ಕೈ ಚೀಲಗಳನ್ನು ಗೋದ್ರೆಜ್ ಡ್ರಾಯರ್‌ನಲ್ಲಿಟ್ಟು ಟಾಯ್ಲೆಟ್ ಒಳಕ್ಕೆ ಹೋಗುತ್ತಾನೆ.

ಅದೊಂದು ಉನ್ನತ ಕಟ್ಟಡದಲ್ಲಿರುವ ಕಚೇರಿ. ಹಲವು ವಿಭಾಗಗಳ ಕಚೇರಿಗಳನ್ನು ಹೊಂದಿರುವ ಆ ಕಟ್ಟಡದಲ್ಲಿ ಲಿಫ್ಟ್ ಮೇಲಿಂದ ಕೆಳಕ್ಕೆ, ಕೆಳಗಿನಿಂದ ಮೇಲಕ್ಕೆ ಒಂದೇ ಸಮನೆ ಉಸಿರು ಬಿಡುತ್ತಾ ಓಡಾಡುತ್ತದೆ. ಹಲವು ಎಕ್ಸಿಕ್ಯೂಟಿವ್‌ಗಳು ಮತ್ತು ಅಧಿಕಾರಿಗಳು ಇರುವ ಆ ಕಟ್ಟಡದಲ್ಲಿ ಅವರಿಗೆ ಒಂದು ಪ್ರತ್ಯೇಕವಾದ ಲಿಫ್ಟ್ ಕೂಡ ಇದೆ.



ಪವನ್ ಎಂದಿನಂತೆ ಬ್ರೀಫ್‌ಕೇಸನ್ನು ಮೇಜಿನ ಮೇಲಿಟ್ಟು ಪ್ರಾಚಿಯನ್ನು ತೋಳುಗಳ ತುಂಬಾ ತುಂಬಿಕೊಂಡು ಒಂದು ಹಗುರವಾದ ಮುತ್ತನ್ನು ಅವಳ ತುಟಿಗಳ ಮೇಲೆ ಒತ್ತಿ ಎದೆಗಳ ಮೇಲೆ ನವಿರಾಗಿ ಕೈಯಾಡಿಸಿ, ಮನೆಯಿಂದ ಹೊರಕ್ಕೆ ಬಂದು ಕಾರಿನಲ್ಲಿ ಕುಳಿತುಕೊಳ್ಳುತ್ತಾನೆ. ಕಚೇರಿಯ ಕಾರು ನಿಧಾನವಾಗಿ ಧಾವಿಸುತ್ತಾ ಅದೇ ಕಟ್ಟಡದ ಮುಂದೆ ನಿಲ್ಲುತ್ತದೆ. ಕಾರಿಂದಿಳಿದ ಪವನ್ ಬ್ರೀಫ್‌ಕೇಸನ್ನ ಕೈಯಲ್ಲಿಡಿದುಕೊಂಡು ಪ್ರತ್ಯೇಕ ಲಿಫ್ಟ್ ಮುಖಾಂತರ ತನ್ನ ಕೋಣೆ ಸೇರಿಕೊಳ್ಳುತ್ತಾನೆ.

ಪವನ್ ಖಾಸಗೀ ಕಾರ್ಯದರ್ಶಿ ಅಂದಿನ ಕಾರ್ಯಕ್ರಮಗಳನ್ನು ಒಮ್ಮೆ ನಿವೇದಿಸುತ್ತಾನೆ. ಪವನ್ ಕೆಲವು ಮುಖ್ಯವಾದ ವಿಷಯಗಳನ್ನು ಡೆಸ್ಕ್ ಕ್ಯಾಲೆಂಡರ್‌ನಲ್ಲಿ ಟಿಪ್ಪಣಿ ಮಾಡಿಕೊಂಡು ವಿನೋದ್‌ನನ್ನು ಒಳಕ್ಕೆ ಕಳಿಸುವಂತೆ ಆದೇಶಿಸುತ್ತಾನೆ.

ವಿನೋದ್ ಬಾಗಿಲು ತಳ್ಳಿ ಕ್ಷಮೆ ಕೇಳುತ್ತಾ ಒಳಗೆ ಪ್ರವೇಶಿಸುತ್ತಾನೆ. ಪವನ್ ನಂ. ೧ ಅಮೇರಿಕನ್ ಕ್ಲಬ್ ಸಿಗರೇಟ್ ಒಂದನ್ನು ಬಾಯಲ್ಲಿಟ್ಟುಕೊಂಡು ಯಾವುದೋ ಫೈಲನ್ನು ಏಕಾಗ್ರತೆಯಿಂದ ನೋಡುತ್ತಿದ್ದಾನೆ.

ಫೈಲ್‌ನಿಂದ ತಲೆ ಎತ್ತದೆ ಪವನ್ ವಿನೋದ್‌ನನ್ನು ಕುಳಿತುಕೊಳ್ಳುವಂತೇಳಿ ಹೇಳುತ್ತಾ ಹೋಗುತ್ತಾನೆ. ವಿನೋದ್ ಟೈಪ್ ಮಾಡುತ್ತಾ ಹೋಗುತ್ತಾನೆ. ಕೊನೆ ಪದ ಹೇಳಿದ ಪವನ್ ಹಗುರವಾಗಿ ನಕ್ಕು ವಿನೋದ್ ಬಗ್ಗೆ ಎರಡು ಪದಗಳ ಮೆಚ್ಚಿಗೆ ಸೂಚಿಸಿ "ಯಾವಾಗ ಮದುವೆಯಾಗುತ್ತೀಯಾ ವಿನೋದ್" ಎಂದ.

ವಿನೋದ್ ಅರೆಘಳಿಗೆ ನೀರಿಳಿದವನಂತೆ ತಬ್ಬಿಬ್ಬಾಗಿಬಿಟ್ಟ. "ಸರಿ ನೀನೋಗಬಹುದು" ವಿನೋದ್ ಎದ್ದು ವಂದನೆಗಳನ್ನು ತಿಳಿಸಿ ತನ್ನ ಕುರ್ಚಿಯ ಕಡೆಗೆ ನಡೆಯತೊಡಗಿದ.

ಅದೊಂದು ಖಾಸಗಿ ಕಾರ್ಯಾಲಯವಾದುದರಿಂದ ಎಲ್ಲರೂ ತಮ್ಮ ತಮ್ಮ ಕೆಲಸದಲ್ಲಿ ಮಗ್ನರಾಗಿದ್ದಾರೆ. ತಲೆಯ ಮೇಲಿನ ಫ್ಯಾನ್‌ಗಳು ಮಂದವಾಗಿ ತಿರುಗುತ್ತಿದ್ದರೆ, ಟ್ಯೂಬ್ ಲೈಟುಗಳು ಬೆಳ್ಳಗೆ ಬೆಳಗುತ್ತಿವೆ.

ಖಾಸಗಿ ಕಾರ್ಯದರ್ಶಿಗಳನ್ನು ಒಳಕ್ಕೆ ಕರೆಸಿದ ಪವನ್ ತಾನು ಒಂದು ಸ್ಥಳಕ್ಕೆ ಹೋಗಬೇಕಾಗಿರುವ ವಿಷಯ ತಿಳಿಸಿ ಮತ್ತೆ ಒಂದು ಗಂಟೆ ಒಳಗೆ ಕಚೇರಿಗೆ ಬರುವುದಾಗಿ ಹೇಳಿ ಕಾರಿನಲ್ಲಿ ಕುಳಿತು ಹೊರಡುತ್ತಾನೆ.

ಸ್ವಲ್ಪ ಸಡಿಲಗೊಂಡ ಕಾರ್ಯದರ್ಶಿ ನಿಧಾನವಾಗಿ ಹಾಲಿಗೆ ಬಂದು ಒಬ್ಬೊಬ್ಬರನ್ನೇ ಗಮನಿಸುತ್ತಾ ವಿನೋದನ ಪಕ್ಕದಿಂದ ಹಾದು ಹೋಗುವಾಗ ಅವನ ಡ್ರಾಯರ್‌ಲ್ಲಿ ಉಚ್ಚಿ ಕುಳಿತಿರುವ ಕೈಚೀಲವನ್ನು ನೋಡಿ ವಿನೋದನ ಎದುರಿಗಿದ್ದ ಕುರ್ಚಿಯಲ್ಲಿ ಕುಳಿತುಕೊಳ್ಳುತ್ತಾನೆ. ಪಕ್ಕದ ಕುರ್ಚಿಗಳಲ್ಲಿರುವ ಅವರ ಕಡೆ ನೋಡುತ್ತಾರೆ.

ವಿರಾಮದ ವೇಳೆಯಲ್ಲಿ ಸ್ವಲ್ಪ ಸಲಿಗೆಯಿಂದ ವರ್ತಿಸುವ ಕಾರ್ಯದರ್ಶಿಯನ್ನು ಆಗಾಗ ಕೆಲವು ಸೀನಿಯರ್ ಸಹೋದ್ಯೋಗಿಗಳು ತಮಾಷೆಗಳು ಮಾತನಾಡಿಸುವುದುಂಟು. ಆದರೆ ಈ ದಿನವೇಕೋ ವಿನೋದ್ ಮುಂದೆ ಕುಳಿತಿರುವುದರಿಂದ ಸ್ವಲ್ಪ ಆಶ್ಚರ್ಯವಾಗಿ, ಆ ಕಡೆ ನೋಡುತ್ತಾರೆ. "ಏನು ವಿನೋದ್ ಇವೊತ್ತು ಒಳ್ಳೆ ತಿಂಡಿಯೇ ತಂದಿರಬೇಕೂ ಎಂದು ಗೋಡ್ರೇಜ್ ಡ್ರಾಯರಿನಲ್ಲಿರುವ ಕೈಚೀಲದ ಮೇಲೆ ಕೈ ಇಟ್ಟಾಗ, ಹೌಹಾರಿದ ವಿನೋದ್ ಡ್ರಾಯರ್ ಮುಚ್ಚಿ "ಕ್ಷಮಿಸಿ ಸಾರ್, ಅದರಲ್ಲಿ ಏನೂ ಇಲ್ಲ" ಎಂದ. ಅವನು ಹೇಳಿದ ರೀತಿಯಲ್ಲಿ ಏನೋ ಇದೆ ಎನ್ನುವಂತೆ ಕಾರ್ಯದರ್ಶಿ ಕೈಚೀಲವನ್ನು ತನ್ನ ಕೈಗೆ ತೆಗೆದುಕೊಂಡ. ಈಗ

ನಿಜವಾಗಿಯೂ ವಿನೋದ್ ಮತ್ತೆ ವಿರೋಧಿಸದೆ ಪೇಲವ ಮುಖ ಹಾಕಿಕೊಂಡು ಕೈಚೀಲದ ಕಡೆಯೇ ನೋಡುತ್ತಾ ಕುಳಿತುಕೊಂಡ.

ಈಗ ಕ್ಯಾಸೆಟ್ ಕಾರ್ಯದರ್ಶಿಯ ಕೈಯಲ್ಲಿತ್ತು. "ನೋಡು ವಿನೋದ್ ನಾನು ಬೆಳಿಗ್ಗೆ ಮನೆಯಿಂದ ಬಂದಾಗ ವಿ.ಸಿ.ಆರ್. ತೆಗೆದಿಟ್ಟು ಬಂದಿದ್ದೇನೆ. ನಾಳೆ ತಂದು ಕೊಡುತ್ತೇನೆಂದು" ತನ್ನ ಕುರ್ಚಿಯ ಕಡೆ ನಡೆದೇಬಿಟ್ಟ.

ಸದ್ಯಕ್ಕೆ ಆ ಕ್ಯಾಸೆಟ್‌ನ ಮೇಲೆ ಒಂದು ಇಂಗ್ಲಿಷ್ ಸಿನಿಮಾ ಹೆಸರಿದ್ದುದರಿಂದ ವಿನೋದ್ ತುಸು ಉಸಿರಾಡಿದ್ದ. ಆದರೆ ಅದನ್ನು ವಿ.ಸಿ.ಆರ್ ನಲ್ಲಿ ನೋಡಿದ ಮೇಲೆ ಏನಾಗಬಹುದು?

ಮತ್ತೆ ಸ್ವಲ್ಪ ಸಮಯದ ನಂತರ ಕಾರ್ಯದರ್ಶಿಯ ಹತ್ತಿರ ಹೋಗಿ "ಸಾರ್ ಅದು ಅದು ಬ್ಲೂಪಿಲ್ಮ್ ಸಾರ್" ಎಂದೇಳಿದ. ಜೋರಾಗಿ ನಕ್ಕ ಕಾರ್ಯದರ್ಶಿ "ನೀನೂ ಬ್ಲೂಫಿಲ್ಮ್" ಎನ್ನುತ್ತಾ ಜೋರಾಗಿ ನಗತೊಡಗಿದ. ಮತ್ತೊಮ್ಮೆ ಪೇಲವ ಮುಖ ಹಾಕಿಕೊಂಡ ವಿನೋದ್ ತನ್ನ ಕುರ್ಚಿಯಲ್ಲಿ ತಲೆಯ ಮೇಲೆ ಕೈ ಹೊತ್ತು ಕುಳಿತುಬಿಟ್ಟ. ಶೀಘ್ರಕೋಪಿ ಕಾರ್ಯದರ್ಶಿಯನ್ನು ಮತ್ತೊಮ್ಮೆ ಕೆಣಕುವ ಧೈರ್ಯವಿಲ್ಲದೆ ವಿನೋದ್ ಸುಮ್ಮನಾಗಿಬಿಟ್ಟ.



ಕಾರ್ಯದರ್ಶಿ ಖುಷಿಯಿಂದ ಮನೆ ತಲುಪಿದ್ದೆ ಕ್ಯಾಸೆಟ್‌ನ್ನು ತನ್ನ ಹೆಂಡತಿಗೆ ಕೊಟ್ಟು ಒಂದು ಒಳ್ಳೆ ಇಂಗ್ಲಿಷ್ ಸಿನಿಮಾ ತಂದಿದ್ದೇನೆ ನೋಡು ಎಂದೇಳಿ ಬಟ್ಟೆ ಬದಲಾಯಿಸಲು ಸ್ನಾನಗೃಹ ಸೇರಿದ.

ಕನ್ನಡ ಕ್ಯಾಸೆಟ್ ತರಬಾರದಿತ್ತೆ. ಹೋಗಿ ಹೋಗಿ ಇಂಗ್ಲಿಷ್ ಅಂತೆ ಇಂಗ್ಲಿಷ್ ಯಾವುದಾದರು ಹೊಸ ಕನ್ನಡ ಸಿನಿಮಾ ತರಬಾರದೆ ಎಂದು ಗೊಣಗುತ್ತಾ ಆ ಕ್ಯಾಸೆಟ್ಟನ್ನು ಮೇಜಿನ ಮೇಲಿಟ್ಟಳು. ಈಗಾಗಲೇ ಬೆಳಿಗ್ಗೆಯಿಂದ ಅಡೆತಡೆ ಇಲ್ಲದೆ ವಿ.ಸಿ.ಆರ್‌ನಲ್ಲಿ ಸಿನಿಮಾಗಳನ್ನು ನೋಡುತ್ತಿರುವ ಮನೆಮಂದಿ, ಅಕ್ಕಪಕ್ಕದ ಹೆಂಗಸರು ಮಕ್ಕಳು ಮತ್ತು ಪಡ್ಡೆ ಹುಡುಗರು ಆ ಕ್ಯಾಸೆಟ್ಟನ್ನು ತೆಗೆದುಕೊಂಡು ನೋಡುತ್ತಿದ್ದಾರೆ. ಹಿಂದೆ ನಿಂತಿರುವ ಕೆಲವು ಹುಡುಗರು ಮನೆಯ ಹುಡುಗನನ್ನು ಇಂಗ್ಲಿಷ್ ಕ್ಯಾಸೆಟ್ ಹಾಕುವಂತೆ ಮನ ಒಲಿಸುತ್ತಿದ್ದಾರೆ.

ಕ್ಯಾಸೆಟ್ಟನ್ನು ಕೈಗೆ ತೆಗೆದುಕೊಂಡು ವಿ.ಸಿ.ಆರ್ ಹತ್ತಿರ ಹೋಗಿರುವ ಅವನನ್ನು ನೋಡಿದ ತಾಯಿ "ಅದೇನು ಇಂಗ್ಲಿಷೋ ಮಡಗತ್ತ" ಎಂದಳು.

"ಮೋ... ನೀನಿರಮ್ಮ ನಿನಗೇನು ಗೊತ್ತು, ಇಂಗ್ಲಿಷು ನೋಡು ಹೇಗಿರುತ್ತೋ ಕನ್ನಡ ಅಂತೆ ಕನ್ನಡ, ಇವೆಲ್ಲಾ ಸಿನಿಮಾಗಳ" ಎಂದ.

"ಹೋಗ್ಲಿ, ಇರಪ್ಪ ಮಾತುಗಳೇ ಕೇಳಸ್ತಾ ಇಲ್ಲ" ಎಂದರು ಗುಂಪಿನಲ್ಯಾರೋ. ಅಷ್ಟರಲ್ಲಿ ಕಾರ್ಯದರ್ಶಿ ಬಂದು ಈ ಸಿನಿಮಾ ಆದ ಮೇಲೆ ವಿ.ಸಿ.ಆರ್ ನಿಲ್ಲಿಸಿ ಮತ್ತೆ ಊಟಮಾಡಿ ರಾತ್ರಿಗೆ ಹಾಕಿಕೊಳ್ಳೋಣವೆಂದು ತಿಳಿಸುತ್ತಾನೆ. ೫೦ ರೂಪಾಯಿ ಕೊಡಬೇಕು ವಿ.ಸಿ.ಆರ್ ನಿಲ್ಲಿಸಿಬಿಟ್ಟರೆ ಎನ್ನುತ್ತಾರೆ ಯಾರೋ ?

ಕನ್ನಡ ಸಿನಿಮಾ ಮುಗಿಯುತ್ತಾ ಬಂದಿದ್ದು, ಹುಡುಗ ಇಂಗ್ಲಿಷ್ ಕ್ಯಾಸೆಟ್ ತೆಗೆದುಕೊಂಡು ವಿ.ಸಿ.ಆರ್ ಹತ್ತಿರ ಬಂದ.

"ಎಲ್ಲಾ ಇನ್ನೊಂದು ಗಂಟೆ ಬಿಟ್ಟು ಬನ್ನಿ" ಯಜಮಾನ ಹೇಳಿದ. ಕೆಲವರು ಎದ್ದು ನಿಂತರೆ, ಕೆಲವರು ಸಂದೇಹ ಬಂದು ಕೂತು, ನಿಂತು ವಿ.ಸಿ.ಆರ್ ಕಡೆ ನೋಡುತ್ತಲೇ ಇದ್ದಾರೆ. ಹುಡುಗ ಕನ್ನಡ ಕ್ಯಾಸೆಟ್ಟನ್ನು ಹೊರಕ್ಕೆ ತೆಗೆದು ಇಂಗ್ಲಿಷ್ ಕ್ಯಾಸೆಟ್ಟನ್ನು ಹಾಕಿ ಬಟನ್ ಒತ್ತಿದ. ಕ್ಯಾಸೆಟ್ ರಿವರ್ಸ್ ಆಗಿ ತಿರುಗುತ್ತಾ ಟಿಕ್ ಎಂದು ನಿಂತುಕೊಂಡಿತು. ಮತ್ತೆ ಬಟನ್ ಒತ್ತಿದ.

ರೀಲು ಸುತ್ತುತ್ತಾ ಹೋಗಿ ನೇರವಾಗಿ ಒಂದು ಮನೆ ಬಂತು. ಮನೆಯಲ್ಲೊಂದು ಹಾಸಿಗೆಯ ಮೇಲೆ ಗಂಡು ಹೆಣ್ಣು ಕುಳಿತಿದ್ದಾರೆ. ಅಲ್ಲಿಯವರೆವಿಗೂ ಸರಾಗವಾಗಿ ಹೋಗುತ್ತಿದ್ದು, ನೋಡುತ್ತಿದ್ದ ಕಾರ್ಯದರ್ಶಿಗೆ ಗುಮಾನಿ ಬರುವುದರೊಳಗೆಯೇ, ಹಾಸಿಗೆಯ ಮೇಲಿದ್ದ ಒಬ್ಬರು ಏನೋ ಇಂಗ್ಲಿಷ್‌ನಲ್ಲಿ ಮಾತನಾಡುತ್ತಾ ಕಣ್ಣುಮುಚ್ಚಿ ತೆಗೆಯುವುದರಲ್ಲಿ ಬಟ್ಟೆಗಳನ್ನು ಕಳಚಿಬಿಟ್ಟರು.

ನೋಡುತ್ತಿದ್ದ ಹೆಂಗಸರು ಗಂಡಸರು ಮಕ್ಕಳು ಓ... ಓ... ಎನ್ನುತ್ತಾ ಹೌಹಾರಿ ಬಿಟ್ಟರು. ಕಾರ್ಯದರ್ಶಿ ಜೋರಾಗಿ ವಿ.ಸಿ.ಆರ್ ಬಟನ್ ಹುಡುಕುವುದರೊಳಗೆಯೇ ಕಾರ್ಯ ಇನ್ನಷ್ಟು ಕೆಟ್ಟೋಗಿತ್ತು. ಅಷ್ಟರಲ್ಲಿ ಹುಡುಗ ಹತ್ತಿರಕ್ಕೆ ಧಾವಿಸಿ ಟಿ.ವಿ. ಸ್ವಿಚ್ಚನ್ನು ಆಫ್ ಮಾಡಿದ. ಹೆಂಗಸರೆಲ್ಲ ಗುಸುಗುಸುನೆ ಮಾತನಾಡುತ್ತಾ ನಗಾಡುತ್ತಾ ಒಬ್ಬರನ್ನೊಬ್ಬರು ಚುಚ್ಚಿಕೊಳ್ಳುತ್ತಾ, ಹೊಡೆದುಕೊಳ್ಳುತ್ತಾ ಹೊರಗಡೆ ಹೋದರೆ, ಹುಡುಗರು ಸೀಟಿ ಹೊಡೆಯುತ್ತಾ ಬೀದಿಯಲ್ಲಿ ಗುಲ್ಲೆಬ್ಬಿಸಿಬಿಟ್ಟರು.

ಕಾರ್ಯದರ್ಶಿ ತಬ್ಬಿಬ್ಬಾಗಿ ತಲೆ ಮೇಲೆ ಕೈ ಇಟ್ಟುಕೊಂಡು ಕುಳಿತರೆ, ಹೆಂಡತಿ "ಮನೆಯಲ್ಲೆಲ್ಲಾ ದೊಡ್ಡ ದೊಡ್ಡ ಮಕ್ಕಳಿದ್ದಾರೆ. ನಿಮಗೇನು ಬುದ್ಧಿ ಬಂತ್ರೀ ಈ ವಯಸ್ಸಿನಲ್ಲಿ ಎನ್ನುತ್ತಾ ಬಾಯಿಗೆ ಬಂದಂತೆ, ಗಂಡನನ್ನು ತರಾಟೆಗೆ ತೆಗೆದುಕೊಂಡಳು. ಮಗನು ಎಲ್ಲರಿಗೂ ಗೊತ್ತಾಗಿಹೋಯಿತು ಎನ್ನುತ್ತಾ ಅಪ್ಪನ ಕಡೆ ನೋಡುತ್ತಾ ಗೊಣಗುತ್ತಿದ್ದಾನೆ.

ಕಾರ್ಯದರ್ಶಿ ವಿಷಣ್ಣನಾಗಿ ವಿನೋದನನ್ನು ನಾಳೆ ತರಾಟೆಗೆ ತೆಗೆದುಕೊಳ್ಳುತ್ತೇನೆ ಎನ್ನುತ್ತಾ ಹಲ್ಲುಗಳನ್ನು ಕಟಕಟನೆ ಕಡಿಯುತ್ತಿದ್ದಾನೆ.

ಹೋದ ಮಾನ ಮತ್ತೆ ಬರುವುದಿಲ್ಲವೆಂದು ತಿಳಿದುಕೊಂಡ ಕಾರ್ಯದರ್ಶಿ ಎಲ್ಲರೂ ಮಲಗಿದ ಮೇಲೆ ಹೆಂಡತಿಯನ್ನೂ ಎಬ್ಬಿಸಿ, ಸ್ವಲ್ಪವೂ ಶಬ್ದವಿಲ್ಲದೆ ಮೂಕಿಟಾಕಿ ಸಿನಿಮಾ ನೋಡಿದಂತೆ ಹೆಂಡತಿಯ ಜೊತೆ 'ಬ್ಲುಫಿಲ್ಮ್' ಅದೂ 'ತ್ರಿಬಲ್ ಎಕ್ಸ್' ನೋಡಿಯೇ ಬಿಟ್ಟ. ಸಿನಿಮಾ ಉದ್ದಕ್ಕೂ ಬೈಯುತ್ತಾ, ವಾಕರಿಸುತ್ತಾ ಪೂರ್ತಿ ಸಿನಿಮಾ ನೋಡಿದ ಕಾರ್ಯದರ್ಶಿಯ ಹೆಂಡತಿ ಬೆಳಿಗ್ಗೆ ನಿಧಾನವಾಗಿ ಎದ್ದಳು.

ಆಫೀಸಿಗೆ ಹೋದ ತಕ್ಷಣ ವಿನೋದ್‌ನನ್ನು ಕರೆಯಿಸಿದ ಕಾರ್ಯದರ್ಶಿ ಕ್ಯಾಸೆಟ್ಟನ್ನು ವಿನೋದನ ಕೈಗೆ ಕೊಟ್ಟುಬಿಟ್ಟ. ವಿನೋದ್ ಕಾರ್ಯದರ್ಶಿಯ ಮುಖವನ್ನು ಒಮ್ಮೆ ದೀರ್ಘವಾಗಿ ನೋಡಿ ಸರಿಯಾಗೆಯೇ ಮಂಗಳಾರತಿ ಆಗಿರಬಹುದೆಂದುಕೊಂಡು, ಕ್ಯಾಸೆಟ್ಟನ್ನು ತನ್ನ ಡ್ರಾಯರ್‌ನಲ್ಲಿಟ್ಟು ಬೀಗಹಾಕಿಕೊಂಡ.

ಈಗಾಗಲೇ ೨೦ ರೂಪಾಯಿಗಳನ್ನು ನಷ್ಟಮಾಡಿಕೊಂಡಿರುವ ವಿನೋದ್ ಸಾಯಂಕಾಲ ಹೋದ ತಕ್ಷಣ ಕ್ಯಾಸೆಟ್ಟನ್ನು ಹಿಂದಿರುಗಿಸಬೇಕು ಎಂದುಕೊಳ್ಳುತ್ತಾನೆ. ಹಿಂದೆಯೇ ಎದ್ದು ಬಂದ ಕಾರ್ಯದರ್ಶಿ ಸುತ್ತಲು ಒಮ್ಮೆ ನೋಡಿ "ನನ್ನ ಮಾನ ಮರ್ಯಾದೆ ಎಲ್ಲವೂ ಹೋಯಿತು" ಎನ್ನುತ್ತಾ ನಿಲ್ಲದೆ ಮುಂದಕ್ಕೆ ನಡೆದೋದ.

ವಿನೋದ್ ನಿನಗೆ ಹಾಗೆ ಆಗಬೇಕಿತ್ತು ಒಳಗೊಳಗೆ ನಗುತ್ತಾನೆ. ಸಾಯಂಕಾಲ, ಕೈಚೀಲವನ್ನು ಹಿಡಿದುಕೊಂಡು ಮನೆಯ ಕಡೆ ನಡೆದು ಬರುತ್ತಿರುವ ವಿನೋದನ ಮನಸ್ಸು ತಳಮಳಗೊಂಡು ಅಸಮತೋಲತೆಯಿಂದ ಉಯ್ಯಾಲೆ ಆಡುತ್ತಿದೆ. ಈಗಾಗಲೇ ೨೦ ರೂಪಾಯಿಗಳನ್ನು ನಷ್ಟಮಾಡಿಕೊಂಡಿರುವ ಅವನ ಮನಸ್ಸು ಕ್ಯಾಸೆಟ್ಟನ್ನು ವಾಪಸ್ ಕೊಡಲು ಒಪ್ಪಿಕೊಳ್ಳದೆ ಒಂದು ಕೈ ನೋಡೆಬಿಡು ಎನ್ನುವಂತೆ ಕೋ ಕೊಡುತ್ತಿದೆ.

ಮನುಷ್ಯನ ಮನಸ್ಸು ಬಹಳ ನಿಗೂಢ ಮತ್ತು ವಿಚಿತ್ರವಾದದ್ದು. ಹಾಗಿಲ್ಲದಿದ್ದರೆ ಆರ್ಕಿಮಿಡೀಸ್ ಸ್ನಾನ ಮಾಡುವ ತೊಟ್ಟಿಯಿಂದ 'ಯುರೇಕಾ' ಎಂದು ನಗ್ನವಾಗಿ ಓಡುತ್ತಿದ್ದನೆ ?

ವಿನೋದ್ ಬರುವ ದಾರಿಯಲ್ಲಿ ವಿ.ಸಿ.ಪಿ.ಯನ್ನು ಒಂದು ಚೀಲದಲ್ಲಾಕಿಕೊಂಡು ಹೊರಕ್ಕೆ ಕಾಲಿಟ್ಟದ್ದೆ ತಡ ಸಂಭ್ರಮದಿಂದ ಕೆಲವು ಮಕ್ಕಳು "ಏನಣ್ಣಾ ? ಏನು ಸಿನಿಮಾ ?" ಎಂದು ಹಿಂದೆ ಬಿದ್ದರು.

ಈಗ ಇನ್ನೊಂದು ರೀತಿಯ ಸಂಕಟ ಶುರುವಾಗಿ ಕೈಕೈ ಹಿಸುಕಿಕೊಳ್ಳುತ್ತಾ ಮನೆ ಒಳಕ್ಕೆ ಬರುವುದರೊಳಗೆ ಮಕ್ಕಳ ಒಕ್ಕೂಟವೇ ಅವನ ಹಿಂದಿತ್ತು. ಈಗ ವಿಧಿಯಿಲ್ಲದೆ

ಇನ್ನೂ ಕ್ಯಾಸೆಟ್ ತಂದಿಲ್ಲ ಇರ್‍ರೋ ಎಂದೇಳಿ ಬೀಗ ಹಾಕಿಕೊಂಡು ಕ್ಯಾಸೆಟ್ ಭಂಡಾರಕ್ಕೆ ಹೋಗಿ ಒಂದು ಕನ್ನಡ ಕ್ಯಾಸೆಟ್ ಹಿಡಿದುಕೊಂಡು ಬಂದ.

ಅಷ್ಟೊತ್ತಿಗೆ ಇನ್ನಷ್ಟು ಹೆಂಗಸರು, ಹುಡುಗರ ಗುಂಪು ವಿನೋದನಿಗಾಗಿ ಎದುರು ನೋಡುತ್ತಿದೆ. ಸಿನಿಮಾ ಪ್ರಾರಂಭವಾಗಿ ಮುಗಿಯುತ್ತಾ ಬರುತ್ತಿದ್ದು ಪಕ್ಕದ ಮನೆಯವರು ತಮ್ಮ ನೆಚ್ಚಿನ ಸಿನಿಮಾ ಕ್ಯಾಸೆಟ್ ಒಂದನ್ನು ತರಿಸಿ ಆ ಸಿನಿಮಾ ಮುಗಿದ ಮೇಲೆ ತಾವು ತಂದಿರುವ ಕ್ಯಾಸೆಟ್ ಹಾಕಬೇಕೆಂದು ಆದೇಶ ನೀಡಿದರು.

ವಿನೋದನು ತಲೆ ಚಚ್ಚಿಕೊಳ್ಳುತ್ತಾ ಸಿನಿಮಾ ಆಗುವವರೆಗೂ ವಿಧಿಯಿಲ್ಲದೆ ಕುಳಿತು ನೋಡಿದ ಸಮಯ ೧೧ ಗಂಟೆಯಾಯಿತು. ಎಲ್ಲರೂ ಹೊರಗೆ ಹೋದ ಮೇಲೆ ಬಾಗಿಲು ಮುಚ್ಚಿ, ಬಾಗಿಲಿನ ಕಿಂಡಿಗೆ ಕಾಗದದ ಚೂರುಗಳನ್ನು ತುರುಕಿ, ಶಬ್ದವಿಲ್ಲದೆ ನೀಲಾಕಾಶದಲ್ಲಿ ರೆಕ್ಕೆಗಳನ್ನು ಬಿಚ್ಚಿ ಹಾರಾಡಲು ಪ್ರಾರಂಭಿಸಿದ.

ಪ್ರತಿಯೊಂದು ಕ್ಷಣವು ಮೈ ಜುಮ್ಮೆನ್ನುತ್ತಿತ್ತು, ಹೊಸ ಹೊಸ ಆಸನಗಳು, ವಾತ್ಸಾಯನನ ಚಾಕಚಾಕ್ಯತೆಗಳು ನೋಡುತ್ತಾ ನೋಡುತ್ತಾ ಒಳಗೊಳಗೆ ಚೀರಿಕೊಳ್ಳತೊಡಗಿದ. ತನಗಿದ್ದ ಜ್ಞಾನಕ್ಕೂ ಇಲ್ಲಿ ನೋಡುತ್ತಿರುವ ಚಿತ್ರಗಳಿಗೂ ಅಜಗಜಾಂತರ ವ್ಯತ್ಯಾಸವಿದ್ದು, ತಾನು ಇನ್ನೂ ಬಹಳ ಕೆಳಗಿದ್ದೇನೆ ಎನಿಸಿತು.



ಪವನ್ ಪ್ರಾಚಿಯ ನಡುವನ್ನು ಎರಡು ಹಸ್ತಗಳಲ್ಲಿ ಹಿಡಿದುಕೊಂಡು ಬೆರಳುಗಳನ್ನು ಸ್ಪರ್ಶಿಸಲು ಪ್ರಯತ್ನಿಸುತ್ತಿದ್ದಾನೆ. ಆದರೆ ಮಧ್ಯೆ ಬಹಳ ಅಂತರವಿದ್ದುದರಿಂದ ಬೆರಳುಗಳು ಒಂದನ್ನೊಂದು ಸ್ಪರ್ಶಿಸಲು ಸಾಧ್ಯವಾಗಲಿಲ್ಲ.

ಪ್ರಾಚಿ ಗಲಗಲನೆ ನಕ್ಕಳು ಜಲಪಾತ ಗಾಳಿಯಲ್ಲಿ ಕುಪ್ಪಳಿಸಿ ಜಿಗಿದಂತೆ. ಪವನ್ ಕೇಳಿದ "ಪ್ರಾಚಿ ಪ್ರಪಂಚದಲ್ಲಿ ಅತಿ ಸಣ್ಣದಾದ ನಡು ಯಾರದು ಗೊತ್ತೆ?"

"ಯಾರದು? ನಾಗರಹಾವಿನದೆ?" ಮತ್ತೆ ಗಲಗಲನೆ ನಕ್ಕಳು. ಒಳ್ಳೆ ಮೂಡ್‌ನಲ್ಲಿರುವ ಪ್ರಾಚಿಯ ಆ ನಗು ಪ್ರಪಂಚದಲ್ಲಿರುವ ರಹಸ್ಯಗಳೆಲ್ಲವನ್ನೂ ಭೇದಿಸುವಂತಿದೆ.

ಪವನ್‌ನ ಕಾಮೋದ್ರೇಕ ಸ್ವಲ್ಪ ಹಿಡಿತ ಕಳೆದುಕೊಂಡಂತಾಗಿ, ಅದನ್ನ ಹಾಗೇ ಹತೋಟಿಯಲ್ಲಿಡಲು ಶತಪ್ರಯತ್ನ ಪಡುತ್ತಿದ್ದಾನೆ. ಪ್ರಾಚಿ ಇನ್ನಷ್ಟು ಹಗುರವಾಗಿ ತೇಲಾಡಿದಂತೆ ಅವನ ಕೈಗಳಲ್ಲಿ ಹಾವಿನಂತೆ ಬುಸುಗುಟ್ಟುತ್ತಾ ತಪ್ಪಿಸಿಕೊಳ್ಳುವಂತೆ ನಟಿಸುತ್ತಿದ್ದಾಳೆ. ಅರೆಘಳಿಗೆ ಪವನ್‌ನ ಮೌನ ಮುಖ ನೋಡಿದ ಪ್ರಾಚಿ, ಕೆಲವು ಸಲ ಬಹಳ ಕೋಮಲವಾಗಿಬಿಡುವ ಅವನ ಹೃದಯವನ್ನು ಅರಿತಿರುವ ಅವಳು,

"ಡಾರ್ಲಿಂಗ್ ಯಾರು ಆ ಹಗುರ ಹಕ್ಕಿ?" ಎನ್ನುತ್ತಾಳೆ.

ಪವನ್ ಮತ್ತೆ ಅತಿ ಉತ್ಸಾಹದಿಂದ ಹೇಳಿದ. ಒಬ್ಬಳಲ್ಲ, ಇಬ್ಬರು. ಫ್ರಾನ್ಸ್ ದೇಶದ ನಟಿ ಮಿಲ್ ಪೊಲೆಯರ್ ಮತ್ತು ಇಂಗ್ಲೇಂಡಿನ ಈಥೋಲ್‌ಗ್ರಾಂಗೆರ್. ಎಷ್ಟು ಗೊತ್ತ ಕೇವಲ? ೧೩ ಅಂಗುಲ, ಅವರ ನಡುವಿನ ಸುತ್ತಳತೆ.

"ಅಮ್ಮಾ..." ಎಂದು ದೀರ್ಘ ತೆಗೆದ ಪ್ರಾಚಿ ಪವನ್‌ನ ಎರಡು ಕೈಗಳನ್ನು ತೆಗೆದು ತನ್ನ ಭುಜಗಳ ಮೇಲೆ ಇಟ್ಟುಕೊಳ್ಳುತ್ತಾಳೆ.

ಪವನ್ ಹಗುರವಾದ ಅವಳ ತುಟಿಗಳನ್ನು ತನ್ನ ತುಟಿಗಳಿಂದ ಒತ್ತುತ್ತಾ "ಹೂವುಗಳು ಎಷ್ಟೊಂದು ಸುಂದರ... ಎಷ್ಟೊಂದು ಕೋಮಲ... ಎಷ್ಟೊಂದು ಸುವಾಸನೆ... ಎಷ್ಟೊಂದು ರುಚಿ... ಎಷ್ಟೊಂದು ಶಾಶ್ವತ" ಎನ್ನುತ್ತಾ ಮುಂದಿನ ಪದಗಳನ್ನು ಹುಡುಕುತ್ತಿರುವಾಗ ಪ್ರಾಚಿ ಮುಗಿಸುತ್ತಾಳೆ.

"ಎಷ್ಟೊಂದು ಅಗತ್ಯ... ಎಷ್ಟೊಂದು ಸಹಕಾರಿ..." ಎಂದು.

ಪವನ್ ಹತ್ತಿರದಿಂದ ಪ್ರಾಚಿಯ ಮುಖ ನೋಡುತ್ತಿದ್ದಾನೆ. "ಪವನ್ ನಾವು ಮದುವೆಯಾಗಿ ೩೬೨ ದಿನಗಳಾಗಿವೆ. ಅಂದರೆ ಇನ್ನು ಮೂರುಕಾಲು ದಿನಗಳಾದಲ್ಲಿ ಭೂಮಿ ಸೂರ್ಯನನ್ನು ಒಮ್ಮೆ ಪೂರ್ತಿ ಸುತ್ತಿದಂತಾಗುತ್ತದೆ. ನಾಲ್ಕು ಋತುಗಳನ್ನು ಒಟ್ಟಿಗೆ ಸವಿದಿದ್ದೇವೆ. ನನ್ನ ಬಗ್ಗೆ ಏನೇನು ತಿಳಿದುಕೊಂಡಿದ್ದೀಯ...?"

"ಅಂದರೆ... ನನ್ನ ಬಗ್ಗೆ ನನ್ನ ಸೌಂದರ್ಯದ ಬಗ್ಗೆ, ನನ್ನ ಪ್ರೀತಿಯ ಬಗ್ಗೆ, ನನ್ನ ಹ್ಯೂಮರ್ ಬಗ್ಗೆ, ನನ್ನ ತಿಳುವಳಿಕೆ ಬಗ್ಗೆ..." ಎನ್ನುತ್ತಾ ಮುಂದಿನ ಪದಕ್ಕೆ ಏಣಿಯಾಕತೊಡಗಿದಾಗ ಪವನ್, ಅವಳ ಮಾತಿಗೆ ನಕ್ಕ.

ಪ್ರಾಚಿ ಒಮ್ಮೆ ಕಣ್ಣು ರೆಪ್ಪೆಗಳನ್ನು ಮುಚ್ಚಿ ಹೊಸ ನೋಟದಿಂದ ಪವನ್ ಕಡೆ ನೋಡಿದಳು. ಪವನ್ ಪ್ರಾಚಿಯ ಭುಜಗಳ ಕೆಳಗೆ ತನ್ನೆರಡು ಕೈಗಳನ್ನು ಬಿಟ್ಟು ಅವಳ ಕಿಬ್ಬೊಟ್ಟೆಯನ್ನು ಒತ್ತಿಡಿದು ಅನಾಯಾಸವಾಗಿ ಅವಳ ೧೨೮ ಪೌಂಡಿನ ದೇಹವನ್ನು ಹೊತ್ತುಕೊಂಡೋಗಿ ಹಾಸಿಗೆಯ ಮೇಲಿಳಿಸಿದ.

"ಕಾಡು ಮೇಡು, ಹಸಿರೆಲೆ, ಹೂವುಗಳು, ನದಿಗಳು ಹೀಗೆ ಸೌಂದರ್ಯದ ಬಗ್ಗೆ ಅನೇಕ ಕವಿಗಳು ಬರೆದಿದ್ದಾರೆ. ಆದರೆ ಸೌಂದರ್ಯವಿರುವುದು ಹೆಣ್ಣಿನಲ್ಲಿ ಮಾತ್ರ, ಹೆಣ್ಣು ಇಷ್ಟೊಂದು ಸುಂದರವಾಗಿರುತ್ತಾಳೆ ಎಂದುಕೊಂಡಿರಲಿಲ್ಲ. ನಾನು ಮೊದಮೊದಲು ಮದುವೆಯಾಗದೆ ಬ್ರಹ್ಮಚಾರಿಯಾಗಿಯೇ ಉಳಿದುಬಿಡಬೇಕೆನ್ನುವ ಹಂಬಲವಿತ್ತು. ಹಾಗೇನಾದರೂ ಉಳಿದುಬಿಟ್ಟರೆ ಅಬ್ಬಾ ದೇವರೆ" ಹೌಹಾರಿದ ಪವನ್.

"ನಿನ್ನ ಕವಿತ್ವ ಆ ಮೇಲೆ ಸದ್ಯಕ್ಕೆ ಈಗ ಹಾಸಿಗೆ ಮೇಲೆ ಬಂದು ಕುಳಿತುಕೋ" ಎಂದಳು ಪ್ರಾಚಿ. ಪವನ್ ಇನ್ನೂ ಆಶ್ಚರ್ಯದ ಚಿಹ್ನೆಗಳನ್ನು ಮುಖದ ತುಂಬಾ ತುಂಬಿಕೊಂಡಿದ್ದು ಕಣ್ಣುಗಳನ್ನು ಅಗಲವಾಗಿಸಿಕೊಂಡು ಪ್ರಾಚಿಯ ಪಕ್ಕದಲ್ಲಿ ಬಂದು ಕುಳಿತುಕೊಂಡ.

ಪ್ರಾಚಿ ಅವನ ಆಶ್ಚರ್ಯವನ್ನು ಅಷ್ಟು ದೂರ ಓಡಿಸುವಂತೆ ನೋಡಿದಳು. ಅಗಲವಾಗಿದ್ದ ಕಣ್ಣುಗಳು ನಿಧಾನವಾಗಿ ಮಾಮೂಲಿ ಸ್ಥಿತಿಗೆ ತಲಪಿದವು. ಗಂಡಸರಿಗೆ, ಅದೂ ಎದೆಯಲ್ಲಿ ದಟ್ಟವಾಗಿ ಹೇರಳವಾಗಿ ರೋಮವಿದ್ದರೆ 'ವೃಷಭ'ನಿಗೆ ಹೋಲಿಸುತ್ತಾರೆ. ಹೆಣ್ಣುಗಳನ್ನು ಚೆನ್ನಾಗಿ ರಮಿಸಬಲ್ಲರು ಕೂಡ ಎನ್ನುವ ಮಾತಿದೆ.

ಇನ್ನು ಹೆಣ್ಣುಗಳು ಸಣ್ಣಗಿದ್ದು, ಕಬ್ಬಿನ ಜಲ್ಲೆಯಂತಿದ್ದರೆ ಕಾಮ ಜಾಸ್ತಿಯಂತೆ, ಇನ್ನು ಮೈಮೇಲೆ ಕೂದಲಿದ್ದರೆ ಹೇಳುವ ಅಗತ್ಯವೇ ಇಲ್ಲ ಎನ್ನುತ್ತಾರೆ. ಪ್ರಾಚಿ ತೆಳುವಾದ ಗೌನ್‌ನಲ್ಲಿ ಅಪ್ಸರೆಯಂತೆ ಕಾಣುತ್ತಿದ್ದಾಳೆ. ಸೆಕ್ಸ್ ಅಪೀಲ್ ಎಂದರೆ ಹೆಣ್ಣು ಗಂಡಿನ ದೃಷ್ಟಿಯಲ್ಲಿ ಸೆಕ್ಸ್ ಆಗಿ ಕಾಣುವುದು ಒಂದೊಂದು ಹೆಣ್ಣು ಒಂದೊಂದು ರೀತಿಯಲ್ಲಿ ಪ್ರತಿಯೊಬ್ಬ ಗಂಡಸಿನ ದೃಷ್ಟಿಯಲ್ಲಿ ಪ್ರತ್ಯೇಕವಾಗಿ ಕಾಣಿಸಿಕೊಳ್ಳುತ್ತಾಳೆ. ಪ್ರಾಚಿ ಪವನ್‌ನ ದೃಷ್ಟಿಯಲ್ಲಿ ಅದ್ಭುತವಾದ ಸೆಕ್ಸ್ ಅಪೀಲ್ ಮೂಡಿಸಿದ್ದಾಳೆ. ಪವನ್ ಅವಳ ಸೌಂದರ್ಯದ ಬಗ್ಗೆ ಎಷ್ಟೊಂದು ಸಮ್ಮೋಹನಾಗಿದ್ದಾನೆಂದರೆ ಒಂದೇ ಪದದಲ್ಲಿ ಹುಚ್ಚನಾಗಿದ್ದಾನೆ ಎನ್ನಬೇಕು.

ಬಹಳ ಹೊತ್ತು ಅವಳನ್ನು ತೆಳುವಾದ ಗೌನ್‌ನಲ್ಲಿ ನೋಡಿ ಆನಂದಿಸಿದ ಮೇಲೆ ರಾತ್ರಿ ಹೀಗೆ ಕರಗಿಹೋಗಬಾರದೆಂದು ಮುದ್ದುಮುದ್ದಾಗಿ ಲಲ್ಲೆಗರೆಯುತ್ತಾ ಗೌನ್ ಬಿಚ್ಚಿಸಿದ.

"ನೋಡು ನೋಡುತ್ತಾ ಕಳೆ ತುಂಬಿಕೊಳ್ಳುವ ಚಂದ್ರ ಬಿಂಬವನ್ನು ಕಂಡಿದ್ದರೆ ಪ್ರಿಯಳು ಕುಪ್ಪಸ ಕಳೆವಾಗ ಮುಖ ನೋಡಿ" ಒಬ್ಬ ಕವಿ ಹೇಳುತ್ತಾನೆ. ಬೆಳ್ಳಿಯ ಬೆಳಕಿನಲ್ಲಿ ಕೇವಲ ಪ್ರಾಚಿಯ ದೇಹ ಮಾತ್ರ ನಾಚಿಕೊಳ್ಳಲಿಲ್ಲ. ಅವಳ ಊಹೆಗಳು ಕೂಡ ಬೆಳಕಿನ ಕಿರಣಗಳಿಗೆ ಡಿಕ್ಕಿಹೊಡೆದು ತಿರುಗು ಮರುಗಾಗಿ ಹರಿಯತೊಡಗಿದ್ದವು.

"ಹುಣ್ಣಿಮೆ ಚಂದ್ರ ಒರಟಾದ ಭೂಮಿಯನ್ನು, ನನ್ನನ್ನು ಮುದ್ದಿಸಬೇಡ, ಮುದ್ದಿಸಬೇಡವೆಂದು ಗೋಗರೆದರು ಬಿಡದ ಭೂಮಿ ತನ್ನ ಒರಟು ತುಟಿಗಳಿಂದ ಹುಣ್ಣಿಮೆ ಚಂದ್ರನನ್ನು ಒಮ್ಮೆ ಮುದ್ದಿಸಿಯೇಬಿಟ್ಟಿತು. ಆಗ ಚಂದ್ರನ ಮುಖದ ಮೇಲೆ ಮೂಡಿದ ಕಪ್ಪು ಕಲೆಗಳೆ ಚಂದ್ರನ ಮೇಲಿರುವ ಈಗಿನ ಲೂನಾರ್ ಬೆಟ್ಟಗಳು.

ಮೇಲಿನ ಮಾತುಗಳನ್ನು ಹೇಳುತ್ತಾ ಹೇಳುತ್ತಾ ಪವನ್ ಪ್ರಾಚಿಯ

ಸೌಂದರ್ಯದೊಳಕ್ಕೆ ಗಾಢವಾಗಿ ತೂರಿಕೊಂಡೋಗುತ್ತಿದ್ದ. ಬೆಳ್ಳಿಯ ಬೆಳಕು ಕೋಣೆಯಲ್ಲಿ ಬಂದ್ ಆಗಿ ಹೊರಕ್ಕೆ ಹೋಗಲಾರದೆ ಉಸಿರುಗಟ್ಟಿ ತೊಂದರೆ ಪಡುತ್ತಿತ್ತು.

ಆಗ ಮೊಬೈಲ್ ಸದ್ದಾಯಿತು ರಾಮ ರಾಮ ಎಂದುಕೊಂಡು ಪವನ್ ಪ್ರಾಚಿಯ ತೋಳುಗಳಿಂದ ಬಿಡಿಸಿಕೊಂಡು ಹಾಸಿಗೆಯ ಒಂದು ಕಡೆಯಿಂದ ಮತ್ತೊಂದು ಕಡೆಗೆ ಉರುಳಿ ಮೊಬೈಲ್ ತೆಗೆದುಕೊಂಡು 'ಹಲೋ ಪವನ್ ಮಾತನಾಡುವುದು' ಎಂದ.

ಆ ಕಡೆಯಿಂದ ಬರುತ್ತಿರುವ ಶಬ್ದದಿಂದಲೇ ಸಾಗರದಾಚೆಯ ಕಾಲ್ ಎಂದು ತಿಳಿದುಕೊಂಡ ಪವನ್ ಅರೆಫಳಿಗೆ ಜಾಗೃತವಾಗಿ "ಹಲೋ... ಹಲೋ..." ಎಂದು ಆ ಕಡೆಯವರಿಗೆ ಮನವರಿಕೆ ಮಾಡಿ ನಂಬರ್ ತಿಳಿಸಿ ಪವನ್ ಮಾತನಾಡುವುದೆಂದ.

"ಹಲೋ ಪವನ್ ಹೇಗಿದ್ದೀಯ, ನಾನು ಪ್ರಾಚಿ ತಂದೆ ಹಾಂಗ್‌ಕಾಂಗ್‌ನಿಂದ ಮಾತನಾಡ್ತಾ ಇರುವುದು" ನಾನು ನಾಳೆ ಬೆಳಿಗ್ಗೆ ೮ ಗಂಟೆಗೆ ಹಾಂಗ್‌ಕಾಂಗ್ – ಕಲ್ಕತ್ತಾ ಫ್ಲೈಟ್ ಟಿ.ಜಿ. ೬೦೩-೩೧೩ ನಲ್ಲಿ ಕಲ್ಕತ್ತಾಗೆ ಬರುತ್ತೇನೆ. ಅಲ್ಲಿಂದ ಬೆಂಗಳೂರಿಗೆ ಸಾಯಂಕಾಲ ಸುಮಾರು ೭ ಗಂಟೆಗೆ ತಲಪುತ್ತೇನೆ".

"ಒಂದು ನಿಮಿಷ" ಎಂದ ಪವನ್, ಪ್ರಾಚಿಯನ್ನು ಹತ್ತಿರಕ್ಕೆ ಕರೆದು ಮೊಬೈಲ್‌ಕೊಟ್ಟ. ಪ್ರಾಚಿ "ಹಲೋ ಪಾಪಾ ಹೇಗಿದ್ದೀರ... ಹೋದವಾರ ನಿಮ್ಮನ್ನ ಕಾಂಟಾಕ್ಟ್ ಮಾಡಲು ಪ್ರಯತ್ನಿಸಿದೆ, ಆದರೆ ನೀವು ಸಿಗಲೇ ಇಲ್ಲ".

ಪವನ್ ಹಿಂದಿನಿಂದ ತಾನು ಮಾಡಬೇಕಾಗಿರುವ ಕೆಲಸದಲ್ಲಿದ್ದ. "ಓ ದೇವರೆ, ಪವನ್‌ನ ಕೈಗಳನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ಸುಮ್ಮನೆ ಇರುವಂತೆ ಹೇಳಿದಳು.

"ಪ್ರಾಚಿ, ನಾನು ನಾಳೇನೆ ಬರುತ್ತಿದ್ದೇನೆ. ನಿನಗೇನಾದರೂ ಬೇಕಾಗಿದ್ದರೆ ಹೇಳು ತರುತ್ತೇನೆ".

"ಒಂದು ನಿಮಿಷ ಪಾಪಾ" ಎಂದು ಕೈ ಅಡ್ಡವಿಟ್ಟುಕೊಂಡು "ಪವನ್ ಏನು ತರಿಸೋಣ?" ಎಂದು ಪವನ್ ಕಡೆ ನೋಡಿದಳು. ಪವನ್ ಕಿವಿಯಲ್ಲಿ ಏನೋ ಪಿಸುಗುಟ್ಟಿದ. ಪ್ರಾಚಿ ನಗುವನ್ನು ತಡೆದುಕೊಳ್ಳಲಾರದೆ "ಪಾಪಾ ಒಂದು ಒಳ್ಳೆ ಲೇಟೆಸ್ಟ್ ಮೊಬೈಲ್ ತನ್ನಿ, ಮಿಕ್ಕಿದ್ದು ನಿಮ್ಮಿಷ್ಟ" ಎಂದಳು.

"ಸರಿ ಪ್ರಾಚಿ ಮತ್ತೇನು ವಿಶೇಷವಿಲ್ಲ ತಾನೆ ?"

"ಇಲ್ಲ ಪಾಪಾ. ನಾಳೇನೇ ಬರ್ತೀರಲ್ಲ"

"ಖಂಡಿತ ಬರುತ್ತೇನೆ"

"ಆಯಿತು"

"ಗುಡ್‌ನೈಟ್ ಪಾಪಾ..."

"ಗುಡ್‌ನೈಟ್ ಪ್ರಾಚಿ"

ಪ್ರಾಚಿಯ ತಂದೆ ಒಬ್ಬ ದೊಡ್ಡ ವ್ಯಾಪಾರಿ ಯಾವಾಗಲೂ ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಓಡಾಡುತ್ತಾ ಹಲವು ರೀತಿಯ ವ್ಯಾಪಾರಗಳನ್ನು ಮಾಡುತ್ತಿರುತ್ತಾರೆ. ಪ್ರಾಚಿಯ ತಾಯಿ ತೀರಿಕೊಂಡು ಎರಡು ವರ್ಷಗಳಾದವು. ಇನ್ನು ಪ್ರಾಚಿಯ ಒಬ್ಬನೆ ಅಣ್ಣ ಮುಂಬಯಿಯಲ್ಲಿ ಒಂದು ದೊಡ್ಡ ಶೋ ರೂಂ ಇಟ್ಟಿದ್ದಾನೆ. ಪ್ರಾಚಿ, ಪವನ್ ಕೈಗಳಲ್ಲಿ ಮತ್ತೊಂದು ರಾತ್ರಿ ಉಲ್ಲಾಸವಾಗಿ ಜಾರಿಕೊಳ್ಳುತ್ತದೆ.

ಬೆಂಗಳೂರು ಎಂದಿನಂತೆ ಬೆಳಗನ್ನು ನೋಡಲು ಪೂರ್ವದಿಕ್ಕಿಗೆ ತಲೆಚಾಚಿ ನೋಡುತ್ತಿದೆ. ಪ್ರಾಚಿ, ಪವನ್ ಎಂದಿನಂತೆ ದೈನಂದಿನ ಕೆಲಸಗಳನ್ನು ಮುಗಿಸಿದರು. ಪವನ್ ಬ್ರೀಫ್‌ಕೇಸ್ ತೆಗೆದುಕೊಂಡು ಪ್ರಾಚಿಯ ಎದೆಗಳನ್ನು ನವಿರಾಗಿ ಸವರಿದ. ಅದರೊಳಗೆ ಅಡಗಿರುವ ಅದ್ಭುತಗಳು ರೆಕ್ಕೆಬಿಚ್ಚಿ ಹಾರಾಡಿದವು. ಎಂದಿನಂತೆ ಕೆನ್ನೆಗೊಂದು ಮುತ್ತುಕೊಟ್ಟು ಪವನ್ ಕಾರಿನಲ್ಲಿ ಕುಳಿತು ಆಫೀಸಿಗೆ ಹೊರಟ.

ಪ್ರಾಚಿ ತನ್ನ ಬೆಂಟ್ಲೆ ಕಾರನ್ನು ಬ್ಯೂಟಿಪಾರ್ಲರ್ ಕಡೆ ಓಡಿಸಿದಂತೆ, ಪವನ್ ತನ್ನ ಕಚೇರಿಯ ಕೋಣೆ ಸೇರಿಕೊಂಡ. ವಿನೋದ್ ಮತ್ತು ಖಾಸಗಿ ಕಾರ್ಯದರ್ಶಿ ತಮ್ಮ ತಮ್ಮ ಕೆಲಸಗಳಲ್ಲಿ ತೊಡಗಿದ್ದಾರೆ. ಪವನ್ ತನ್ನ ಕೋಣೆಯಲ್ಲಿ ಕುಳಿತು ಅಂದಿನ ಅಂಚೆ ಪತ್ರಗಳನ್ನು ಒಂದೊಂದಾಗಿ ನೋಡುತ್ತಾ ಅವುಗಳ ಮೇಲೆ ಟಿಪ್ಪಣಿ ಬರೆದು ಸಣ್ಣ ಸಹಿಯಾಕಿ ಒಂದು ಕಡೆ ಇಡುತ್ತಿದ್ದಾನೆ. ಪಕ್ಕದಲ್ಲಿ ನಿಂತಿರುವ ಸೇವಕ ಒಂದೊಂದೇ ಪತ್ರವನ್ನು ಬೆಳಕಿಗೆ ಇಟ್ಟು ನಿಧಾನವಾಗಿ ಹರಿದು ಒಂದು ಕಡೆ ಇಡುತ್ತಿದ್ದಾನೆ.

ಅದೊಂದು ರಿಜಿಸ್ಟ್ರೇಟನ್ ಪತ್ರ ಅವನ ಮುಂದಿದೆ. ತನ್ನ ಖಾಸಗಿ ಕಾರ್ಯದರ್ಶಿ ಇನ್ನೊಬ್ಬ ಅಧಿಕಾರಿಗೆ ಕಾರ್ಯದರ್ಶಿಯಾಗಿ ವರ್ಗವಾಗಿದ್ದು, ಪವನ್ ಕಾರ್ಯದರ್ಶಿಯಾಗಿ ಎರಡು ವಾರಗಳ ಹಿಂದೆ ಇದೇ ಆಫೀಸಿನಲ್ಲಿ ಸಂದರ್ಶನ ನಡೆದು ಆಯ್ಕೆಯಾದ ರುಚಿಯ ಹೆಸರಿದೆ. ಪವನ್ ಪ್ರಶ್ನಾರ್ಥಕವವಾಗಿ ಆ ಹೆಸರನ್ನು ದೀರ್ಘವಾಗಿ ಪರೀಕ್ಷಿಸಿ ನೋಡಿದ.

ಎರಡು ಕ್ಷಣಗಳಲ್ಲಿ ಅವನ ಮಿದುಳು ಏನೇನೋ ಯೋಚಿಸತೊಡಗಿತು. ಸೇವಕನ ಮುಖಾಂತರ ಖಾಸಗಿ ಕಾರ್ಯದರ್ಶಿಯನ್ನು ಕರೆದು ವಿಷಯವನ್ನು

ತಿಳಿಸಿದ. ಕಾರ್ಯದರ್ಶಿ ಅಷ್ಟೇನೂ ತಲೆ ಕೆಡಿಸಿಕೊಳ್ಳಲಿಲ್ಲ. ಏಕೆಂದರೆ ಬೆಂಗಳೂರಲ್ಲಿ ವರ್ಗವಾಗಿದ್ದರಿಂದ ಅವನಿಗೆ ವ್ಯತ್ಯಾಸವೇನೂ ಕಾಣಿಸಲಿಲ್ಲ.

ಪವನ್ ಮಾತ್ರ ಇನ್ನಷ್ಟು ಯೋಚಿಸತೊಡಗಿದ. ಅನಂತರ ಇಂಟರ್‌ನೆಟ್ ಓಪನ್ ಮಾಡಿ ಮೇಲ್ಸ್ ನೋಡತೊಡಗಿದ.



ಸಮಯ ೧ ಗಂಟೆಯಾಗಿದ್ದು, ಕೆಲವರು ಟಿಫಿನ್‌ಬಾಕ್ಸ್‌ಗಳನ್ನು ತೆಗೆದುಕೊಂಡು ಹಾಲಿನ ಕಡೆ ನಡೆಯತೊಡಗಿದರು. ಕೆಲವರು ಹೋಟೆಲುಗಳ ಕಡೆ ನಡೆದರು. ಪವನ್ ತನ್ನ ಬುತ್ತಿಯನ್ನು ಕೋಣೆಯಲ್ಲಿ ಬಿಚ್ಚುತ್ತಾ ಸೇವಕನಿಂದ ನೀರು ಮತ್ತು ಎರಡು ಬ್ರೂ ಕಾಫಿಗಳನ್ನು ತರಿಸಿ ಮೇಜಿನ ಮೇಲಿರಿಸಿಕೊಂಡ. ಮಧ್ಯಾಹ್ನ ಹೊರಗಡೆ ಎಲ್ಲಿಯೂ ತಿನ್ನದೆ ಮನೆಯ ಅಡಿಗೆಯನ್ನೆ ತಿನ್ನಬೇಕೆನ್ನುವುದು ಅವನ ಗೃಹಮಂತ್ರಿಯ ಆಜ್ಞೆ, ತಿಂಡಿ ಹೆಚ್ಚಾಗಿರುವುದರಿಂದ ಮಧ್ಯಾಹ್ನ ಊಟ ಮಾಡುವಾಗ ಯಾರನ್ನಾದರೂ ಕರೆಸಿಕೊಂಡು ಮಾತನಾಡುತ್ತಾ ಊಟ ಮಾಡುವುದು ವಾಡಿಕೆ. ಈ ದಿನ ಅವನ ಹಲವು ಮುಖ್ಯ ಗೆಳೆಯರು ಫೋನಿನಲ್ಲಿ ಸಿಗದ ಕಾರಣ ತನ್ನ ಸ್ಟೇಟಸ್‌ನ್ನು ಸ್ವಲ್ಪ ಸಡಿಲಿಸಿ ಸೇವಕನ ಮುಖಾಂತರ ವಿನೋದ್‌ನನ್ನು ಕರೆಸಿದ. ಆಗಾಗ ಕೆಲವರನ್ನು ಲಂಚ್ ಸಮಯದಲ್ಲಿ ಕರೆಸಿ ಆಫೀಸಿನ ವಿಷಯ ಮಾತನಾಡುವುದು ಎಲ್ಲರಿಗೂ ಗೊತ್ತಿದ್ದರಿಂದ ವಿನೋದ್ ಮಾಮೂಲಿಯಾಗಿಯೇ ಪವನ್ ಕೋಣೆಗೆ ಹೋದ.

ಪವನ್ ಬಹಳ ಉಲ್ಲಾಸದಲ್ಲಿದ್ದಂತೆ ವಿನೋದ್ ಊಹಿಸಿಕೊಂಡ.

"ಬಾ ವಿನೋದ್ ಕುಳಿತುಕೋ ಊಟ ಆಯಿತೆ"

"ಆಯಿತು ಸಾರ್" ಎನ್ನುತ್ತಾ ಅತಿಥಿಗಳ ಕುರ್ಚಿಯಲ್ಲಿ ಕುಳಿತುಕೊಂಡ.

"ಇಷ್ಟು ಬೇಗ ? ನನ್ನ ಜೊತೇನೂ ಸ್ವಲ್ಪ ಊಟಮಾಡು" ಎನ್ನುತ್ತಾ ಒಂದು ತಟ್ಟೆಯಲ್ಲಿ ಹಾಕಿ ಕೊಟ್ಟ. ಸಾಂಪ್ರದಾಯಿಕವಾಗಿ ಬೇಡವೆಂದರೆ ಎಲ್ಲಿ ಕೋಪಿಸಿಕೊಳ್ಳುತ್ತಾರೋ ಎಂದು ಕೈಗೆ ತೆಗೆದುಕೊಂಡ. ಘಮಘಮ ವಾಸನೆ ಬರುವ ತಿಂಡಿ, ತನ್ನ ತಿಂಡಿಯ ಬಗ್ಗೆ ನೆನೆದುಕೊಂಡು ತಾನೇ ಛೀಮಾರಿ ಹಾಕಿಕೊಂಡ.

"ವಿನೋದ್ ನಿನಗೀಗ ವಯಸ್ಸೆಷ್ಟು ?" ಅನಿರೀಕ್ಷಿತವಾದ ಪ್ರಶ್ನೆಗೆ ಔಪಚಾರಿಕವಾಗಿ "೨೯" ಎಂದ.

"ನೀನ್ಯಾಕೆ ಯಾವುದಾದರೂ ಒಳ್ಳೆ ಪರೀಕ್ಷೆಗೆ ಕೂರಬಾರದು ?"

"ಪ್ರಯತ್ನ ಮಾಡ್ತಾನೆ ಇದ್ದೇನೆ ಸಾರ್"

"ಗುಡ್, ವೆರಿಗುಡ್ ಪ್ರಯತ್ನ ಮಾಡಿದರೆ ಫಲ ಸಿಕ್ಕೇ ಸಿಗುತ್ತದೆ... ಆದರೆ ನಿರಾಶೆ ಆಗಬಾರದು" "ಹೌದು ಸಾರ್" ಎಂದ ವಿನೋದ್.

"ಹೌದು ಮದುವೆ ಯಾವಾಗ ಮಾಡಿಕೊಳ್ತೀಯಾ" ಇನ್ನೊಂದು ಅನಿರೀಕ್ಷಿತವಾದ ಪ್ರಶ್ನೆ. ಒಳಗೊಳಗೆ ಉತ್ಪತ್ತಿಯಾದ ಆನಂದ ಮೈಯೆಲ್ಲಾ ಪುಳಕಗೊಂಡು, ಅವನ ಮುಖದಲ್ಲೀಗ ಆಸೆ ಇಣಿಕಿ ನೋಡುತ್ತಿತ್ತು. ೨೯ ವರ್ಷಗಳಿಂದ ಕೂಡಿಟ್ಟಿದ್ದ ಆಸೆ ಅದು.

"ಮಾಡಿಕೊಳ್ಳಬೇಕು ಸಾರ್, ಆದರೆ ಒಂದು ಒಳ್ಳೆ ಹೆಣ್ಣನ್ನು ಪ್ರೀತಿಸಿ ಮದುವೆ ಮಾಡಿಕೊಳ್ಳಬೇಕೆಂದಿದ್ದೇನೆ ಸಾರ್" ಅವನ ಧೈರ್ಯಕ್ಕೆ ಅವನೇ ಬೆನ್ನು ತಟ್ಟಿಕೊಂಡ ಮನಸ್ಸಿನಲ್ಲಿ.

"ಓ...? ಹಾಗೋ... ಹಾಗಾದರೆ ಒಂದು ಕೆಲಸ ಮಾಡು. ಮೊದಲು ಮದುವೆ ಮಾಡಿಕೊಂಡು ಆಮೇಲೆ ಪ್ರೀತಿಸಬಹುದಲ್ಲ" ಹಗುರವಾಗಿ ನಕ್ಕ ವಿನೋದ್... "ಮದುವೆ ಆದಮೇಲೆ ಪ್ರೀತಿ ಬಹಳ ದಿನ ಉಳಿಯಲ್ಲ ಅನ್ನುತ್ತಾರಲ್ಲ ಸಾರ್ ?"

"ನೀನು ನಂಬುತ್ತಿಯಾ ? ನಾನಂತೂ ನಂಬುವುದಿಲ್ಲ. ಪ್ರೀತಿ, ಪ್ರೇಮ ಮಾಡುವವರಿಗೆ ಮಾತ್ರ ಗೊತ್ತು. ದಿನಗಳು ಉರುಳಿದಂತೆ ನಿಜವಾದ ಪ್ರೀತಿ ಇನ್ನಷ್ಟು ವೃದ್ಧಿಸಿ ಗಟ್ಟಿಯಾಗುತ್ತಾ ಹೋಗುತ್ತದೆ. ನೋಡು ವಿನೋದ್ ನಿಜವಾದ ತಾರುಣ್ಯದಲ್ಲಿ ತಮಗೆ ಸರಿಯಾಗಿ ತಿಳಿಯದೆ ನಡೆಯುವ ಚೆಲ್ಲು ಚೆಲ್ಲು ಪ್ರೀತಿ ಬಹಳ ಬೇಗ ಮುರಿದೋಗಬಹುದು. ಅಥವಾ ಶಾಶ್ವತವಾಗಿ ಉಳಿದು ಹೋಗಬಹುದು. ನನ್ನ ಅನುಭವದ ಪ್ರಕಾರ ನಿನ್ನ ವಯಸ್ಸಿಗೆ ನೀನು ಚೆಲ್ಲು ಚೆಲ್ಲು ಪ್ರೀತಿ ಮಾಡಲಾರೆ. ಆದರೆ, ನಿಜವಾದ ಪ್ರೀತಿ ಪ್ರಕೃತಿಕವಾಗಿ ಮಾಡುವಂತ ವಯಸ್ಸು ಇನ್ನೂ ಉಳಿದಿದೆ. ಆದರೆ ನೀನು ಸುಮ್ಮನಿದ್ದು ಪ್ರೀತಿಸಬೇಕೆಂದುಕೊಂಡರೆ ಹೇಗೆ ? ಪ್ರಯತ್ನಿಸಬೇಕು. ಯಾರನ್ನಾದರೂ ಪ್ರೀತಿಸುತ್ತಿದ್ದೀಯೇನು?"

ಈಗ ವಿನೋದ್ ಮುಖದಲ್ಲಿ ಗೊಂದಲ ಇಣಿಕಿ ನೋಡುತ್ತಿತ್ತು.

"ಹೌದು ಪ್ರೀತಿ ಯಾವ ಬಣ್ಣ ?"

ವಿನೋದ್ ತಬ್ಬಿಬ್ಬಾಗಿ ಪವನ್ ಮುಖ ನೋಡಿದ. ಈ ರೀತಿಯ ಪ್ರಶ್ನೆ ಎಂದು ಕೇಳಿರದ ವಿನೋದ್ ಇನ್ನಷ್ಟು ತಬ್ಬಿಬ್ಬಾದ.

ಪವನ್ ಹೇಳುತ್ತಲೇ ಹೋಗುತ್ತಿದ್ದ ಭಾರತದ ಮನುಷ್ಯನ ಸರಾಸರಿ ಆಯುಷ್ಯ ಈಗ ೬೫ ವರ್ಷಗಳು, ಅದರಲ್ಲಿ ೨೦, ೨೫ ವರ್ಷ ಓದಿನಲ್ಲೆ ಕಳೆದು ಹೋಗಿಬಿಡುತ್ತದೆ. ಇನ್ನು ಈಗಿನ ಕಲಬೆರಕೆ ತಿನ್ನುವ ನಾವು ೪೦-೪೫ ಹೆಚ್ಚೆಂದರೆ ೫೦

ವರ್ಷಗಳಿಗೆಲ್ಲ ಒಂದು ರೀತಿಯಲ್ಲಿ ಮುದುಕರಾಗಿಬಿಡುತ್ತೇವೆ. ರಾಷ್ಟ್ರಪಿತ ಗಾಂಧಿ ಎಷ್ಟನೇ ವಯಸ್ಸಿಗೆ ಮದುವೆಯಾದರು ಗೊತ್ತೆ ? ಕೇವಲ ೧೩ ವರ್ಷಗಳಿಗೆ ಮದುವೆಯಾದರು. ಇನ್ನು ನಮಗಿನ್ನ ಹಳ್ಳಿ ಜನ 'ಟ್ರೈಬಲ್' ಜನಾನೆ ಮೇಲು ಸಮಯ ಹಾಳು ಮಾಡುವುದಿಲ್ಲ..."

ವಿನೋದನನ್ನು ಮುಂದಿಟ್ಟುಕೊಂಡು ಕೊರೆಯುತ್ತಿರುವ ಪವನ್ ತನ್ನಲ್ಲೇ ಒಮ್ಮೆ ಅತಿಯಾಯಿತು ಎಂದುಕೊಳ್ಳುತ್ತಾ ಸಮಯ ನೋಡಿಕೊಂಡು "ಏನು ವಿನೋದ್ ಬೋರಿಡಿಸಿದೆ ಅಲ್ಲವೆ ?" ಎಂದ.

೫೦-೨೯=೨೧. ಕೇವಲ ಇನ್ನು ೨೧ ವರ್ಷಗಳ ಯೌವ್ವನ ಉಳಿದಿದೆ ಎಂದು ತನ್ನಲ್ಲೇ ಲೆಕ್ಕಾಚಾರ ಹಾಕಿಕೊಳ್ಳುತ್ತಿದ್ದ ವಿನೋದ್ ಒಮ್ಮೆಲೆ ಪವನ್ ಮಾತಿಗೆ ಹಾರಿಬಿದ್ದು "ಇಲ್ಲಾ ಸರ್, ಖಂಡಿತ ಇಲ್ಲ" ಎಂದ.

"ಹಾಗೇ ಇನ್ನೂ ಏನಾದರೂ ಹೇಳಿ ಸಾರ್ ನಿಮಗೆ ಬಹಳ ಗೊತ್ತಿದೆ ನಾನು ತಿಳಿದುಕೊಳ್ಳುತ್ತೇನೆ" ಎಂದ ವಿನೋದ್.

"ಹಾಗಾದರೆ ನಾನು ಹೇಳಿದಂತೆ ಮಾಡು ಖಂಡಿತ ಹುಡುಗಿ ಸಿಗುತ್ತಾಳೆ" ಪವನ್ ಹೇಳಿದ.

"ಸರಿ ಸಾರ್ ಹಾಗೆ ಮಾಡುತ್ತೇನೆ ಹೇಳಿ" ವಿನೋದ್ ಹೇಳಿದ.

"ಅಂದರೆ ನೀನು ಇದುವರೆವಿಗೂ ಯಾರನ್ನೂ ಪ್ರೀತಿಸಿಲ್ಲವೆ ?"

"ಇಲ್ಲ ಸಾರ್, ಪ್ರೀತಿಸಿದ್ದೇನೆ ಆದರೆ ಹುಡುಗಿಯರ್‍ಯಾರು ನನ್ನನ್ನು ಪ್ರೀತಿಸಿಲ್ಲ".

"ಓ..." ಎಂದು ದೀರ್ಘ ತೆಗೆದ ಪವನ್ ತಟ್ಟೆಯನ್ನು ಪಕ್ಕಕ್ಕೆ ಸರಿಸಿ ಟವೆಲಿಂದ ಕೈ ಒರೆಸಿಕೊಂಡು ಬ್ರೂ ಕಾಫಿಯನ್ನು ಪ್ಲಾಸ್ಕ್‌ನಿಂದ ಬಟ್ಟಲಿಗೆ ಸುರಿದು ಒಂದನ್ನು ವಿನೋದ್‌ಗೆ ತೆಗೆದುಕೊಳ್ಳುವಂತೆ ಹೇಳಿ ತಾನೊಂದನ್ನು ರುಚಿ ನೋಡಿ ಕೆಳಗಿಟ್ಟ.

ವಿನೋದ್‌ನ ಮುಖ ನೋಡುತ್ತಲೇ ತನ್ನಲ್ಲಿರುವ ಅನುಭವಗಳ ಗೊಂಚಲಿಂದ ಒಂದೊಂದೇ ಎಳೆಯನ್ನು ಎಳೆದೆಳೆದು ವಿನೋದನಿಗೆ ಸರಿ ಹೊಂದುವಂತೆ ಒಂದು ಕಾರ್ಯಕ್ರಮ ಸರಿಪಡಿಸತೊಡಗಿದ.

ಈಗ ಪವನ್ ಇನ್ನಷ್ಟು ಹತ್ತಿರವಾದಂತೆ ಬಗ್ಗಿ ನೋಡುತ್ತಾ "ನೋಡು ವಿನೋದ್ ಹೆಣ್ಣುಗಳು ಗಂಡಸರಿಗಿಂತ ಎಷ್ಟೋ ಪಟ್ಟು ಬುದ್ಧಿವಂತರು, ಅಷ್ಟೇ ಅಲ್ಲ, ಗಂಡಸರಿಗಿಂತ ಕಾಮಿಗಳು ಕೂಡ. ಅವರನ್ನು ಅರ್ಥ ಮಾಡಿಕೊಂಡ ಗಂಡಸರೆ ಇಲ್ಲ. ಎಷ್ಟೋ ತತ್ವಜ್ಞಾನಿಗಳು ಓದಿ ಓದಿ ಯೋಚಿಸಿ ಯೋಚಿಸಿ ಕೊನೆಗೆ ಕೈ ತಿರಿವಿಸಿಬಿಟ್ಟರು ಗಾಳಿಯಲ್ಲಿ".

"ಒಮ್ಮೆ ಏನಾಯಿತು ಗೊತ್ತೆ ? ಒಬ್ಬ ಪುಸ್ತಕ ಮಾರುವವ ಬೀದಿಯಲ್ಲಿ ಓಡಾಡುತ್ತಾ ಪುಸ್ತಕ ಕೊಳ್ಳಿ, ಪುಸ್ತಕ ಕೊಳ್ಳಿ, ಹೆಣ್ಣಿನ ಪ್ರತಿಯೊಂದು ಗುಟ್ಟು, ಚಾಕಚಕ್ಯತೆ, ಜ್ಞಾನ ಅವರ ಮನೋವೈಜ್ಞಾನ ಎಲ್ಲವೂ ಓದಿ ಈ ಪುಸ್ತಕಗಳಲ್ಲಿ ಎಲ್ಲವು ಸಿಗುತ್ತದೆ ಎಂದು ಕೂಗುತ್ತಾ ಹೋಗುತ್ತಿರುತ್ತಾನೆ. ಮನೆಯ ಒಳಗಿಂದಲೇ ಕೇಳಿಸಿಕೊಂಡ ಗೃಹಿಣಿಯೊಬ್ಬಳು ಹೊರಬಂದು ಪುಸ್ತಕ ಮಾರುವವನನ್ನು ಕರೆದು ಮತ್ತೊಮ್ಮೆ ವಿಷಯಗಳನ್ನು ಕೇಳುತ್ತಾಳೆ.

ಪುಸ್ತಕ ಮಾರುವವ ಅದೇ ಮಾತುಗಳನ್ನು ಮತ್ತೊಮ್ಮೆ ಹೇಳುತ್ತಾನೆ. ಒಳಗೆ ಬಾ ಎಂದು ಕರೆದುಕೊಂಡು ಹೋದ ಗೃಹಿಣಿ ಅವನಿಗೆ ಸ್ವಲ್ಪ ತಿಂಡಿಕೊಟ್ಟು ಪುಸ್ತಕಗಳೆಲ್ಲವನ್ನು ತೆಗೆದುಕೊಳ್ಳುತ್ತೇನೆ, ಆದರೆ ಒಂದು ಷರತ್ತು. ನಾನು ತೋರಿಸುವ ವಿಷಯ ಈ ಪುಸ್ತಕಗಳಲ್ಲಿ ಇರಬೇಕು ಎನ್ನುತ್ತಾಳೆ. ಅಷ್ಟರಲ್ಲಿ ಅವಳ ಗಂಡ ಬಾಗಿಲು ಬಡಿಯುವ ಸದ್ದು ಕೇಳಿ ಪುಸ್ತಕ ವ್ಯಾಪಾರಿಯನ್ನು ಅಡಗಿಕೊಳ್ಳುವಂತೆ ಹೇಳಿ ಬಾಗಿಲು ತೆಗೆಯುತ್ತಾಳೆ.

ಗಂಡ ಕೈಕಾಲು ಮುಖ ತೊಳೆದುಕೊಂಡು ಊಟ ಮಾಡಲು ಮಣೆಯ ಮೇಲೆ ಕುಳಿತುಕೊಳ್ಳುತ್ತಾನೆ. ಅಡಿಗೆ ಬಡಿಸುತ್ತಾ ಗಂಡನ ಜೊತೆ ಲಲ್ಲೆಗರೆಯುತ್ತಾ ಬೀಸಣಿಗೆಯಲ್ಲಿ ಗಾಳಿ ಹಾಕುತ್ತಾ ಅವನ ಮುಖವನ್ನು ನೋಡುತ್ತಿದ್ದಾಳೆ. ಗೌರಿ ನಾನು ಬಂದಾಗ ಮನೆಯಲ್ಲಿ ಯಾರೋ ಗಂಡಸರು ಮಾತನಾಡುತ್ತಿದ್ದರಲ್ಲ ಎನ್ನುತ್ತಾನೆ ಗಂಡ. ಹೌದು ನೀನು ಬರುವುದಕ್ಕೆ ಮುಂಚೆ ಒಬ್ಬ ಗಂಡಸಿನ ಜೊತೆ ನಾನು ಪ್ರೀತಿ ಮಾಡುತ್ತಿದ್ದೆ, ಬೇಕಾದರೆ ನೀನೇ ನೋಡು ಅಟ್ಟದ ಮೇಲೆ ಅವನನ್ನು ಅಡಗಿಸಿಟ್ಟಿದ್ದೇನೆ ಎನ್ನುತ್ತಾಳೆ. ಪುಸ್ತಕದವ ಬೆವತು ಭಯದಿಂದ ತತ್ತರಿಸಿ ಹೋಗಿದ್ದಾನೆ ಅಟ್ಟದ ಮೇಲೆ. ಅಷ್ಟರಲ್ಲಿ ಅವನ ಕೈಗೆ ಏನೋ ತಗಲಿ ಶಬ್ದವಾಗುತ್ತದೆ ಅಟ್ಟದಲ್ಲಿ, ನೋಡಿ ನೋಡಿ ಅಟ್ಟದಲ್ಲಿ ಆ ಗಂಡಸಿನ ಶಬ್ದ ಬರುತ್ತಿದೆ ಎನ್ನುತ್ತಾಳೆ ಗೌರಿ ಅಟ್ಟದ ಕಡೆಯೇ ನೋಡುತ್ತಾ.

ಗೌರಿಯ ಗಂಡ ಇನ್ನಷ್ಟು ಸಂತೋಷದ ಜೊತೆಗೆ ಊಟಮಾಡಿ ಮತ್ತೆ ಹೊರಗಡೆ ಹೋಗಲು ತಯಾರಾಗುತ್ತಾನೆ. ಆಗ ಗೌರಿ ಮತ್ತೊಮ್ಮೆ ಅಟ್ಟದಲ್ಲಿ ನೋಡಿಲ್ಲವೆ ಎನ್ನುತ್ತಾಳೆ ? ಅವಳ ಗಂಡ ಜೋರಾಗಿ ನಕ್ಕು ಅವಳನ್ನು ಮುದ್ದಿಸಿ ಹೊರಗಡೆ ಹೋಗುತ್ತಾನೆ.

ಗೃಹಿಣಿ ಪುಸ್ತಕ ಮಾರುವವನನ್ನು ಕೆಳಕ್ಕೆ ಕರೆದು ಈಗ ಹೇಳು ನಿನ್ನ ಪುಸ್ತಕಗಳಲ್ಲಿ ಇದೆಲ್ಲ ಇದೆಯೇ? ಎನ್ನುತ್ತಾಳೆ. ಪುಸ್ತಕದವ ಬೆಕ್ಕಸಬೆರಗಾಗಿ ಪುಸ್ತಕಗಳನ್ನು ಅಲ್ಲಿಯೇ ಬಿಟ್ಟು ಬೀದಿಗೆ ಓಡಿಬಿಟ್ಟ."

ವಿನೋದ್ ಪವನ್ ಮುಖ ನೋಡುತ್ತಾ ತನ್ನ ಮುಖದನ್ನೆ ಒಂದು ಪ್ರಶ್ನೆಯಾಗಿಸಿಕೊಂಡು ಬಿಟ್ಟ.

"ವಿನೋದ್ ಗುಡ್‌ಲಕ್ ಫಾರ್ ಯುವರ್ ಲವ್ ಈಗ ಸಮಯವಾಗಿದೆ. ನೀನು ಹೋಗು" ಎನ್ನುತ್ತಾನೆ ಪವನ್.

ಅರ್ಧಗಂಟೆ ತನಗೇನು ಅರ್ಥವಾಗದ ಪವನ್ ಮಾತುಗಳು ವಿನೋದ್‌ನನ್ನು ಎಲ್ಲೋ ಕೊಂಡೊಯ್ದುಬಿಟ್ಟಿದ್ದವು. ಆದರೆ ಒಂದು ಮಾತ್ರ ಜ್ಞಾಪಕವಿದೆ ೫೦-೨೯=೨೧, ಕೇವಲ ೨೧ ವರ್ಷ. ಪವನ್ ಮುಖ ನೋಡುತ್ತಾ ವಂದನೆಗಳನ್ನು ತಿಳಿಸಿ ತನ್ನ ಕುರ್ಚಿಯ ಕಡೆ ನಡೆಯತೊಡಗಿದ. ಪವನ್ ತನ್ನ ಸಹಾಯಕರ ಜೊತೆಗೆ ಇಷ್ಟು ಸಲಿಗೆಯಿಂದ ನಡೆದುಕೊಂಡಿದ್ದು ಸ್ವಲ್ಪ ಜಾಸ್ತಿಯಾಯಿತೇನೋ ಎಂದುಕೊಂಡರೂ, ಜ್ಞಾನದ ಬಗ್ಗೆ ಹೇಳಿದ್ದಕ್ಕೆ ತನ್ನಲ್ಲೆ ಸ್ವಲ್ಪ ಬೀಗಿದ.



ಕಾರ್ಯದರ್ಶಿ ಮತ್ತು ವಿನೋದ್ ಇಬ್ಬರು ಮಾತನಾಡುತ್ತಿದ್ದಾರೆ – ಒಳಧ್ವನಿಯಲ್ಲಿ. ಮುಂದಿನ ವಾರದಲ್ಲಿ ಬೇರೆ ಕಚೇರಿಗೆ ವರ್ಗವಾಗಲಿರುವ ಕಾರ್ಯದರ್ಶಿ ಎಲ್ಲರ ಜೊತೆಯಲ್ಲೂ ಬಹಳ ಸಲಿಗೆಯಿಂದ ಸಹಕರಿಸುತ್ತಿದ್ದಾನೆ.

"ವಿನೋದ್ ನೀನು ನೀಲಾಕಾಶ ನೋಡಿದೆ ತಾನೆ ?"

"ನೀಲಾಕಾಶ ನೋಡಿದೆ" ಎನ್ನುತ್ತಾನೆ ಕಣ್ಣುಗಳ ತುಂಬಾ ಆ ಚಿತ್ರಗಳನ್ನೆ ತುಂಬಿಕೊಂಡು.

"ನೀವು ನೋಡಿದ್ರಾ ಸಾರ್"

"ಎಲ್ಲಯ್ಯ ನೋಡಿದೆ ಹುಂ ನೋಡಿದೆ ಅಂದುಕೋ, ಆದರೆ ನನಗೇನು ಹಿಡಿಸಲಿಲ್ಲ".

"ಅಂದ್ರೆ ? ಯಾಕೆ ಸಾರ್ ?"

"ನನ್ನ ಇಡೀ ಜೀವನವನ್ನೆಲ್ಲಾ ಕೇವಲ ಒಂದೂವರೆ ಗಂಟೆಯಲ್ಲಿ ತೋರಿಸಿಬಿಟ್ಟಿರಲ್ಲ ? ಎಂದು ಜೋರಾಗಿ ನಗುತ್ತಾ ಸುತ್ತಲು ನೋಡುತ್ತಾನೆ. ವಿನೋದ್ ಮತ್ತೊಮ್ಮೆ ಆಶ್ಚರ್ಯದಿಂದ ಕಾರ್ಯದರ್ಶಿಯನ್ನು ನೋಡುತ್ತಾ ಈ ದಿನವೇಕೋ ಪ್ರತಿಯೊಬ್ಬರೂ ಒಂದೊಂದು ಅಪರೂಪ ನಿಗೂಢ ಗುಹೆಗಳಂತೆ ಕಾಣುತ್ತಿದ್ದಾರಲ್ಲಾ ಎಂದು ಆಲೋಚಿಸುತ್ತಿದ್ದಾನೆ.

"ವಿನೋದ್ ಮದುವೆಯಾದರೆ ಸ್ವತಂತ್ರ್ಯವಂತೂ ಹೋಗಿಬಿಡುತ್ತೆ. ಜೊತೆಗೆ

ಎಷ್ಟೋ ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ. ಆದರೆ ಜೀವನ ಮಾತ್ರ ಕಂಡುಕೊಳ್ಳುತ್ತೀಯ. ಆದಷ್ಟು ಬೇಗ ಮದುವೆ ಮಾಡಿಕೋ" ಎಂದರು ಕಾರ್ಯದರ್ಶಿ.

ವಿನೋದ್ ಇನ್ನಷ್ಟು ಗೊಂದಲವಾಗಿ ಕಾರ್ಯದರ್ಶಿಯನ್ನು ನೋಡತೊಡಗಿದ. ಆದರೆ ಜಾಸ್ತಿ ಮಕ್ಕಳನ್ನು ಮಾಡಿಕೊಳ್ಳಬೇಡ. ಒಮ್ಮೆ ಏನಾಯಿತು ಗೊತ್ತೆ ? ನಾನು ರಾತ್ರಿ ಸುಮಾರು ೭ ಗಂಟೆ ಕತ್ತಲಲ್ಲಿ ಮನೆಯ ಕಡೆ ಹೋಗುತ್ತಿದ್ದೆ. ಒಬ್ಬ ಕುಡುಕ ಸುಮಾರು ೫೦ ವರ್ಷದವ ಏನಪ್ಪ ಎಲ್ಲಿ ಹೋಗುತ್ತಿದ್ದೀಯ ಎಂದು ಬಹಳ ಸಲಿಗೆಯಿಂದ ಮಾತನಾಡಿಸಿ, ಒಂದು ಬೀಡಿ ಕೇಳಿದ. ನಾನು ಸಿಗರೇಟ್ ಕೊಟ್ಟೆ, ಹೊತ್ತಿಸಿಕೊಂಡ ಮೇಲೆ "ಎಷ್ಟು ಜನ ಮಕ್ಕಳು ನಿನಗೆ" ಎಂದು ಕೇಳಿದ. "ನಾಲ್ಕು ಜನ ಅಂದೆ ಅಷ್ಟೆ... ತುಃ ಎಂದು ನನ್ನ ಮುಖದ ಮೇಲೆ ಉಗಿದು ಮುಂದಕ್ಕೆ ನಡೆದೆ ಬಿಟ್ಟ."

ಈಗ ಇಬ್ಬರೂ ಒಂದೆ ರೀತಿಯಾಗಿ ನಗಾಡಿದರು. ಈ ತಮಾಷೆಯನ್ನು ಕೇಳಿದ ಮಿಕ್ಕೆಲ್ಲ ಸಹಪಾಠಿಗಳು ದಿನದ ಜೋಕೆಂದು ಘೋಷಿಸಿದರು.



ಬೆಂಗಳೂರಿನ ಇನ್ನೊಂದು ಸಂಧ್ಯಾಕಾಲ ಪ್ರೇಮಿಗಳಲ್ಲಿ ರೋಮಾಂಚನ ಮೂಡಿಸುವಷ್ಟು ತಂಪಾಗಿ ನವಿರಾಗಿ ಮತ್ತೇರಿ ಓಲಾಡುತ್ತಿದೆ. ಪ್ರೇಮಿಗಳು ತಮಗೆ ತೋಚುವ ರೀತಿಯಲ್ಲಿ ತಮ್ಮ ತಮ್ಮ ಸೌಕರ್ಯಕ್ಕೆ ತಕ್ಕಂತೆ ಸಾಯಂಕಾಲವನ್ನು ಪ್ರೀತಿಯಲ್ಲಿ ಮುಳುಗಿಸಲು ಅನುವಾಗುತ್ತಿದ್ದಾರೆ.

ಕೆಲವು ಜೋಡಿಗಳು ಹಸುರು ತೋಟಗಳಲ್ಲಿ ಉಸಿರಾಡುತ್ತಾ ಕುಳಿತಿದ್ದರೆ ಕೆಲವರು ಸಿನಿಮಾ ಹಾಲಿನೊಳಗೆ ಕತ್ತಲಲ್ಲಿ ಸ್ಪರ್ಶ ಮೋಹಕ ಶಕ್ತಿಗೆ ಗುರಿಯಾಗಿದ್ದಾರೆ. ಇನ್ನು ಕೆಲವು ವಿರಹಿ ಪ್ರೇಮಿಗಳು ಜೊತೆಯಿಲ್ಲದೆ ಮೆಜೆಸ್ಟಿಕ್, ಬ್ರಿಗೇಡ್, ಸಿನಿಮಾ, ಕ್ಯಾಬರೆ ಹಾಲುಗಳಲ್ಲಿ ಮೈಗೆ ಕಾವೇರಿಸಿಕೊಳ್ಳುತ್ತಿದ್ದಾರೆ.

ಈಗ ನಮ್ಮ ಹೀರೋ ಕಾರನ್ನು ನಿಧಾನವಾಗಿ ಓಡಿಸುತ್ತಾ ಒಂದು ದೊಡ್ಡ ಬಹುಸಂಖ್ಯೆ ಕಟ್ಟಡದ ಹಿಂದೆ ನಿಲ್ಲಿಸಿದ. ಹೀರೋ ಎಂದರೆ ನಿಮಗೆ ಈಗಾಗಲೇ ಜ್ಞಾಪಕಕ್ಕೆ ಬಂದಿರಬೇಕು ? ನಿಧಾನವಾಗಿ ಬಾಗಿಲನ್ನು ತೆಗೆದುಕೊಂಡು ಸುತ್ತಲು ನೋಡುತ್ತಾ ವಿದ್ಯುತ್ ಬೆಳಕಿನ ಕೆಳಗೆ ಕಟ್ಟಡದೊಳಕ್ಕೆ ನಡೆದೋಗುತ್ತಾನೆ. ಕಟ್ಟಡದ ಮುಖ್ಯ ಬಾಗಿಲಲ್ಲಿರುವ ಲಿಫ್ಟ್‌ಗಳ ಮುಂದೆ ಜಾಸ್ತಿ ಜನ ನಿಂತಿರುವುದರಿಂದ ಮುಂದಕ್ಕೆ ನಡೆದು ಎಡಗಡೆಗೆ ತಿರುಗಿಕೊಂಡು ಮತ್ತೆ ಒಂದು ಹಾಲಿನೊಳಕ್ಕೆ ನಡೆದು ಅಲ್ಲಿರುವ ಒಳ ಲಿಫ್ಟ್‌ನಲ್ಲಿ ಏಳನೇ ಮಹಡಿಯ ಬಟನ್ ಒತ್ತಿದ. ಅದೇ ಲಿಫ್ಟ್‌ನಲ್ಲಿ ಒಬ್ಬ ೪೦-೪೨ ವರ್ಷಗಳ ಮಧ್ಯ ವಯಸ್ಸಿನ ಗಂಡಸಿದ್ದು ಸಲಿಗೆಯಿಂದ ಮುಗುಳು

ನಗುತ್ತಾ ಹೀರೋ ಕಡೆ ನೋಡಿದ. ಹೀರೋ ಗ್ರೇ ಬಣ್ಣದ ಸೂಟು ತೊಟ್ಟಿದ್ದು ಅವನ ಕಣ್ಣಿಗೆ ಒಬ್ಬ ದೊಡ್ಡ ಎಕ್ಸ್‌ಕ್ಯೂಟಿವ್‌ನಂತೆ ಕಾಣಿಸಿದ. ಸಣ್ಣದಾಗಿ ಕತ್ತರಿಸಿದ ಮೀಸೆ, ಮೆಟಲ್ ಫ್ರೇಮ್‌ನಲ್ಲಿರುವ ಫೋಟೋಕ್ರೋಮ್ ಗ್ಲಾಸುಗಳು ನಿಧಾನವಾಗಿ ನೋಡುನೋಡುತ್ತಿದ್ದಂತೆ ಬೆಳ್ಳಗಾಗುತ್ತಾ ಕಣ್ಣುಗಳು ಒಳಗಿಂದ ಹೊಳೆಯ ತೊಡಗಿದವು. ಹೀರೋ ತನ್ನ ಚಾಳೀಸನ್ನು ತೆಗೆದು ಮಡಿಸಿ ಒಳ ಜೇಬಿನಲ್ಲಿರಿಸಿದ. ಹೀರೋನ ಮುಖ ನೋಡಿದ ಮನುಷ್ಯ ಅರೆ ಕ್ಷಣ ಬೆರಗಾಗಿ ಅವನ ಮುಖವನ್ನೇ ನೋಡಿದ. ಅಷ್ಟರಲ್ಲಿ ಏಳನೇ ಮಹಡಿ ಬಂದು ಲಿಫ್ಟ್ ಸಣ್ಣದಾಗಿ ಶಬ್ದಮಾಡುತ್ತಾ ನಿಂತುಕೊಂಡಿತು. ಹೀರೋ ಬಹಳ ಸಭ್ಯನಾಗಿ ಕ್ಷಮಾಪಣೆ ಎನ್ನುತ್ತಾ ಲಿಫ್ಟ್‌ನಿಂದ ಹೊರಗಡೆಗೆ ಬಂದು ಮುಂದಕ್ಕೆ ಸ್ವಲ್ಪದೂರ ನಡೆದು ಬಂದು ಸುಂದರವಾದ ರೆಸ್ಟೋರೆಂಟ್ ಕಂ ಬಾರ್‌ನ ಮುಂದೆ ಅರೆಕ್ಷಣ ನಿಂತು ವೀಕ್ಷಿಸಿದ.

ಅಲ್ಲಿ ನಿಂತಿದ್ದ ಸೇವಕ ಹೀರೋನ ನೋಡಿದ್ದೆ ಜಪಾನಿ ಶೈಲಿಯಲ್ಲಿ ಒಂದು ಸೆಲ್ಯೂಟ್ ಹೊಡೆದು ಬಾಗಿಲನ್ನು ಮೆತ್ತಗೆ ತೆಗೆಯುತ್ತಾ ದಾರಿ ಮಾಡಿಕೊಟ್ಟ.

ಹೀರೋ ಅವನ ಕಡೆಗೊಂದು ಸಣ್ಣ ಮುಗುಳು ನಗೆ ಬೀರಿ ಒಳಕ್ಕೆ ಹೆಜ್ಜೆಯಾಕಿದ. ಇನ್ನೊಂದು ಜೇಬಿನಲ್ಲಿದ್ದ ಕಪ್ಪು ಬೆಕ್ಕು ಜಾಳೀಸನ್ನು ತೆಗೆದು ಧರಿಸಿಕೊಳ್ಳುತ್ತಾ ಒಂದು ಕುರ್ಚಿಯ ಮೇಲೆ ಕುಳಿತುಕೊಂಡ. ಮಂದ ಬೆಳಕಿನಲ್ಲಿ ಪ್ರತಿಯೊಂದು ವಸ್ತುವು ಬಹಳ ಸುಂದರವಾಗಿ ಕಾಣಿಸುತ್ತಿದೆ. ಈ ಅರೆಕೊರೆ ಬೆಳಕು ಮತ್ತು ಕತ್ತಲಿನ ಅಂತರಾಳದಲ್ಲಿ ಅದೇನು ಅದ್ಭುತವಿದೆಯೋ ಏನೋ ಎರಡು ಬೆರೆತಾಗ ಅಥವಾ ಎರಡು ಬಿಡಿಬಿಡಿಯಾಗುವಾಗ ಎಲ್ಲಿಲ್ಲದ ಸೌಂದರ್ಯ ತುಂಬಿಕೊಳ್ಳುತ್ತದೆ ಸುತ್ತಲಿನ ಜಗತ್ತಿಗೆ.

ಅಲ್ಲಲ್ಲಿ ಕೆಲವು ಮೇಜುಗಳು ಮುಂದೆ ಇಬ್ಬರು ಮೂವರು ಹೆಣ್ಣು - ಗಂಡುಗಳು ಭೇದವಿಲ್ಲದೆ ಕುಳಿತಿದ್ದಾರೆ. ಬಾರ್‌ಗಳಲ್ಲಿ ಸಾಮಾನ್ಯವಾಗಿ ಇರುವ ಕೆಲವು ವಸ್ತುಗಳು ಮೇಜುಗಳ ಮೇಲಿವೆ. ನೀಧಾನವಾಗಿ ಹೀರೋ ಒಮ್ಮೆ ಸುತ್ತಲೂ ನೋಡಿದ. ಒಬ್ಬಂಟಿಯಾಗಿರುವ ಹೆಣ್ಣುಗಳು ಯಾರೂ ಇಲ್ಲ. ಆದರೆ ಗಂಡಸರ ಜೊತೆ ಕುಳಿತಿರುವ ಹೆಂಗಸರು ಕೆಲವರು ಹೊಸ ಅತಿಥಿಯ ಕಡೆ ಮಧ್ಯೆ ದೃಷ್ಟಿ ಬೀರುತ್ತಾ ತಮ್ಮ ಮುಂದಿರುವ ಗಂಡಸರ ಜೊತೆ ಲಲ್ಲೆಗರೆಯುತ್ತಿದ್ದಾರೆ.

ಈಗ ಇನ್ನೆರಡು ಜೋಡಿಗಳು ಒಳ ಬರುತ್ತವೆ. ಹೀರೋ ಹತ್ತಿರ ಬಂದ ಸೇವಕ ಭಕ್ಷ್ಯಗಳ ಪಟ್ಟಿಕೊಟ್ಟು ಮತ್ತೆ ಬರುವುದಾಗಿ ಮುಂದಿರುವ ಮೇಜಿನ ಕಡೆ ನಡೆದು ಹೋಗುತ್ತಾನೆ. ಹೀರೋ ಭಕ್ಷ್ಯಗಳ ಪಟ್ಟಿಯ ಮೇಲೆ ಒಂದು ನೋಟ ಬೀರಿ ಪಕ್ಕದಲ್ಲಿರಿಸಿ ಒಂದೆರಡು ಮುಖಗಳನ್ನು ಲಕ್ಷ್ಯದಲ್ಲಿಟ್ಟುಕೊಳ್ಳುತ್ತಾನೆ.

ನಗರದ ಮಧ್ಯದಲ್ಲಿರುವ ಈ ವಿಶೇಷ ರೆಸ್ಟೋರೆಂಟ್ ಒಂದು ರೀತಿಯಲ್ಲಿ ಪ್ರಣಯ, ಐಶ್ವರ್ಯ ಮತ್ತು ರಾಜಕೀಯದ ಒಂದು ಬಿಂದುವಾಗಿದೆ. ಇಲ್ಲಿ ನಡೆಯುವ ಕೆಲವು ಮಾತುಗಳು ಅನೇಕ ವಿಧಗಳಲ್ಲಿ ರಾಜ್ಯದ ರಾಜಕೀಯ ಪತ್ರಿಕಾರಂಗ, ಉದ್ಯಮಶೀಲಗಳ ಮೇಲೆ ಪ್ರಭಾವ ಬೀರುತ್ತವೆ.

ಪ್ರತಿಯೊಬ್ಬರೂ ಅತಿ ತಿಳುವಳಿಕೆಯಾಗಿ ಮಾತನಾಡುತ್ತಾ ಅತ್ಯಂತ ಸಭ್ಯವಾಗಿ ನಡೆದುಕೊಳ್ಳುತ್ತಿದ್ದಾರೆ. ಮಧ್ಯದಲ್ಲಿ ಕೆಲವರು ಬಾಗಿಲು ತೆಗೆದುಕೊಂಡು ಸಾಹಸದಲ್ಲಿ ಮುಳುಗಲು ಬರುತ್ತಿದ್ದಾರೆ. ಸಾಮಾನ್ಯವಾಗಿ ಯಾರೂ ಆತುರಾತುರವಾಗಿ ಬಂದು ಹೋಗುವುದಿಲ್ಲ. ಎಲ್ಲರೂ ಅತಿ ಗಂಭೀರವಾಗಿ ಸಾವಕಾಶವಾಗಿ ಶಿಸ್ತಾಗಿ ಸಮಯವನ್ನು ಮೆಲ್ಲಗೆ ಸವಿಯಲು ಬಯಸುತ್ತಾರೆ.

ಸೇವಕ ಮತ್ತೊಮ್ಮೆ ಹೀರೋನ ಪಕ್ಕಕ್ಕೆ ಬಂದು ನಿಂತುಕೊಳ್ಳುತ್ತಾನೆ. ಕಾಕ್‌ಟೈಲ್ ಎರಡು ಪೆಗ್ ಮತ್ತು ಕೆಲವು ತಿನಿಸುಗಳನ್ನು ಹೇಳಿದ್ದೆ, ಸೇವಕ ವಿನಮ್ರವಾಗಿ ಅಲ್ಲಿಂದ ಹೋಗುತ್ತಾನೆ.

ಈಗ ಹೆಚ್ಚು ಕಮ್ಮಿ ಎಲ್ಲಾ ಮೇಜುಗಳ ಮುಂದೆಯು ಸೌಂದರ್ಯ, ಜ್ಞಾನ ಪ್ರಣಯ ಹರಿದು ಹೊಮ್ಮುತ್ತಿದೆ. ಇಲ್ಲಿಗೆ ಬರುವವರು ಖಂಡಿತ ಹೆಣ್ಣಿನ ಜೊತೆ ಬರಬೇಕು ಎನ್ನುವ ಕಲ್ಪನೆ ಅವನಲ್ಲಿ ಮೂಡುತ್ತದೆ. ಇಲ್ಲಿಗೆ ಇನ್ನು ಮೇಲೆ ಬಂದರೆ ಹೆಣ್ಣಿನ ಜೊತೆಯೇ ಬರಬೇಕು ಎಂದುಕೊಳ್ಳುವಷ್ಟರಲ್ಲಿ ಇಬ್ಬರು ಹೆಣ್ಣುಗಳ ಜೊತೆ ಒಬ್ಬ ಗಂಡಸು ಒಳ ಬಂದು ಸುತ್ತಲು ನೋಡುತ್ತಾನೆ.

ಎಲ್ಲಿಯೂ ಮೂರು ಕುರ್ಚಿಗಳು ಖಾಲಿಯಿಲ್ಲದೆ, ಹೀರೋ ಇರುವ ಮೇಜಿನ ಹತ್ತಿರ ಬಂದು ಕ್ಷಮಾಪಣೆ ಎನ್ನುತ್ತಾ ಕುರ್ಚಿಗಳಲ್ಲಿ ಕುಳಿತುಕೊಳ್ಳುತ್ತಾರೆ. ಹೀರೋ ಇನ್ನಷ್ಟು ಸಭ್ಯತೆಯನ್ನು ಮುಖದಲ್ಲಿ ತುಂಬಿಕೊಂಡು ಅವರಿಗೆ ಸ್ಥಳಮಾಡಿಕೊಡುತ್ತಾ "ನಿಮಗೆ ಸ್ವಾಗತ" ಎನ್ನುತ್ತಾನೆ.

ಮೂವರಲ್ಲಿ ಇಬ್ಬರು ದಂಪತಿಗಳಾದರೆ ಒಬ್ಬಳು ಮದುವೆಯಾಗದ ಹೆಣ್ಣು. ಮೂವರ ಮುಖಸಾಮ್ಯತೆಯನ್ನು ಓದಿಬಿಟ್ಟ ಹೀರೋ ಇಬ್ಬರು ಅಕ್ಕತಂಗಿಯರೆಂದು ಕಲ್ಪನೆ ಮಾಡಿಕೊಳ್ಳುತ್ತಾನೆ. ಇವನಂತೂ ಪೊಲೀಸ್ ಅಧಿಕಾರಿಯೇ ಎಂದು ಕೊಳ್ಳುವಷ್ಟರಲ್ಲಿ, ಆ ಗಡಸು ಮುಖದ ಪುಟ್ಟ ಕ್ರಾಪಿನ ಮನುಷ್ಯ, "ನಾನು ಪೊಲೀಸ್ ಆಫೀಸರ್ ತರುಣಿಕುಮಾರ್" ಎಂದು ಕೈ ಚಾಚುತ್ತಾನೆ; ಹೀರೋ ಕಡೆ. ಹೀರೋ ತನ್ನ ಯೋಚನೆಗೆ ಒಮ್ಮೆ ತಾನೇ ತಲೆದೂಗಿ "ನನ್ನೆಸರು ಉದಯ್ ಅಂತ, ಫಿಲಾಸಫಿ ಅಧ್ಯಾಪಕ" ಎಂದು ಕೈ ಕುಲುಕುತ್ತಾನೆ.

"ಇವರು ನನ್ನ ಪತ್ನಿ, ಇವರು ನನ್ನ ನಾದಿನಿ ಎಂದು ಪರಿಚಯಿಸುತ್ತಾ ನಗುತ್ತಾನೆ. ತುಸು ಆಶ್ಚರ್ಯಪಟ್ಟು ಹೀರೋ ಪೊಲೀಸಿನವರು ಹಾಸ್ಯಮಾಡಬಲ್ಲರೆ ಎಂದುಕೊಳ್ಳುತ್ತಾ ತನ್ನ ಬೆಕ್ಕಿನ ಚಾಳೀಸನ್ನು ತೆಗೆದು ಜೇಬಿನಲ್ಲಾಕಿಕೊಂಡ.

ಹಾಗೊಮ್ಮೆ, ಹೀಗೊಮ್ಮೆ ಹಲವು ಕೋನಗಳಲ್ಲಿ ಅವಳ ಮುಖದ ರೇಖೆಗಳನ್ನು ದೃಶ್ಯಗಳಲ್ಲಿ ಮಾರ್ಪಡಿಸಿ ಒಳಗೊಳಗೆ ಸಂಯೋಗಿಸಿ ಅವಳ ಹೃದಯದಲ್ಲೇಳುವ ಕಂಪನಗಳಲ್ಲಿ ಅವಳನ್ನು ಓದತೊಡಗಿದ.

ಕ್ಷಣಗಳು ನಿಧಾನವಾಗಿ ಉರುಳಿದಂತೆ ಅವರ ಮಧ್ಯದ ಸೀಮೆ ಸ್ವಲ್ಪ ಸ್ವಲ್ಪವಾಗಿ ಸಡಿಲಗೊಳ್ಳುತ್ತಾ ಹೋಗುತ್ತಿದೆ. ಪರಿಪೂರ್ಣವಾದ ಮುಖ, ಪ್ರತಿ ಹೆಣ್ಣಿಗೂ ತನ್ನದೇ ಆದ ಸೌಂದರ್ಯವಿರುತ್ತದೆ. ಈಗ ಎದುರಿಗಿರುವ ಹೆಣ್ಣಿಗೆ ಉಜ್ವಲ ಮೈಕಾಂತಿಯ ಜೊತೆಗೆ ನೀಳವಾದ ಮೂಗು, ಆ ಮುಖಕ್ಕೆ ಅತಿ ಚೆಲುವಾಗಿ ತೋರುತ್ತಿದೆ.

ಅವಳ ಮೂಗು ಕಾಶ್ಮೀರದ ಕಣಿವೆಯಲ್ಲಿರುವ ಹೆಣ್ಣುಗಳನ್ನು ಜ್ಞಾಪಿಸುತ್ತಿದೆ. ನೇರವಾದ ಮೂಗಿನ ಮೇಲೆ ಎರಡು ಕಡೆಯು ಹೊಳೆಯುವ ಕಣ್ಣುಗಳು ಪ್ರಣಯ ಕತೆಗಳನ್ನು ತುಂಬಿ ಕೊಂಡಂತಿವೆ. ತುಟಿಗಳ ಮೇಲೆ ದಟ್ಟವಾದ ಗುಲಾಬಿ ಬಣ್ಣದ ರಂಗು. ಈಗಾಗಲೇ ಸೇವಕನಿಗೆ ಅವರು ಆದೇಶ ನೀಡಿದ ಎಲ್ಲಾ ಭಕ್ಷ್ಯಗಳು ಮೇಜಿನ ಮೇಲೆ ಹರಡಿಕೊಂಡಿವೆ.

ಮಾತುಗಳ ಮಧ್ಯ ಆಗಾಗ ಎದುರು ಬದುರಿನ ಕಣ್ಣುಗಳು ನೋಟಗಳನ್ನು ಎಸೆದುಕೊಳ್ಳುತ್ತಿವೆ. ಹೀರೋನ ಮುಖ ನೋಡುತ್ತಿರುವ ಎದುರಿಗಿನ ನೀಳಮೂಗು ಕೆಲವೊಮ್ಮೆ ಅವನ ಆಕರ್ಷಕವಾದ ಹೊಳಪು ಕಣ್ನೋಟಕ್ಕೆ ಆಕರ್ಷಣೆಗೊಂಡು ಕಂಪನಕ್ಕೆ ಗುರಿಯಾಗುತ್ತಿದ್ದಾಳೆ. ಏನೋ ಕಲ್ಪಿಸಿಕೊಂಡ ಅವಳ ಹೃದಯದಲ್ಲಿ ಏನೋ ಪರಿವರ್ತನೆ ಮೂಡಿ ಜುಮ್ಮೆನ್ನುತ್ತದೆ.

ಪೊಲೀಸ್ ಅಧಿಕಾರಿ ಹಾಸ್ಯದ ಮೇಲೆ ಹಾಸ್ಯ ಮಾಡುತ್ತಾ ಎಲ್ಲರನ್ನೂ ನಗಿಸುತ್ತಾ ಕ್ಷಣಗಳನ್ನು ಸವಿಯುತ್ತಿದ್ದಾನೆ.



ವೀಕ್ಷ್ಯ ವೀಕ್ಷ್ಯ ಪುನರ್ವೀಕ್ಷಿನಾ ಮದಾ
ಪರ್ಯರಂಬಿ ಪರಿರಭ್ಯ ಜಾಸಕೃತ
ಚುಂಬಿತಾ ಪುನರಚುಂಬಿಚ ಅದರಂತೆ
ತೃಪ್ತಿರಪಿನ ಕಥಂ ಚನಾವೇಚ

೫೦-೨೯=೨೧ ಅವನಿಗೆ ತಲೆ ಕೆಡಿಸಿಬಿಟ್ಟಿವೆ. ಇದರ ಜೊತೆಗೆ ಇನ್ನಷ್ಟು ಅಕ್ಕಪಕ್ಕದ ದಿನನಿತ್ಯ ಎದುರಾಗುವ ಅಂಕಿಗಳು ೩೨, ೨೬, ೩೨ ರಿಂದ ೪೨, ೩೬, ೪೨ ಇನ್ನೂ ಭಾರಿಯಾದವು ಎಲ್ಲವೂ ಅವನ ಕಣ್ಣುಗಳ ಮುಂದೆ ಓಡಾಡುತ್ತಿವೆ. ಯಾವುದಾದರೂ ಒಂದು ಅಂಕಿಯನ್ನು ಕೆಳಗಿನಿಂದ ಮೇಲಿನವರಿವಿಗೂ ಸವಿಯಬೇಕೆನ್ನುವ ದೃಢ ಸಂಕಲ್ಪ ಅವನಲ್ಲಿ ಮೂಡುತ್ತಲೇ ಹೋಗುತ್ತದೆ. ಈಗ ಆದಷ್ಟು ಸಮಯವನ್ನು ಬರೀ ಹೆಣ್ಣುಗಳನ್ನು ವೀಕ್ಷಿಸುವುದೇ ಅಲ್ಲದೆ ಹಲವು ರೂಪಗಳಲ್ಲಿ ಅವರನ್ನು ಕಾಡುವ ಉಪಾಯಗಳನ್ನು ಎಣಿಯುತ್ತಾ ಹೋಗುತ್ತಾನೆ.

ಕೆಲವೊಂದು ಸಲ ಅವನಿಗೆ ಒಳ್ಳೆ ಚುಟುಕು ಉಪಾಯಗಳು ಬಂದರು, ದಿಢೀರನೆ ಬಿಳಿಚಿಕೊಂಡು ಆ ರೀತಿಯಾಗಿ ಯೋಚಿಸುವುದೇ ಪಾಪವೆಂದು ಕೊಳ್ಳುತ್ತಾನೆ. ಅಕ್ಕಪಕ್ಕದ ಮನೆಗಳಲ್ಲಿರುವ ಹಲವು ಹೆಣ್ಣುಗಳು ಮತ್ತು ಮದುವೆಯಾಗಿರುವ ಹೆಂಗಸರ ಬಗ್ಗೆ ಮನಸ್ಸಿನಲ್ಲೇ ಒಂದು ಟಿಪ್ಪಣಿಮಾಡಿಕೊಂಡು ತನ್ನ ಮತ್ತು ಅವರ ನಡುವೆ ನಡೆಯುವ ಕೆಲವು ದಿನನಿತ್ಯದ ಘಟನೆಗಳನ್ನು ಮತ್ತು ಅವರು ತನ್ನ ಜೊತೆ ವರ್ತಿಸುವ, ನೋಡುವ ನೋಟಗಳಲ್ಲಿ ಹಲವು ಬಣ್ಣಗಳನ್ನು ತುಂಬಿ ತನ್ನೊಳಗೆಯೇ ಸಂಯೋಜಿಸಿ ವಿಧವಿಧ ರೂಪಗಳನ್ನು ಕೊಡುತ್ತಾ ಹೋಗುತ್ತಾನೆ.

ಕೊನೆಗೆ ಎದುರು ಬೀದಿಯಲ್ಲಿರುವ ಸೇಲ್ಸ್‌ಗರ್ಲ್ಸ್ ಶಾಲಿನಿಯನ್ನು ತನ್ನ ಬಲೆಗೆ ಬೀಳಿಸಬೇಕೆಂದು ದೃಢ ಸಂಕಲ್ಪ ಮಾಡಿಕೊಂಡ. ಶಾಲಿನಿ ಜೊತೆಗೆ ಇನ್ನೂ ಎರಡು ಹೆಸರುಗಳು ಅವನ ಪಟ್ಟಿಯಲ್ಲಿವೆ.

ಪವನ್ ಹೇಳಿದ ಕೆಲವು ಮಾತುಗಳು ಅವನನ್ನು ಆಗಾಗ ತಟ್ಟಿ ಎಬ್ಬಿಸುವುದಲ್ಲದೆ ರೊಚ್ಚಿಗೇಳಿಸಿಬಿಡುತ್ತವೆ. ಹೆಣ್ಣು ಗಂಡಿಗಿಂತ ಎಷ್ಟೋಪಟ್ಟು ಬುದ್ಧಿವಂತರು. ಪುಸ್ತಕ ಮಾರುವವನ ಗೋಳು ತಿಳಿದುಕೊಂಡರೆ ಸಾಕು ನಗುತ್ತಾನೆ. ಮತ್ತೆ ದಿಢೀರನೆ ಏನೋ ಗಂಭೀರವಾಗಿ ಯೋಚಿಸುತ್ತಾನೆ.

ಒಂದು ದಿನ ಶಾಲಿನಿಯ ಹಿಂದೆ ನಡೆದೆ ಬಿಟ್ಟ, ಎಷ್ಟೋ ದಿನಗಳು ಅವಳ ಹಿಂದೆ ಮುಂದೆ ನಡೆದಿದ್ದಾನೆ, ಅವಳನ್ನು ಹತ್ತಿರದಿಂದ ನೋಡಿದ್ದಾನೆ. ಆದರೆ ಈ ದಿನ ಆಗುತ್ತಿರುವಷ್ಟು ಭಯ ತುಮುಲ ಅವನಿಗೆ ಯಾವಾಗಲೂ ಆಗಿರಲಿಲ್ಲ.

ನೀಳವಾದ ಕಪ್ಪುಜಡೆ, ಹೆಗಲಲ್ಲಿ ವ್ಯಾನಿಟಿ ಚೀಲ ಶಿಸ್ತಿನಿಂದ ಓಲಾಡುವ ನಿತಂಬಗಳು, ಅವನ ಕಣ್ಣುಗಳ ಮುಂದೆ ಸುಮಾರು ೨೦-೨೫ ಅಡಿಗಳ ದೂರದಲ್ಲಿ ನಡೆಯುತ್ತಿದ್ದಾಳೆ ಶಾಲಿನಿ. ಎಷ್ಟೇ ಪ್ರಯತ್ನಪಟ್ಟರೂ ಶಾಲಿನಿಯ ಮುಂದಕ್ಕೆ ಅವನ ಕಾಲುಗಳು ಹೋಗಲಿಲ್ಲ. ಶಾಲಿನಿ ನೇರವಾಗಿ ಬಸ್ಸು ಹತ್ತಿ ಕುಳಿತುಕೊಂಡಳು.

ವಿನೋದ್ ಬಸ್ಸಿನ ಪಕ್ಕಕ್ಕೆ ಬಂದು ಸುಮಾರು ೩೦ ಅಡಿಗಳ ದೂರದಲ್ಲಿ ಯಾರಿಗೋ ಕಾಯುವಂತೆ ನಟಿಸುತ್ತಿದ್ದಾನೆ. ಬಸ್ಸೇರಿ ಕಿಟಕಿಯ ಕಡೆ ಕುಳಿತುಕೊಂಡ ಶಾಲಿನಿ ಕೈಚೀಲದಲ್ಲಿದ್ದ ಪುಸ್ತಕವನ್ನು ಕೈಗೆ ತೆಗೆದುಕೊಂಡು ಹೊರಗೊಂದು ಒಳಗೊಂದು ಕಣ್ಣಿಟ್ಟಿದ್ದಾಳೆ. ವಿನೋದ್ ಹೃದಯವನ್ನು ಕಣ್ಣುಗಳಿಗೆ ತಂದುಕೊಂಡು ಮೃದುವಾಗಿ ಕಂಪಿಸುತ್ತಿದ್ದಾನೆ. ಬಸ್ಸು ಪ್ರಯಾಣಿಕರನ್ನು ತುಂಬಿಕೊಳ್ಳುತ್ತಿದೆ. ಕಂಡಕ್ಟರ್ ಟಿಕೇಟ್‌ಗಳನ್ನು ಬಾಗಿಲಲ್ಲೇ ಹರಿದರಿದು ಕೊಡುತ್ತಿದ್ದಾನೆ. ಶಾಲಿನಿ ಈಗ ಪುಸ್ತಕ ಮಡಚಿಟ್ಟುಕೊಂಡು ಹೊರಗಡೆ ನೋಡುತ್ತಿದ್ದಾಳೆ. ಅದೂ ಕೂಡ ಹೆಚ್ಚು ಕಮ್ಮಿ ವಿನೋದ್ ಕಡೆಗೆ. ವಿನೋದ್ ಮತ್ತೊಮ್ಮೆ ತನ್ನ ಹೃದಯದ ಇರುವಿಕೆಯನ್ನು ಖಾತರಿ ಪಡಿಸಿಕೊಂಡು ಅವಳ ಕಡೆ ನೋಡಿ ನೋಡದಂತೆ ನಟಿಸುತ್ತಿದ್ದಾನೆ.

ಕೊನೆಗೂ ಒಮ್ಮೆ ಧೈರ್ಯಮಾಡಿ ಶಾಲಿನಿಯ ನೋಟವನ್ನು ಎದುರಿಸುವಂತೆ ಅವಳ ಮುಖ ನೋಡಿದ. ಶಾಲಿನಿ ಕಣ್ಣುಗಳನ್ನು ಆಳಮಾಡಿಕೊಂಡು ದಿಟ್ಟಿಸಿ ಮುಖವನ್ನು ತಿರಿವಿಸಿಕೊಂಡಳು. ದೇಹದಲ್ಲಿದ್ದ ನೀರೆಲ್ಲ ಹಿಮಿರಿ ಹೋದಂತೆ ಫೀಲ್ ಆದ ವಿನೋದ್ ಸುತ್ತಲು ನೋಡಿದ. ಅಷ್ಟರಲ್ಲಿ ಬಸ್ಸು ನಿಧಾನವಾಗಿ ಶಬ್ದಮಾಡುತ್ತಾ ಚಲಿಸತೊಡಗಿತು. ವಿನೋದ್ ಮತ್ತೊಮ್ಮೆ ಕಂಪನಗೊಂಡಿರುವ ಹೃದಯವನ್ನು ಗಟ್ಟಿಯಾಗಿ ಹಿಡಿದುಕೊಂಡು ಆ ಕಡೆ ನೋಡತೊಡಗಿದ.

ಶಾಲಿನಿ ಮತ್ತೊಮ್ಮೆ ವಿನೋದ್ ಕಡೆ ತಿರುಗಿ ನೋಡಿದಳು ಅರೆಕಣ್ಣುಗಳಲ್ಲಿ. ಇನ್ನೂ ಪ್ರಾಣಿ ಇದೆಯೋ ಇಲ್ಲವೋ ಎಂದು ಕಾತರಿ ಪಡಿಸಿಕೊಳ್ಳಲು. ವಿನೋದ್‌ನನ ದೇಹದಲ್ಲಿ ಈಗ ಸ್ವಲ್ಪ ನೀರಿನಾಂಶ ವೃದ್ಧಿಯಾದಂತಾಯಿತು. ಬಸ್ಸು ಅವನಿರುವ ಸ್ಥಳದಿಂದ ದೂರ ದೂರ ಚಲಿಸುತ್ತಾ ಹೋಯಿತು. ನಾಳೆ ಏನಾದರೂ ಆಗಲಿ ಹಿಂದೆಯೇ ಹೋಗಬೇಕು ವಿನೋದ್ ತನ್ನಲ್ಲೇ ಹೇಳಿಕೊಂಡು ತಾನು ಹೋಗಬೇಕಾಗಿರುವ ಬಸ್ಸಿಗೆ ಕಾಯತೊಡಗಿದ.

ಶಾಲಿನಿ ಪುಸ್ತಕವನ್ನು ಚೀಲದಲ್ಲಿ ಹಾಕಿಕೊಂಡು ಈ ದಿನ ಏನಾಯಿತೋ ಇವನಿಗೆ ನಾಳೆ ಬರಲಿ ಎಂದುಕೊಳ್ಳುತ್ತಾ ಮನಸ್ಸಿನಲ್ಲೆ ಒಂದು ಸರಿಯಾಗಿ ಗುಂಡಿ ತಯಾರು ಮಾಡಿಕೊಂಡಳು.



ಕಲ್ಕತ್ತಾ ವಿಮಾನ ನಿಲ್ದಾಣದಿಂದ ೧೮:೨೫ ಗಂಟೆಗೆ ಸರಿಯಾಗಿ ರೆಕ್ಕೆಬಿಚ್ಚಿ ಹಾರಿದ ೧ಸಿ.೨೭೧ ವಿಮಾನ ೨ ಗಂಟೆ ೧೦ ನಿಮಿಷ ಅನಾಯಾಸವಾಗಿ ಪ್ರಯಾಣಮಾಡಿ ೨೦:೪೫ಕ್ಕೆ ಅಂದರೆ ನಿಗದಿಪಡಿಸಿದ ಸಮಯಕ್ಕೆ ಸರಿಯಾಗಿ ಬೆಂಗಳೂರಿನ ವಿಮಾನ ನಿಲ್ದಾಣದಲ್ಲಿ ರೆಕ್ಕೆ ಬಿಚ್ಚಿ ನೆಲದ ಮೇಲೆ ನಿಧಾನವಾಗಿ

ಓಡುತ್ತಾ ನಿಂತುಕೊಂಡಿತು. ಸ್ಪೀಕರ್‌ಗಳಲ್ಲಿ ವಿಮಾನ ಇಳಿಯುವುದಕ್ಕೆ ಮುಂಚೆಯೇ ತಿಳಿಸಿದ್ದರಿಂದ ಪ್ರಾಚಿ ತನ್ನ ಕಾರನ್ನು ಹೊರಗಡೆ ನಿಲ್ಲಿಸಿ ಮೊದಲ ಮಹಡಿಯಲ್ಲೇ ವಿಮಾನದ ಕಡೆ ಉತ್ಸಾಹದಿಂದ ನೋಡುತ್ತಿದ್ದಾಳೆ. ವಿಮಾನದಿಂದ ಒಬ್ಬೊಬ್ಬರೇ ಇಳಿದು ಬರುತ್ತಿದ್ದಾರೆ. ಒಬ್ಬರು ಇಬ್ಬರು ಹೀಗೆ ಇಪ್ಪತ್ತು ಒಂದನೆಯವರಾಗಿ ಪ್ರಾಚಿಯ ಕಡೆ ನೋಡುತ್ತಿದ್ದಾರೆ. ಪ್ರಾಚಿ ಉತ್ಸಾಹದಿಂದ ಮಹಡಿ ಇಳಿದು ಬಾಗಿಲು ಕಡೆ ಓಡಿ ಹೋಗಿ ಕೈ ಬೀಸುತ್ತಿದ್ದಾಳೆ. ಪ್ರಾಚಿಯನ್ನು ನೋಡಿ ಸುಮಾರು ದಿನಗಳಾಗಿರುವ ತಂದೆ ಮುಂಬಯಿಗೆ ಹೋಗುವುದಕ್ಕೆ ಮುಂಚೆ ಬೆಂಗಳೂರಿನಲ್ಲಿ ಎರಡು ದಿನಾ ಇದ್ದು ಕ್ಷೇಮ ಸಮಾಚಾರಗಳನ್ನು ತಿಳಿದುಕೊಂಡು ಹೋಗುವ ಸಲುವಾಗಿ ಬೆಂಗಳೂರಿಗೆ ಬರುತ್ತಿದ್ದಾರೆ.

ಅಕ್ಕಪಕ್ಕದಲ್ಲಿರುವ ಜನ ಪ್ರಾಚಿಯ ಸೌಂದರ್ಯವನ್ನು ಕಂಡು ತುಸು ಬೆರಗಾಗಿ ನೋಡುತ್ತಿದ್ದಾರೆ. ಹಾಲಿವುಡ್ ಸಿನಿಮಾ ನಟಿಯರು ಧರಿಸುವಂತಹ ಕಪ್ಪು ಕನ್ನಡಕ ಧರಿಸಿರುವ ಪ್ರಾಚಿ 'ಮಡೋನಾ'ಳಂತೆ ಮುದ್ದಾಗಿ ಕಾಣಿಸುತ್ತಿದ್ದಾಳೆ.

ಬಿಗಿಯಾದ ಜೀನ್ಸ್ ಪ್ಯಾಂಟಿನ ಜೊತೆಗೆ ದೊಗಳೆ ಅಂಗಿಯಾಕಿಕೊಂಡು ಕೂದಲನ್ನು ಭುಜಗಳ ಮೇಲೆ ಹರಿವಿಕೊಂಡಿದ್ದಾಳೆ. ಎದೆಯ ಮೇಲೆ 'RED BUT DON'T STOP ME' ಎಂದು ವಾಕ್ಯವಿರುವ ಪದಗಳು ಉಯ್ಯಾಲೆಯಾಡುತ್ತಿವೆ.

ಇನ್ನೂ ಸ್ವಲ್ಪ ಹತ್ತಿರ ಹೋದ ಪ್ರಾಚಿ ತಂದೆಯನ್ನು "ಹಲೋ ಪಾಪಾ" ಎಂದು ಪ್ರೀತಿಪೂರ್ವಕವಾಗಿ ತಬ್ಬಿಕೊಳ್ಳುತ್ತಾಳೆ. ಅವಳ ಹಣೆಗೊಂದು ಮುತ್ತುಕೊಟ್ಟು, "ಹೇಗಿದ್ದೀಯಮ್ಮ" ಎನ್ನುತ್ತಾ ತಲೆ ಸವರುತ್ತಾ ಮಾತನಾಡಿಸುತ್ತಾರೆ.

ಈಗ ಲಗೇಜ್ ಹೊತ್ತ ಕೂಲಿಯನ್ನು ತಳ್ಳಿಕೊಂಡು ಹೊರಕ್ಕೆ ಬರುತ್ತಾರೆ. ಅದರ ಮೇಲೆ ಎರಡು ದೊಡ್ಡ ಸೂಟ್‌ಕೇಸ್‌ಗಳಿವೆ.

"ಪವನ್ ಹೇಗಿದ್ದಾನೆ?"

"ಅವರಿಗೇನು ಫಸ್ಟ್‌ಕ್ಲಾಸ್ ಆಗಿದ್ದಾರೆ ಇವತ್ತೇನೋ ಮುಖ್ಯವಾದ ಗೋಷ್ಠಿ ಇರುವುದರಿಂದ ಬರಲಾಗಲಿಲ್ಲ".

"ನೀನೇಳಿದ ಹಾಗೆ ಒಳ್ಳೆ ಲೇಟೆಸ್ಟ್ ಮೊಬೈಲ್ ತಂದಿದ್ದೇನೆ. ಅಷ್ಟೇ ಅಲ್ಲ, ಅದರಲ್ಲಿ ಬಹಳ ವಿಷಯಗಳಡಿಗಿವೆ ಕೂಡ. ಜೊತೆಗೆ ಜಿಪಿಎಸ್, ಇಂಟರ್‌ನೆಟ್ ಕೂಡ ಇದೆ".

"ಥ್ಯಾಂಕ್ಸ್ ಪಾಪಾ" ಎಂದಳು ಪ್ರಾಚಿ.

ಇಬ್ಬರ ಮಧ್ಯೆ ಕೆಲವು ಕ್ಷಣಗಳು ಮೌನವಾಗಿ ಕಳೆದವು. ಈಗ ಅವರ ಗಂಟಲಲ್ಲಿ ಸ್ವಲ್ಪ ಕೋಮಲತೆ ತುಂಬಿಕೊಂಡಿದ್ದು,

"ಪ್ರಾಚಿ, ನಾನು ನಿನ್ನ ಸಂತೋಷಕ್ಕೆ ಯಾವ ರೀತಿಯಲ್ಲೂ ಅಡ್ಡಿಯಾಗುವುದಕ್ಕೆ ಬಯಸುವುದಿಲ್ಲ. ಆದರೆ ತಂದೆಯಾಗಿದ್ದಕ್ಕಾಗಿ ಒಂದು ಮಾತು ಹೇಳುತ್ತೇನೆ. ನೀನು ತಪ್ಪು ತಿಳಿಯಲ್ಲ ತಾನೆ ?"

"ಓ... ಪಾಪಾ ನಿಮ್ಮ ಮಾತಿಗೆ ತಪ್ಪು ತಿಳಿಯುತ್ತೇನೆಯೇ" ಎಂದಳು ನಗುತ್ತಾ. ಅವಳ ಕೈಗಳು ಸ್ಟೀರಿಂಗ್ ಮೇಲಿದ್ದರೆ ಕಣ್ಣುಗಳು ರಸ್ತೆಯ ಮೇಲಿವೆ. ಆದರೆ ಮನಸ್ಸೇಕೋ ತುಸು ಕಂಪನಗೊಂಡಂತೆ ತಂದೆಯ ಬಾಯಿಂದ ಹೊರಗೆ ಬೀಳುವ ಮಾತುಗಳನ್ನು ಎದುರು ನೋಡುತ್ತಿದೆ.

"ನೋಡಮ್ಮಾ ನಿನಗೆ ದೇವರು ಎಲ್ಲಾ ಕೊಟ್ಟಿದ್ದಾನೆ, ಐಶ್ವರ್ಯ ಇದೆ, ಒಳ್ಳೆ ಗಂಡ ಸಿಕ್ಕಿದ್ದಾನೆ" ಆ ಮಾತೇಳಿ ಸ್ವಲ್ಪ ಹೊತ್ತು ಸುಮ್ಮನಿದ್ದು, ನಂತರ ಪವನ್ ಏನು ಹೇಳುತ್ತಾನೋ ಅದಕ್ಕೆ ಮೊದಲು ಆದ್ಯತೆ ನೀಡು. ಅಷ್ಟೇ ನಾನು ಹೇಳುವುದು.

"ಅಷ್ಟೇನಾ ಪಾಪಾ" ಎಂದು ತಂದೆಯ ಕಡೆ ನೋಡಿ ನಗುತ್ತಾಳೆ ಪ್ರಾಚಿ.

"ಹ್ಹ ಹ್ಹ... ಇನ್ನೊಂದು ಮುಖ್ಯವಾದದ್ದು ಮರೆತುಹೋಯಿತಲ್ಲಾ" ಎಂದು ದೀರ್ಘವಾಗಿ ಹೇಳಿದ ಮಾತಿಗೆ ಪ್ರಾಚಿ ತಂದೆಯ ಮುಖವನ್ನು ಮತ್ತೆ ಪ್ರಶ್ನಾರ್ಥಕವಾಗಿ ನೋಡುತ್ತಾಳೆ.

ಹೇಳಲೋ ಬೇಡವೋ ಎನ್ನುವಂತೆ ತಂದೆ ಒಳಗೊಳಗೆ ಅರೆಘಳಿಗೆ ಆಲೋಚಿಸುತ್ತಾ ಪ್ರಾಚಿಯ ಕಡೆ ನೋಡುತ್ತಾರೆ. ಪ್ರಾಚಿ ಇನ್ನಷ್ಟು ಗೊಂದಲಪಡುತ್ತಾ ತಂದೆಯ ಕಡೆ ನೋಡಿ "ಹೇಳಿ ಪಾಪಾ ಅದೇನೋ" ಎನ್ನುತ್ತಾಳೆ.

"ಒಂದು ಮಗು ಬೇಕು" ಎನ್ನುತ್ತಾನೆ ಜೋರಾಗಿ ನಗುತ್ತಾ. ಈಗ ಪ್ರಾಚಿ ಒಮ್ಮೆ ದೀರ್ಘ ಉಸಿರೆಳೆದುಕೊಂಡು ಗೊಳ್ಳನೆ ನಗುತ್ತಾಳೆ. ನಿಜವಾಗಿಯೂ ಅವಳ ಮುಖದ ಮೇಲೆ ಲಜ್ಜೆ ಮೂಡುತ್ತದೆ.

ಕಾರು ನಿಧಾನವಾಗಿ ಚಲಿಸುತ್ತಾ ಮನೆಯ ಮುಂದೆ ನಿಲ್ಲುತ್ತದೆ. ಓಡಿಬಂದ ಕೆಲಸಗಾರ ಸಾಮಾನುಗಳನ್ನು ಇಳಿಸಿಕೊಳ್ಳುತ್ತಾನೆ.

ಪ್ರಾಚಿಯ ತಂದೆ ನಿಧಾನವಾಗಿ ಸುತ್ತಲೂ ನೋಡುತ್ತಾ ಕಾರಿನಿಂದ ಇಳಿದು ಒಂದೆರಡು ಹೂ ಗಿಡಗಳನ್ನು ಪ್ರೀತಿಯಿಂದ ಸ್ಪರ್ಶಿಸಿ "ಚೆನ್ನಾಗಿದೆ ತೋಟ" ಎನ್ನುತ್ತಾ ಮನೆಯೊಳಕ್ಕೆ ಹೋಗುತ್ತಾರೆ. ಪ್ರಾಚಿ ಗೀಸರ್ ಆನ್ ಮಾಡಿ ತಂದೆಯ ಸ್ನಾನಕ್ಕೆ ಎಲ್ಲವನ್ನೂ ಏರ್ಪಡಿಸಿ ಬಟ್ಟೆ ಬದಲಿಸಿಕೊಂಡು ತಂದೆಗೆ ಫ್ರಿಜ್‌ನಿಂದ ಸಾಫ್ಟ್ ಡ್ರಿಂಕ್ಸ್ ತಂದು ಕೊಡುತ್ತಾಳೆ.

ಪ್ರಾಚಿಯ ತಂದೆ ಸಾಫ್ಟ್ ಡ್ರಿಂಕ್ಸ್ ಕುಡಿದು ಬಟ್ಟೆಗಳನ್ನು ಬದಲಿಸಿಕೊಂಡು

ಸ್ನಾನದ ಕೋಣೆ ಒಳಕ್ಕೆ ಹೋಗುತ್ತಾರೆ. ಸೇವಕನನ್ನು ಕರೆದ ಪ್ರಾಚಿ ಕೆಲವು ತಿನಿಸುಗಳ ಹೆಸರೇಳಿ ಚೆನ್ನಾಗಿ ಮಾಡುವಂತೆ ಆದೇಶ ನೀಡುವುದರ ಜೊತೆಗೆ ಅಲ್ಲಿ ಇಲ್ಲಿ ಹರಡಿರುವ ಕೆಲವು ಶೋ ಪೀಸುಗಳನ್ನು ಸ್ಥಳಾಂತರಿಸಿ ಇಡುತ್ತಾಳೆ.

ಸ್ನಾನ ಮಾಡಿಬಂದ ಪ್ರಾಚಿಯ ತಂದೆ ಸ್ವಲ್ಪ ವಿಶ್ರಾಮ ಪಡೆದು ತಾನು ತಂದಿರುವ ವಸ್ತುಗಳೆಲ್ಲವನ್ನೂ ಮಗಳಿಗೆ ಕೊಟ್ಟು, ಪವನ್‌ಗೆ ಒಂದು ಸೂಟ್ ಕೂಡ ತಂದಿದ್ದು, ಪ್ರಾಚಿ ಬಹಳ ಮೆಚ್ಚಿಕೊಂಡಳು.

"ಸಿಂಗಾಪೂರ್‌ನಲ್ಲಿ ನಾನೊಮ್ಮೆ ೫೦ ಡಾಲರ್ ದಂಡಕೊಟ್ಟೆ" ಎಂದು ನಕ್ಕರು ಪ್ರಾಚಿಯ ತಂದೆ.

"ಯಾಕೆ ಪಾಪಾ ? ಏನು ತಪ್ಪು ಮಾಡಿದಿರಿ ?"

"ಏನೂ ಇಲ್ಲಮ್ಮ ಕಾಗದವನ್ನು ಮಾಮೂಲಿಯಾಗಿ ಮರೆತು ಕೆಳಗೆ ಹಾಕಿಬಿಟ್ಟೆ ಅಷ್ಟೇ, ಪೊಲೀಸ್‌ನವರ ಹತ್ತಿರ ಬಂದು ೨೫೦ ಡಾಲರ್ ರಸೀದಿ ಕೊಟ್ಟುಬಿಟ್ಟ" ಎಂದು ಮತ್ತೆ ಸಾವಕಾಶವಾಗಿ ನಕ್ಕರು ಮೈಯನ್ನು ಕುಲುಕಿಸುತ್ತಾ.

ಮತ್ತೆ ನಿಧಾನವಾಗಿ ದೊಡ್ಡ ಸೂಟ್‌ಕೇಸಿನಿಂದ ಬಟ್ಟೆಗಳ ಕೆಳಗಿದ್ದ ಒಂದು ಬಾಕ್ಸ್‌ನ್ನು ಹೊರಗೆ ತೆಗೆಯುತ್ತಾ ಪ್ರಾಚಿಯ ಕಡೆ ನೋಡಿ ಕಣ್ಣರಳಿಸುತ್ತಾ "ಇದೋ ಪ್ರಾಚಿ ನಿನ್ನ ಲೇಟೆಸ್ಟ್ ಮೊಬೈಲ್" ಎಂದು ಬಾಕ್ಸ್‌ನ್ನು ಬಿಚ್ಚಿ ಅದರೊಳಗಿರುವ ಫೋನ್ ಮತ್ತು ಅದರ ಸಹಕಾರಿ ಸಲಕರಣೆಗಳನ್ನು ವಿವರಿಸತೊಡಗಿದರು.

ಇಡೀ ಕೈಮುಷ್ಟಿಯಲ್ಲಿ ಗ್ರಿಪ್ಪಾಗಿ ಕೂರುವ ಹಗುರವಾದ ಕಂದುಬಣ್ಣದ ಮೊಬೈಲ್ ಮಧ್ಯದಲ್ಲಿ ಸಣ್ಣದಾದ ೩x೪=೧೨ ಪುಶ್‌ಬಟನ್‌ಗಳು ರಿಸೀವರ್ ಚೌಕಾಕಾರವಾಗಿದ್ದರೆ, ಮೌತ್‌ಪೀಸ್ ಚೌಕಾಕಾರ ಮತ್ತು ಗೋಳಾಕಾರದ ಮಧ್ಯದ ಆಕಾರದಲ್ಲಿದೆ, ಅದರ ಹೊರವಿನ್ಯಾಸ ಇನ್ನಷ್ಟು ಸೊಗಸಾಗಿದೆ.

"ಇಷ್ಟೇ ಅಲ್ಲ ಪ್ರಾಚಿ ಇಗೋ ಇಲ್ಲಿ ನೋಡು ಇದು ಕಿಸೆ ಫೋನ್ ಇದರಿಂದ ನೀನು ಸಮಯಕ್ಕೆ ತಕ್ಕಂತೆ ವಿಷಯವನ್ನು ಫೀಡ್ ಮಾಡುತ್ತಾ ಕೆಲವು ಲಾಭಗಳನ್ನು ಪಡೆಯಬಹುದು. ಮನೆಯಿಂದ ಹೊರಗಡೆ ಹೋದರೆ ಬರುವವರಿಗೂ ನೀವು ತಿಳಿಸಿದ ಹಾಗೆ ಬರುವ ಫೋನ್‌ಗಳನ್ನು ಮುದ್ರಿಸಿಕೊಳ್ಳುವುದಲ್ಲದೆ ನೀವು ಹೋಗುವ ವಿಷಯವನ್ನು ಬರುವ ಸಮಯವನ್ನು ತಿಳಿಸುತ್ತದೆ. ಅಷ್ಟೇ ಅಲ್ಲ, ಕಳ್ಳರೋ ಇನ್ನಾರೋ ಮನೆಗೆ ನುಗ್ಗಿದರೆ ಪೋಲೀಸ್ ಠಾಣೆಗೆ ತಿಳಿಸಬಲ್ಲದು.

ಇನ್ನೂ ಅನೇಕ ಆಟೋಮ್ಯಾಟಿಕ್ ಸಂವಿಧಾನಗಳಿವೆ. ಫೋನ್ ಬಂದಾಗ ಮಾಮೂಲಿಯಾಗಿ ಟ್ರಿಣ್, ಟ್ರಿಣ್ ಎಂದು ಶಬ್ದ ಮಾಡುವುದಿಲ್ಲ. ಬಹಳ ಸೊಗಸಾದ

ತರಂಗಗಳೇಳುತ್ತವೆ. ನೀವು ಮಾತನಾಡುತ್ತಿರುವಾಗ ಬೇರೆ ಕಡೆಯಿಂದ ನಿಮ್ಮ ಫೋನಿಗೆ ಇನ್ನೊಬ್ಬರು ಫೋನು ಮಾಡುತ್ತಿರುವವರಿಗೆ 'ಕ್ಷಮಿಸಿ, ಬೇರೆಡೆ ಮಾತನಾಡುತ್ತಾ ಇದ್ದೇವೆ ಸ್ವಲ್ಪ ತಡೆಯಿರಿ' ಎನ್ನುತ್ತದೆ. ಜೋರಾದರೆ ಮಂಜುಳ ಸಂಗೀತ ಹೊಮ್ಮಿಸುತ್ತದೆ.

ನೀನು ಇದನ್ನು ಮನೆಯಲ್ಲಿ ಅಳವಡಿಸಿದ ಮೇಲೆ ಈ ಪುಸ್ತಕದಲ್ಲಿರುವ ವಿಷಯಗಳನ್ನೆಲ್ಲ ತಿಳಿದುಕೊಂಡು ಪ್ರಯೋಗಿಸಬಹುದು ಎನ್ನುತ್ತಾ ಪ್ರಾಚಿಯ ಕೈಗೆ ಕೊಟ್ಟು ಇನ್ನೇನಾದರೂ ಮಾತನಾಡಮ್ಮ ಎನ್ನುತ್ತಾ ಆರಾಮ ಕುರ್ಚಿಯಲ್ಲಿ ಕುಳಿತುಕೊಂಡರು.

"ಪಾಪಾ, ನಿಮ್ಮ ಟೂರ್ ಬಗ್ಗೆ, ವ್ಯಾಪಾರದ ಬಗ್ಗೆ ತಿಳಿಸಿ. ಮೊನ್ನೆ ಮುಂಬಯಿಗೆ ಫೋನ್ ಮಾಡಿ ಅಣ್ಣನ ಜೊತೆ, ಪಿಂಕು ಜೊತೆ ಮಾತನಾಡಿದೆ. ಪಿಂಕು ಮಾತುಗಳು ಎಷ್ಟು ಸ್ಪಷ್ಟವಾಗಿದೆ? ನನಗೆ ಆಶ್ಚರ್ಯವಾಯಿತು".

ಪ್ರಾಚಿ ಮಾತನಾಡುತ್ತಲೇ ಮೊಬೈಲನ್ನು ಶೋಬಾಕ್ಸಿನಲ್ಲಿಟ್ಟಳು. "ಈ ದಿನ ಪ್ರಪಂಚ ಜ್ಞಾನ ಸ್ಪರ್ಧೆಯಲ್ಲಿದೆಯಮ್ಮ, ಮಕ್ಕಳು ಅಷ್ಟೆ ಒಬ್ಬರಿಗಿಂತ ಒಬ್ಬರು ಜಾಣರು. ನಮ್ಮ ಪಿಂಕು ಕೂಡ ಅಷ್ಟೇ. ಬಹಳ ಬುದ್ಧಿವಂತನಾಗುತ್ತಾನೆ." ಎನ್ನುತ್ತಿದ್ದಂತೆ,

ಹೊರಗಿನಿಂದ ಕಾರಿನ ಹಾರನ್ ಶಬ್ದವಾಯಿತು. "ಪವನ್ ಬಂದರು ಅನ್ನಿಸುತ್ತೆ" ಎನ್ನುತ್ತಾ ಪ್ರಾಚಿ ಹೊರಗಡೆ ಬಂದಳು. ಪವನ್ ಕಾರಿಂದ ಇಳಿದು ಬ್ರೀಫ್‌ಕೇಸನ್ನು ಕೈಗೆ ತೆಗೆದುಕೊಂಡು ನಗುತ್ತಾ ಪ್ರಾಚಿಯ ಭುಜದ ಮೇಲೆ ಕೈಹಾಕಿಕೊಂಡು ಒಳಕ್ಕೆ ನಡೆದುಬಂದ.

"ಪವನ್ ನಮ್ಮ ತಂದೆ ಬಂದಿದ್ದಾರೆ"

"ಓಹೋ ಕ್ಷಮಿಸು ಪ್ರಾಚಿ ಇಲ್ಲಿಗೆ ಬರುವವರೆಗೂ ಅವರ ಜ್ಞಾಪಕವಿತ್ತು. ನಿನ್ನನ್ನು ನೋಡಿದ ಕ್ಷಣ ಮರೆತುಹೋದೆ" ಎಂದು ಸಣ್ಣದಾಗಿ ನಕ್ಕ.

"ನಿಮಗೆ ಯಾವಾಗಲೂ ಹಾಸ್ಯವೇ"

"ಕ್ಷಮಿಸು ಡಾರ್ಲಿಂಗ್" ಎನ್ನುತ್ತಾ ಒಳಗೋಗಿದ್ದ ಪವನ್ "ನಮಸ್ಕಾರ" ಎನ್ನುತ್ತಾ ಪ್ರಾಚಿಯ ತಂದೆಗೆ ಕೈಮುಗಿದ.

"ಬಾ ಪವನ್, ಹೇಗಿದ್ದೀಯಾ"

"ಚೆನ್ನಾಗಿದ್ದೇನೆ"

"ನಿಮ್ಮ ಟೂರೆಲ್ಲ ಹೇಗಿತ್ತು ?"

"ಮಾಮೂಲೆ"

"ನಾನು ವಿಮಾನ ನಿಲ್ದಾಣಕ್ಕೆ ಬರಲಾಗಲಿಲ್ಲ"

"ಪರವಾಗಿಲ್ಲ, ತೊಂದರೆ ಏನೂ ಆಗಲಿಲ್ಲ, ಪ್ರಾಚಿ ಬಂದಿದ್ದಳು. ವಿಮಾನ ಸರಿಯಾದ ಸಮಯಕ್ಕೆ ತಲುಪಿತು. ಕಲ್ಕತ್ತಾದಲ್ಲಿ ಮಾತ್ರ ನಾಲ್ಕು ಗಂಟೆಗಳು ಕಾಯಬೇಕಾಯಿತು" ಎಂದರು.

"ಬಟ್ಟೆ ಬದಲಿಸಿ ಬರುತ್ತೇನೆ" ಎನ್ನುತ್ತಾ ಪವನ್ ತನ್ನ ಬೆಡ್‌ರೂಂ ಕಡೆ ನಡೆಯತೊಡಗಿದ.

ಪ್ರಾಚಿ ಕೂಡ, "ಒಂದು ನಿಮಿಷ ಪಾಪಾ" ಎನ್ನುತ್ತಾ ಅವನ ಹಿಂದೆಯೇ ನಡೆದಳು. ಒಂದು ಪುಸ್ತಕ ತೆಗೆದುಕೊಂಡ ಪ್ರಾಚಿಯ ತಂದೆ ಪುಟಗಳನ್ನು ತಿರಿವಿ ಹಾಕತೊಡಗಿದರು.

"ಪಾಪಾ ಒಂದು ಒಳ್ಳೆ ಮೊಬೈಲ್ ಫೋನ್ ತಂದಿದ್ದಾರೆ. ಹಾಗೆ ನಿನಗೆ ಒಂದು ಒಳ್ಳೆ ಸೂಟ್‌ಪೀಸ್ ಕೂಡ ತಂದಿದ್ದಾರೆ. ನೋಡು ಎನ್ನುತ್ತಾ ತಂದು ತೋರಿಸಿದಳು. ಪವನ್ ಬಟ್ಟೆಗಳನ್ನು ಬದಲಿಸಿಕೊಳ್ಳುತ್ತಲೇ ನೋಡಿ ಬಹಳ ಚೆನ್ನಾಗಿದೆ ಎಂದು ಮೆಚ್ಚಿಗೆ ಸೂಚಿಸಿ ಪ್ರಾಚಿಯನ್ನು ತನ್ನ ಕಡೆಗೆ ಎಳೆದುಕೊಂಡ. ಪವನ್‌ನ ಬಾಯಿ ಮುಚ್ಚಿ "ಮೊದಲು ಸ್ನಾನದ ಕೋಣೆಗೆ ಹೋಗಿ ಬಾ" ಎಂದು ಅವನನ್ನು ಸ್ನಾನದ ಕೋಣೆಯವರೆಗೂ ತಳ್ಳಿಕೊಂಡೋಗಿ ಬಿಟ್ಟುಬಂದಳು.

ಪ್ರಾಚಿ ಮತ್ತೆ ತಂದೆಯಿದ್ದ ಕಡೆಗೆ ಬಂದು ಕುಳಿತುಕೊಂಡಳು. ಪವನ್ ಕೂಡ ಸ್ನಾನಮಾಡಿ ಬಟ್ಟೆ ಬದಲಾಯಿಸಿಕೊಂಡು ಅವರಿದ್ದಲ್ಲಿಗೆ ಬಂದು ಕುಳಿತುಕೊಂಡ. ಮಾತುಗಳು ಸುಮಾರು ಹೊತ್ತು ನಡೆದವು.



ರಾತ್ರಿಯ ಮೇಲೆ ಕುಳಿತು ಓಡಿಸಿದಷ್ಟು ಉದ್ದವಾಗುತ್ತಾ ಸಾಗಿದ್ದ ರಾತ್ರಿ ಕೊನೆಗೂ ವಿನೋದ್‌ನ ಆಸೆ ನೆರವೇರಿಸುವುದಕ್ಕಾಗಿಯೋ ಏನೋ ಕೊನೆಗೊಂಡು ಬೆಂಗಳೂರಿನ ಮೇಲೆ ಮತ್ತೊಂದು ದಿನ ಸೂರ್ಯೋದಯವಾಯಿತು.

ವಿನೋದ್, ಶಾಲಿನಿ ಕೆಲಸಕ್ಕೆ ಹೋಗುವುದಕ್ಕಿಂತ ಬಹಳ ಮುಂಚಿತವಾಗಿಯೇ ಎಲ್ಲಾ ಕೆಲಸಗಳನ್ನೂ ಮುಗಿಸಿ ಎಫ್‌ಎಂ ರೇಡಿಯೋದಲ್ಲಿ ಒಳ್ಳೆ ಪ್ರೇಮಗೀತೆಗಳನ್ನು ಕೇಳುತ್ತಾ ಬಟ್ಟೆಗಳನ್ನು ಒಂದಷ್ಟು ಗರಿಗರಿಯಾಗಿ ಪ್ರೆಸ್‌ಮಾಡಿಕೊಂಡು ಷರ್ಟನ್ನು

ಟಕ್‌ಮಾಡಿಕೊಂಡು ಬೂಟುಗಳಿಗೆ ತಾನೇ ಪಾಲೀಷ್ ಹಚ್ಚಿ, ಕನ್ನಡಿ ಮುಂದೆ ನಿಂತು ತಲೆಯನ್ನು ಚೆನ್ನಾಗಿ ತೀಡಿ ತೀಡಿ ಬಾಚಿ ಕೈಚೀಲದಲ್ಲಿ ಟಿಪಿನ್ ಕ್ಯಾರಿಯರ್ ತುಂಬಿಕೊಂಡು ಬಸ್ಸಿನ ಕಡೆ ನಡೆಯತೊಡಗಿದ. ಜೊತೆಗೆ ಸ್ವಲ್ಪ ಜಾಸ್ತಿ ಹಣವು ಜೇಬಿನಲ್ಲಿರಿಸಿಕೊಳ್ಳಲು ಮರೆಯಲಿಲ್ಲ.

ಈ ದಿನ ಒಂದು ಕೈ ನೋಡೇ ಬಿಡುವ ಎನ್ನುವ ಅವನ ಮನಸ್ಸು ನರ್ತನವಾಡುತ್ತಿದೆ. ಬಸ್ಸುಗಳು ಬರುತ್ತವೆ ಹೋಗುತ್ತವೆ. ಅವಳು ಬರಬೇಕಾಗಿರುವ ರಸ್ತೆಯ ಕಡೆಯಿಂದ ಹೆಣ್ಣುಗಳು ಬರುತ್ತಾರೆ, ಬಸ್ಸು ಹತ್ತಿ ಹೋಗುತ್ತಾರೆ. ಪ್ರತಿಯೊಂದು ಹೆಣ್ಣು ಕಾಣಿಸಿಕೊಂಡಾಗಲೆಲ್ಲ ಅವನ ಹೃದಯ ಕಂಪಿಸುತ್ತದೆ. ಮತ್ತೆ ಕಂಪನ ಶಮನಗೊಳ್ಳುತ್ತದೆ. ಶಾಲಿನಿ ಮಾತ್ರ ಕಾಣಿಸಲಿಲ್ಲ, ಸಮಯವ್ರೂ ಯಾರಿಗೂ ಮುಲಾಜು ತೋರಿಸದೆ ತನ್ನ ಪಾಡಿಗೆ ತಾನು ಉರುಳುತ್ತಿದೆ.

ಈಗಾಗಲೇ ಸುಮಾರು ಸಲ ಕೈಗಡಿಯಾರ ನೋಡಿಕೊಂಡಿರುವ ವಿನೋದ್ ಇನ್ನು ಈ ಮುಳ್ಳು ಇಲ್ಲಿಗೆ ಬರುವವರೆಗೂ ಗ್ರೇಸ್ ಕೊಟ್ಟು ತನ್ನ ವಿಧಿಯನ್ನು ಕಂಡುಕೊಳ್ಳುವಂತೆ ಎದುರು ನೋಡುತ್ತಾ ನಿಲ್ಲುತ್ತಾನೆ. ಆ ಕೈ ಗಡಿಯಾರದಲ್ಲಿರುವ ದೊಡ್ಡ ಮುಳ್ಳು ಲಾಲ್‌ಬಾಗಿನಲ್ಲಿರುವ ಗಡಿಯಾರದ ಮುಳ್ಳಿನಂತೆ ಕೊಕ್ಕರೆ ಕಾಲಿಡುತ್ತಾ ಪಟ್ ಪಟ್ ಎಂದು ನಡೆಯುತ್ತಿದೆ. ಕೊನೆಗೂ ಆ ಮುಳ್ಳು ಅವನಾಡಿದ್ದ ಬೇಲಿ ದಾಟಿ ನಡೆದೇಬಿಟ್ಟಿತ್ತು.

'ಥುತ್ತೇರಿಕೆ' ಎಂದುಕೊಳ್ಳುತ್ತಾ ತಾನು ಹೋಗಬೇಕಾಗಿರುವ ಬಸ್ಸನ್ನು ತಪ್ಪಿಸಿಕೊಂಡು ಇನ್ನೊಂದು ಬಸ್ಸತ್ತಿ, ಮತ್ತೊಂದು ನಿಲ್ದಾಣದಿಂದ ಇನ್ನೊಂದು ಬಸ್ಸೇರಿ ಹಾಗೂ ಹೀಗೂ ಸಮಯಕ್ಕೆ ಸರಿಯಾಗಿ ಕಚೇರಿ ತಲುಪಿದ.

ಎಲ್ಲರೂ ತಮ್ಮ ತಮ್ಮ ಕುರ್ಚಿಗಳಲ್ಲಿ ಕುಳಿತುಕೊಳ್ಳುತ್ತಿದ್ದಾರೆ. ವಿನೋದ್ ಕೈ ಚೀಲವನ್ನು ಡ್ರಾಯರ್‌ನಲ್ಲಿಟ್ಟು, ನೀರಿನಲ್ಲಿ ಮುಖ ತೊಳೆದುಕೊಂಡು ಕೈ ಚೌಕದಿಂದ ಮುಖ ಒರೆಸಿಕೊಳ್ಳುತ್ತಾ ಕನ್ನಡಿಯಲ್ಲಿ ನೋಡುತ್ತಾನೆ. ಅವನು ತಿಳಿದುಕೊಂಡಷ್ಟು ಸುಂದರವಾಗಿ ಕಾಣದ ಅವನ ಮುಖ ಕಪ್ಪಿಟ್ಟಂತೆ ಕಾಣುತ್ತಿದೆ. ಮತ್ತೊಮ್ಮೆ ತನ್ನ ಮುಖಕ್ಕೆ ಚೂರಿ ಹಾಕಿಕೊಳ್ಳುತ್ತಾ ಕೂದಲನ್ನು ಸರಿಪಡಿಸಿಕೊಂಡು, ಈ ದಿನ ಯಾರ ಮುಖ ನೋಡಿದೆ ಎಂದು ಅರೆಘಳಿಗೆ ಯೋಚಿಸಿ ಜ್ಞಾಪಕ ಬರದೆ ಕುರ್ಚಿಯ ಕಡೆ ನಡೆದು ಬರುತ್ತಾನೆ.

ಈ ಶಾಲಿನಿ ಯಾಕೆ ಬರಲಿಲ್ಲ? ನನ್ನ ಕಣ್ಣು ತಪ್ಪಿಸಿ ಬಸ್ಸತ್ತಿಬಿಟ್ಟಳೆ? ಅಥವಾ ಏನಾದರೂ ಹೆಚ್ಚುಕಮ್ಮಿಯಾಯಿತೇ? ಏನೇನೋ ಯೋಚನೆಗಳು ಅವನನು ಕಾಡುತ್ತಿವೆ. ಈಗ ಸೇವಕ ಬಂದು ಸಾರ್ ಸಾಹೇಬರು ಕರೆಯುತ್ತಿದ್ದಾರೆ ಎಂದು

ಹೇಳಿದ. ಡ್ರಾಯರನ್ನು ಮುಚ್ಚಿ ಮುಖವನ್ನು ಮತ್ತೊಮ್ಮೆ ಕೈಚೌಕದಿಂದ ಒರೆಸಿಕೊಂಡು "ಕ್ಷಮಿಸಿ" ಎನ್ನುತ್ತಾ ಬಾಗಿಲು ತಳ್ಳಿ ಒಳಕ್ಕೆ ಹೋಗಿ ಮತ್ತೆ ಅಲ್ಲಿಂದ ಹೊರಕ್ಕೆ ಬಂದು ತನ್ನ ಕುರ್ಚಿಯಲ್ಲಿ ಕುಳಿತ.

ಅದೇ ಕಟ್ಟಡದ ಕೆಳಗೆ ಒಂದು ಆಟೋ ಬಂದು ನಿಲ್ಲುತ್ತದೆ. ಕೆಳಗಿಳಿದ ಒಂದು ಹೆಣ್ಣು ಮೀಟರ್ ನೋಡಿ ಹಣ ಸಲ್ಲಿಸಿ ಲಿಫ್ಟ್ ಹತ್ತಿರಕ್ಕೆ ಬಂದು ನಿಲ್ಲುತ್ತಾಳೆ. ತನ್ನ ಕೈಯಲ್ಲಿರುವ ಆಟೋಮ್ಯಾಟಿಕ್ ಗಡಿಯಾರವನ್ನೊಮ್ಮೆ ನೋಡಿಕೊಳ್ಳುತ್ತಾಳೆ. ಸಮಯ ೧೦:೦೦ ಗಂಟೆ ಸೂಚಿಸುತ್ತಿದೆ.

ಕೆಳಕ್ಕೆ ಬಂದ ಲಿಫ್ಟ್ ಸ್ವಲ್ಪ ಶಬ್ದ ಮಾಡುತ್ತಾ ಬಾಗಿಲು ತೆರೆದುಕೊಳ್ಳುತ್ತದೆ. ಜನ ಒಬ್ಬೊಬ್ಬರಾಗಿ ಹೊರಗಡೆಗೆ ಬರುತ್ತಾರೆ. ಈಗ ಹೊರಗೆ ಕಾಯುತ್ತಿರುವವರು ಒಬ್ಬೊಬ್ಬರಾಗಿ ಒಳಕ್ಕೆ ಪ್ರವೇಶಿಸುತ್ತಾರೆ. ಆ ಹೆಣ್ಣು ಒಳಕ್ಕೆ ಹೋಗಿ ಮಹಡಿಯ ಸಂಖ್ಯೆ ಹೇಳಿ ನಿಂತುಕೊಳ್ಳುತ್ತಾಳೆ. ಆ ಲಿಫ್ಟ್‌ನಲ್ಲಿರುವ ಗಂಡಸರು ಏನೂ ಗೊತ್ತಿಲ್ಲದವರಂತೆ ಅವಳ ಸೌಂದರ್ಯವನ್ನು ನೋಡುತ್ತಾ ಒಳಗೊಳಗೆ ಹಲವು ರೀತಿಯಲ್ಲಿ ತಮ್ಮ ವಶವಾಗಿಸಿಕೊಳ್ಳುತ್ತಾರೆ.

ಲಿಫ್ಟ್ ಆದಷ್ಟು ಕಮ್ಮಿ ಶಬ್ದಮಾಡುತ್ತಾ ಕಟ್ಟಡವನ್ನು ಏರುತ್ತಿದೆ. ಜನಗಳು ತಮ್ಮ ತಮ್ಮ ಮಹಡಿಗಳಲ್ಲಿ ಇಳಿದು ಹೋಗುತ್ತಿದ್ದಾರೆ. ಲಿಫ್ಟ್‌ನ ಒಂದು ಮೂಲೆಯಲ್ಲಿದ್ದ ಹೆಣ್ಣು "ಕ್ಷಮಿಸಿ" ಎನ್ನುತ್ತಾ ಜಾಗಮಾಡಿಕೊಂಡು ತಾನು ತಲುಪಬೇಕಾಗಿರುವ ಮಹಡಿ ಬಂದು ಲಿಫ್ಟ್‌ನಿಂದ ಹೊರಕ್ಕೆ ಬರುತ್ತಾಳೆ. ಅಲ್ಲಿಂದ ಎಡಕ್ಕೆ ತಿರುಗಿಕೊಂಡು ಎದುರಿಗಿದ್ದ ಬಾಗಿಲಿನಲ್ಲಿ ಪ್ರವೇಶಿಸಿ ಮತ್ತೊಂದು ಕ್ಯಾಬಿನ್‌ಗೆ ಹೋಗಿ ನೇರವಾಗಿ ಪವನ್ ಕುಳಿತಿರುವ ಬಾಗಿಲನ್ನು ತಳ್ಳಿ "ಎಕ್ಸ್‌ಕ್ಯೂಸ್ಮಿ" ಎನ್ನುತ್ತಾಳೆ.

ಕಂಪ್ಯೂಟರ್‌ನಲ್ಲಿ ಟೈಪ್ ಮಾಡುತ್ತಿದ್ದ ಪವನ್ ಮಾಮೂಲಿಯಾಗಿಯೇ "ದಯವಿಟ್ಟು ಬನ್ನಿ" ಎನ್ನುತ್ತಾನೆ. ಹೆಣ್ಣು ನಿಧಾನವಾಗಿ ಹಂಸದಂತೆ ನಡೆಯುತ್ತಾ ಎದುರಿಗಿದ್ದ ಅತಿಥಿ ಕುರ್ಚಿಗಳಲ್ಲಿ ಕುಳಿತುಕೊಳ್ಳುತ್ತಾಳೆ.

ದಿಢೀರನೆ ಬುದ್ಧನಿಗೆ ಅರ್ಧ ರಾತ್ರಿಯಲ್ಲಿ ಜ್ಞಾನೋದಯವಾದಂತೆ ಪವನ್ ಏನೋ ಜ್ಞಾನೋದಯವಾಗಿ ಎದುರಿಗೆ ನೋಡುತ್ತಾನಷ್ಟೆ. ಅವನ ಪಂಚೇಂದ್ರಿಯಗಳ ಜೊತೆಗೆ ಅತೀಂದ್ರಿಯವು ಸೇರಿ ಒಮ್ಮೆ ಕಾರ್ಯ ಮಗ್ನವಾಗುತ್ತದೆ.

ಎಲ್ಲವನ್ನೂ ಒಂದು ಸಣ್ಣ ಪ್ರಶ್ನಾರ್ಥಕ ಚಿಹ್ನೆಯಂತಹ ಉದ್ಗಾರದಲ್ಲಿ ಹಿಡಿದಿರಿಸಿ "ಓ ಕೊನೆಗೂ ನೀವು ನಮ್ಮ ಕಚೇರಿಗೆ ಬಂದೇಬಿಟ್ಟಿರಿ ನಿಮಗೆ ಸ್ವಾಗತ" ಎನ್ನುತ್ತಾನೆ ಪವನ್ ಅತಿ ಸರಳವಾಗಿ.

ರುಚಿ ಅಷ್ಟೇ ಸರಳವಾಗಿ ವಂದನೆಗಳನ್ನು ಸಲ್ಲಿಸುತ್ತಾಳೆ. ಪವನ್ ನಗುತ್ತಾ

ತಾನು ಸಂದರ್ಶನದ ದಿನ ಕೇಳಿದ ಪ್ರಶ್ನೆಗಳನ್ನು ಜ್ಞಾಪಿಸಿಕೊಂಡು ತನ್ನ ಮುಖದ ಸ್ನಾಯುಗಳನ್ನು ಸಡಿಲಿಸಿಕೊಳ್ಳುತ್ತಾನೆ.

ಆದರೂ ಅವಳ ಪೂರ್ಣ ರೂಪವನ್ನು ನೋಡಿ ಮನಸ್ಸಿನಲ್ಲೇಳುವ ತರಂಗಗಳೊಂದಿಗೆ ಹೊರಗಡೆ ಬರಲಾರದೆ ಸಂದಿಗ್ಧತೆಯಲ್ಲಿ ಸಿಕ್ಕಿಕೊಂಡಿದ್ದಾನೆ. ತಾನು ಕುಳಿತಿರುವ ಕುರ್ಚಿ ಅದಕ್ಕೆ ಒಂದಷ್ಟು ಕಾರಣವಾಗಿದ್ದು, ಅವಳ ಜೊತೆಗೆ ಮಾತನಾಡುವುದಕ್ಕಾಗಿ ಪೂರ್ವ ಸಿದ್ಧತೆ ಮಾಡಿಕೊಳ್ಳುವವನಂತೆ ಏನೋ ಕಲ್ಪಿಸಿಕೊಂಡು ಅದನ್ನ ಹೊರಕ್ಕೆ ತೋರಿಸಬಾರದೆನ್ನುವ ಗತ್ತಿನಿಂದ ಇನ್ನೇನೋ ಒಂದು ಸಂದಿಗ್ಧತೆಯಲ್ಲಿ ಸಿಕ್ಕಿಕೊಳ್ಳುತ್ತಾನೆ.

ಅಷ್ಟರಲ್ಲಿ ಬೆಲ್ ಬಾರಿಸಿ ತನ್ನ ಗಲಿಬಿಲಿಯನ್ನು ಸ್ವಲ್ಪ ಹೊತ್ತು ತಾತ್ಕಾಲಿಕವಾಗಿ ಹತೋಟಿಯಲ್ಲಿಟ್ಟುಕೊಳ್ಳುತ್ತಾನೆ. ಬಾಗಿಲು ತಳ್ಳಿಕೊಂಡು ಸೇವಕ ಒಳಕ್ಕೆ ಪ್ರವೇಶಿಸುತ್ತಾನೆ. ಖಾಸಗಿ ವಿಭಾಗದ ಮುಖ್ಯಸ್ಥ ರವೀಂದ್ರನ್‌ನನ್ನು ಕರೆಯುವಂತೆ ಸೂಚಿಸುತ್ತಾನೆ. ಸೇವಕ ನಿಧಾನವಾಗಿ ಹೊರಕ್ಕೆ ಹೋಗುತ್ತಾನೆ. ಪವನ್ ರುಚಿಯ ಕಡೆ ನೋಡಿ, ಒಂದು ಸಣ್ಣ ನಗು ಬೀರಿ

"ಕೆಲಸಕ್ಕೆ ಈ ದಿನಾನೇ ಸೇರ್ತಿರಿ ತಾನೆ?"

"ಹೌದು" ತಲೆ ಅಲ್ಲಾಡಿಸುತ್ತಾಳೆ. ತೆಳುವಾಗಿ ತಿಳಿಗೆಂಪು ಲಿಪ್‌ಸ್ಟಿಕ್ ಹಚ್ಚಿಕೊಂಡಿರುವ ಅವಳ ತುಟಿಗಳು ಸಣ್ಣದಾದ ಬಾಯಿಗೆ ಸೊಗಸಾಗಿ ಕಾಣುತ್ತಿವೆ. ಸಣ್ಣದಾಗಿ ಬಾಬ್‌ಕಟ್ ಮಾಡಿಕೊಂಡಿರುವ ಕೂದಲು ಭುಜಗಳಿಗೆ ಸೋಕಿ ಸೋಕದಷ್ಟು ದೂರದಲ್ಲಿವೆ. ಕಿವಿಗಳಲ್ಲಿ ಸಣ್ಣದಾದ ಓಲೆಗಳಿವೆ. ತಿದ್ದಿದಂತ ಕಾಣಿಸುವ ಕಪ್ಪಾದ ಕಣ್ಣುಬ್ಬುಗಳು.

ಭುಜದಿಂದ ಸಣ್ಣದಾಗಿ ಹರಿದುಬಂದು 'ನಯಾಗಾರಾ' ಧುಮಿಕಿದಂತೆ ನಡುವನ್ನು ಸುತ್ತಿಕೊಂಡಿರುವ ಸೀರೆ, ಗುಲಾಬಿಯಂತಹ ಕಪೋಲಗಳು, ದೇಹಕ್ಕೆ ಒಪ್ಪುವಂತಹ ಎದೆಗಳು, ಒಂದು ಅಂದಾಜಿನ ಪ್ರಕಾರ ೩೨ ೩೬ ೩೨ ಅಂಕಿಗಳ ವೈಯ್ಯಾರಿ.

ಹೆಣ್ಣು ತನಗಾಗುವ ಸಣ್ಣ ಅಪಮಾನಗಳನ್ನೂ ಸಹ ಕ್ಷಮಿಸಲಾರಳು ಸಂದರ್ಶನದ ದಿನ ಪವನ್ ಕೇಳಿದ ಪ್ರಶ್ನೆಗಳೆಲ್ಲ ಅವಳ ಕಿವಿಯಲ್ಲಿ ಇನ್ನೂ ಗುಯ್‌ಗುಟ್ಟುತ್ತಿವೆ. ಏನೋ ಯೋಚಿಸಿಕೊಳ್ಳುತ್ತಾ ಪವನ್ ಮುಖವನ್ನು ಆಗಾಗ ನೋಡುತ್ತಿದ್ದಾಳೆ.

"ಈ ದಿನ ದಿನಾಂಕವೆಷ್ಟು ?" ಪವನ್ ಬಾಯಿಂದ ಅನಿರೀಕ್ಷಿತವಾಗಿ ಹೊರಬಿದ್ದ ಮಾತಿನ ಲಾಭ ಪಡೆದ ರುಚಿ '೧೩' ಎಂದಳು. "ನನಗೆ ತಾರೀಖು ಗೊತ್ತಿಲ್ಲದೆ

ಕೇಳಿದೆನೆ. ಒಬ್ಬ ಎಕ್ಸ್‌ಕ್ಯೂಟಿವ್ ಅಧಿಕಾರಿಗೆ ಅಷ್ಟು ಗೊತ್ತಾಗುವುದಿಲ್ಲವೆ ? ಆ ಹುಡುಗಿ ಮನಸ್ಸಿನಲ್ಲಿ ಏನಂದುಕೊಂಡಿರಬಹುದು ?

ದಿಢೀರನೆ ಈ ತಪ್ಪನ್ನು ಹೇಗಾದರೂ ನಿಭಾಯಿಸಿಕೊಳ್ಳಬೇಕೆಂದುಕೊಳ್ಳುತ್ತಾ "ಮಿಸ್ ರುಚಿ, ನಿಮಗೆ ಗೊತ್ತೆ, ಸಂಖ್ಯೆ ೧೩ ಬಹಳ ಶುಭ ಸಂಖ್ಯೆ ಜಪಾನ್, ಐರೋಪ್ಯ ದೇಶಗಳಲ್ಲೆಲ್ಲಾ ಸಂಖ್ಯೆ ೧೩ ರನ್ನು ಬಹಳ ಶುಭ ಸಂಖ್ಯೆ ಎಂದು ಭಾವಿಸುತ್ತಾರೆ. ಅಷ್ಟೇ ಅಲ್ಲ, ೧೩ ಸಂಖ್ಯೆಯ ಮಹಡಿಗಳು, ಬೀದಿಗಳು ಮನೆಗಳು ಕೂಡ." ರುಚಿ ಪವನ್‌ನ ಮುಖವನ್ನೆ ನೋಡುತ್ತಿದ್ದಾಳೆ.

ಅವಳ ಕಣ್ಣುಗಳಲ್ಲಿ "ಅಯ್ಯೋ ಗಂಡೆ ನಿನಗೆ ತಾರೀಖು ಗೊತ್ತಿದೆ ಎಂದು ಒಪ್ಪಿಕೋ" ಎನ್ನುವಂತೆ ಕಾಣಿಸುತ್ತಿದೆ ಪವನ್‌ಗೆ.

ಹೆಣ್ಣುಗಳನ್ನು ನೋಡುವಾಗ ಅವರ ಜೊತೆ ಮಾತನಾಡುವಾಗ ಬಹಳಷ್ಟು ಯುವಕರು ಒಂದು ರೀತಿಯಾಗಿ ಬಲಹೀನಗೊಳ್ಳುತ್ತಾರೆ. ಆದರೆ ಪವನ್ ಆ ವರ್ಗಕ್ಕೆ ಸೇರಿದವನಲ್ಲ. ಹೆಣ್ಣುಗಳನ್ನು ತನ್ನ ಮಾತುಗಳಿಂದ ಮರುಳುಗೊಳಿಸಬಲ್ಲ ಮತ್ತು ಅವರ ಹೃದಯಗಳನ್ನು ಚುಚ್ಚಬಲ್ಲ. ಆದರೆ ರುಚಿಯ ಮುಂದೆ ತಾನೇಕೋ ಒಂದು ರೀತಿಯಾಗಿ ಬಲಹೀನಗೊಳ್ಳುತ್ತಿರುವಂತೆ ಭಾವಿಸುತ್ತಾನೆ.

ರುಚಿ ಮಾತ್ರ ಇನ್ನೊಂದು ರೀತಿಯಾಗಿ ಯೋಚಿಸುತ್ತಿದ್ದಾಳೆ. ಒಂದು ಹೆಣ್ಣಿಗೆ ತನ್ನ ಪ್ರೀತಿ, ನಿಷ್ಟೆಯನ್ನು ಪೂರ್ಣವಾಗಿ ತೋರಿಸುವಂತಹ ಗಂಡು ಬಹಳ ಅಪರೂಪ. ೧೦೦ಕ್ಕೆ ೯೯ ಗಂಡಸರು ತಮ್ಮ ಪ್ರೇಮ ಮತ್ತು ನಿಷ್ಠೆಯನ್ನು ಹಲವು ಹೆಂಗಸರ ಮುಂದೆ ಹಲವು ರೂಪದಲ್ಲಿ ಪ್ರದರ್ಶಿಸಬಲ್ಲರು.

ಎದುರಿಗಿರುವ ಪವನ್ ೯೯ರ ಹೊರತಲ್ಲ. ಆದರೆ ಕೂಡ ಇವನಲ್ಲಿ ಒಂದು ರೀತಿಯಾದ ಪುರುಷರಿಗಿರಬೇಕಾದ ಆಕರ್ಷಣೆ ಇದೆ. ಮದುವೆ ಆಗಿದೆಯೋ ಇಲ್ಲವೋ ಎಂದುಕೊಳ್ಳುತ್ತಾಳೆ. ಅಷ್ಟರಲ್ಲಿ ಬಾಗಿಲನ್ನು ಮೃದುವಾಗಿ ತಳ್ಳುತ್ತಾ ಕ್ಷಮಾಪಣೆ ಕೇಳುತ್ತಾ ಕಣ್ಣುಗಳಲ್ಲೇ ಮೈಕ್ರೋಸ್ಕೋಪ್ ಅಳವಡಿಸಿಕೊಂಡಿರುವಂತೆ ತೋರುವ ಒಬ್ಬ ದಢೂತಿ ಮನುಷ್ಯ ಒಳ ಬರುತ್ತಾನೆ.

"ದಯವಿಟ್ಟು ಬನ್ನಿ ಮಿಸ್ಟರ್ ರವೀಂದ್ರನ್. ಇವರು ಮಿಸ್ ರುಚಿ ಅಂತ, ನಮ್ಮಲ್ಲಿ ಖಾಸಗಿ ಕಾರ್ಯದರ್ಶಿಯಾಗಿ ಕೆಲಸಕ್ಕೆ ಸೇರಲು ಬಂದಿದ್ದಾರೆ. ನೀವು ಅವರನ್ನು ಕರೆದುಕೊಂಡುಹೋಗಿ ಜಾಯ್ನಿಂಗ್ ರಿಪೋರ್ಟ್, ಪ್ರಾಪರ್ಟಿ ಡಿಕ್ಲೆರೇಷನ್, ಹೋಮ್‌ಟೌನ್ ಡಿಕ್ಲೆರೇಷನ್, ಮಿಕ್ಕ ನಿಯಮಗಳನ್ನು ತುಂಬಿಸಿಕೊಂಡು ಅವರಿಗೆ ಕೋಣೆಯನ್ನು ತೋರಿಸಿ, ಎಲ್ಲಾ ವ್ಯವಸ್ಥೆ ಮಾಡಿ. ಮಿಸ್ ರುಚಿ, ನೀವೀಗ ಹೋಗಬಹುದು ಮತ್ತೆ ಭೇಟಿಯಾಗೋಣ" ಎಂದನು ಪವನ್ ರುಚಿ ಪವನ್

ಆದೇಶಕ್ಕೆ ಒಮ್ಮೆ ಅವನ ಕಡೆ ನೋಡಿ ಮೃದುವಾಗಿ ಸ್ವಾಗತಿಸುವಂತೆ ವಂದನೆಗಳು ಸಾರ್ ಅನ್ನುತ್ತಾ ಸೀರೆಯ ಅಂಚನ್ನು ಹಿಂದಿನಿಂದ ಬಲಕೈಯಲ್ಲಿ ಸರಿಪಡಿಸಿಕೊಂಡು ದಢೂತಿ ಮನುಷ್ಯನ ಹಿಂದೆ ನಡೆಯತೊಡಗಿದಳು.

ಅವಳ ಹಿಂದಿನ ರೇಖಾಚಿತ್ರವನ್ನೇ ನೋಡುತ್ತಾ ಶ್ವಾಸವನ್ನು ನಿರಾಳವಾಗಿ ಬಿಟ್ಟು ಏನೋ ತನ್ನಲ್ಲೇ ಹೇಳಿಕೊಂಡ. ಮತ್ತೆ ಎಂದಿನಂತೆ ಕಚೇರಿಯ ಚಟುವಟಿಕೆಗಳು ನಡೆಯತೊಡಗಿದವು. ಸಮಯ ೧ ಗಂಟೆಯಾಗಿದ್ದು ಎಲ್ಲರು ಕ್ಯಾರಿಯರ್‌ಗಳನ್ನು ತೆಗೆದುಕೊಂಡು ನಡೆಯತೊಡಗಿದರು.

ಪವನ್‌ಗೆ ಏನಾದರೂ ಮಾತನಾಡಬೇಕೆನ್ನುವ ಹಂಬಲ ಬಹಳವಾಗಿದ್ದು ವಿನೋದ್‌ನನ್ನು ಕರೆಸಿಕೊಂಡ. ವಿನೋದ್ ಎಂದಿನಂತೆ ಅತಿಥಿಗಳು ಕೂರುವ ಕುರ್ಚಿಗಳಲ್ಲಿ ಪವನ್‌ಗೆ ಎದುರಾಗಿ ಕೂತಿದ್ದಾನೆ. ಪವನ್ ತಟ್ಟೆಯಲ್ಲಿ ಸ್ವಲ್ಪ ತಿಂಡಿಯನ್ನು ಇರಿಸಿಕೊಂಡು ಇನ್ನಷ್ಟು ತಿಂಡಿಯನ್ನು ವಿನೋದ್‌ಗೆ ತಟ್ಟೆಯಲ್ಲಿ ಹಾಕಿ ಕೊಟ್ಟಿದ್ದಾನೆ.

"ವಿನೋದ್... ನಿನ್ನ ಪ್ರೀತಿ ಎಷ್ಟರವರೆಗೂ ಬಂದಿದೆ ? ಯಾರಾದರೂ ಹುಡುಗಿಯನ್ನು ನೋಡಿದ್ದೀಯಾ ?" ಎಂದು ನೇರವಾಗಿ ವಿಷಯಕ್ಕೆ ಇಳಿದ. ವಿನೋದ್ ಸ್ವಲ್ಪ ಗಲಿಬಿಲಿಗೊಂಡರು. ಇಂತಹ ವಿಷಯಕ್ಕೆ ಎದುರು ನೋಡುತ್ತಿದ್ದು, ಸ್ವಲ್ಪ ನಾಚಿಕೊಂಡವನಂತೆ "ಸಾರ್... ನನಗೇಕೋ ಹೆಣ್ಣುಗಳ ಜೊತೆ ಮಾತನಾಡುವುದಿರಲಿ, ಹತ್ತಿರದಿಂದ ನೋಡುವುದಕ್ಕೂ ಆಗುವುದಿಲ್ಲ. ಒಂದು ತರಹ ಕಂಪನ ಪ್ರಾರಂಭವಾಗುತ್ತದೆ, ಈಗೀಗ ಸ್ವಲ್ಪ ಸುಧಾರಿಸಿಕೊಂಡಿದ್ದೇನೆ. ಅಕ್ಕಪಕ್ಕದ ಹೆಣ್ಣುಗಳು ಮತ್ತು ಹೆಂಗಸರ ಜೊತೆ ಮಾತನಾಡುತ್ತೇನೆ" ಎಂದ.

ಮುಖವನ್ನು ತುಸುವೆ ಅಲಂಕರಿಸಿಕೊಂಡಂತೆ ಒಳಗೊಳಗೆ ನಕ್ಕ ಪವನ್ "ಅದು ಸರಿ ಈಗ ಯಾರಾದರೂ ಹುಡುಗಿಯನ್ನು ನೋಡಿದ್ದೀಯೋ ಇಲ್ಲವೋ ?" ಎಂದ. ಮುಖದ ತುಂಬಾ ನಾಚಿಕೆಯನ್ನು ಹೊತ್ತಿಸಿಕೊಂಡ ವಿನೋದ್ "ನೋಡುತ್ತಿದ್ದೇನೆ ಸಾರ್. ಆದರೆ ಅವಳು ಪ್ರೀತಿಸುತ್ತಿದ್ದಾಳೋ ಇಲ್ಲವೋ ಗೊತ್ತಿಲ್ಲ".

"ಪ್ರೀತಿಸುತ್ತಿದ್ದಾಳೋ ಇಲ್ಲವೋ, ಪ್ರೀತಿಸಲೇ ಬೇಕು ಹಾಗೆ ಮಾಡು ಇಂಗ್ಲೆಂಡಿನಲ್ಲಿ ಒಬ್ಬ, ೨೬ ಹೆಣ್ಣುಗಳ ಬ್ಯಾಂಕ್ ಪಾಸ್ ಪುಸ್ತಕಗಳನ್ನೊಂದಿದ್ದ. ಅಂದರೆ ಅವನು ಪ್ರೀತಿಸಿದ ಹೆಣ್ಣುಗಳು, ಅವರ ಸರ್ವಸ್ವವನ್ನೆಲ್ಲಾ ಕೊಟ್ಟುಬಿಟ್ಟಿದ್ದರು, ಸಹಿ ಹಾಕಿದ ಚೆಕ್ ಪುಸ್ತಕಗಳ ಸಮೇತ.

ಕೊನೆಗೊಂದು ದಿನ ಪೊಲೀಸರ ಅತಿಥಿಯಾದ ಅವನನ್ನು ಇಷ್ಟೆಲ್ಲ ನೀನೇಗೆ

ಸಂಪಾದಿಸಿದೆ ಎಂದರೆ ಹೆಣ್ಣುಗಳನ್ನು ಹೊಗಳುತ್ತಾ ಇರಬೇಕು ನಿಮಗೆಲ್ಲಾ ಸಿಗುತ್ತದೆ ಎಂದು ಹೇಳಿದನಂತೆ ಭೂಪ.

ಹೆಣ್ಣುಗಳು ಮಾಡುವ ಪ್ರತಿಯೊಂದು ಕೆಲಸವನ್ನೂ ಮೆಚ್ಚಿಕೊಳ್ಳುತ್ತಾ ಇರು, ಒಂದು ಹೆಣ್ಣನ್ನ ನೋಡಿದ ತಕ್ಷಣ ಬಹಳ ವಿನಮ್ರವಾಗಿ ಮಾತನಾಡಿಸು, ಅತಿಯಾಗಿ ಮಾತನಾಡಿಸಬೇಡ, ಆದಷ್ಟು ಮಟ್ಟಿಗೆ ಅವರ ಎದುರಿಗೆ ಸಭ್ಯನಂತೆ ನಡೆದುಕೋ, ಹೆಣ್ಣುಗಳನ್ನು ನೋಡಿದ ತಕ್ಷಣ ಹಸಿದ ಹುಲಿಯಂತೆ ನೋಡಬಾರದು. ದಿನಗಳು ಉರುಳಿದಂತೆ ಇನ್ನಷ್ಟು ಕೋಮಲವಾಗಿ ಸೌಮ್ಯತೆಯಾಗಿ ನಡೆದುಕೊಂಡರೆ, ಕೊನೆಗೆ ಅವರೇ ನಿನ್ನನ್ನು ಮೆಚ್ಚಿಕೊಂಡು ಕೆಲವು ಸೂಚನೆಗಳನ್ನು ನೀಡುತ್ತಾರೆ.

ವಿನೋದ್ ಒಂದೊಂದು ಪದವನ್ನೂ ನೇರವಾಗಿ ಹೃದಯಕ್ಕೆ ಮುಟ್ಟಿಸಿಕೊಳ್ಳುತ್ತಿದ್ದಾನೆ. ಭಾರತದ ಹೆಣ್ಣುಗಳ ಕಣ್ಣುಗಳು ಬಹಳ ದೊಡ್ಡವು. ಪ್ರಪಂಚವನ್ನೆಲ್ಲ ತುಂಬಿಸಿಕೊಳ್ಳುವಷ್ಟು ಸ್ಥಳವಿದೆ. ಭಾಷೆ ಗೊತ್ತಿದ್ದರೆ ಬಹಳ ಮಾತನಾಡಬಹುದು.

ಈ ಮಾತುಗಳು ವಿನೋದ್‌ನ ಮಟ್ಟಕ್ಕಿಂತ ಸ್ವಲ್ಪ ಎತ್ತರವಾಯಿತೇನೋ ಎಂದುಕೊಂಡ ಪವನ್. "ಮಿ. ವಿನೋದ್, ನೀನು ವಾತ್ಸಾಯನನ ಕಾಮಸೂತ್ರಗಳ ಬಗ್ಗೆ ಕೇಳಿದ್ದೀಯ ತಾನೆ?"

"ಕೇಳಿದ್ದೇನೆ ಸಾರ್... ಆದರೆ ಅಷ್ಟೊಂದು ವಿವರವಾಗಿ ಗೊತ್ತಿಲ್ಲ."

"ಪ್ರಪಂಚದಲ್ಲಿ ಅತ್ಯಂತ ಅದ್ಭುತವಾದ ಮತ್ತು ಅತ್ಯಂತ ಪುರಾತನವಾದ ಹೆಣ್ಣು-ಗಂಡಿನ ಮಧ್ಯದ ಪ್ರೀತಿ ಪ್ರೇಮ ಕಾಮದ ಕಲೆಯನ್ನು ತುಂಬಿಕೊಂಡಿರುವ, ಎಂದೆಂದಿಗೂ ನವೀನವಾಗಿ ಉಳಿದುಹೋಗುವಂತಹ ನಮ್ಮ ಚರಿತ್ರೆಯ ಐಶ್ವರ್ಯವದು."

ಬರೀ ಪ್ರೀತಿ ಪ್ರೇಮ ಕಾಮವೆ ಮನುಷ್ಯನಿಗೆ ಮುಖ್ಯವಲ್ಲ, ಅದರಲ್ಲಿನ ವೈವಿಧ್ಯತೆಯ ಜೊತೆಗೆ ೬೪ ಇತರ ಕಲೆಗಳನ್ನೇ ಸೂಚಿಸಿದ್ದಾನೆ. ಇದೆಲ್ಲವನ್ನೂ ಒಬ್ಬ ಪ್ರತಿಭಾನ್ವಿತ ಗುರುವಿನ ಕೆಳಗೆ ಶಿಕ್ಷಣ ಪಡೆಯಬೇಕೆನ್ನುತ್ತಾನೆ ವಾತ್ಸ್ಯಾಯನನು.

"ಮಿ. ವಿನೋದ್ ನೀನೀಗ ಹೋಗಬಹುದು ಸಮಯವಾಗಿದೆ" ಎನ್ನುತ್ತಾನೆ ಪವನ್. ವಿನೋದ್‌ನ ತಲೆ ತುಸು ಭಾರವಾದಂತಾಗಿ ಪವನ್‌ಗೆ ನಮಸ್ಕಾರ ತಿಳಿಸಿ ಬಾಗಿಲನ್ನು ನಿಧಾನವಾಗಿ ತಳ್ಳಿಕೊಂಡು ಹೊರಕ್ಕೆ ಬರುತ್ತಾನೆ.

❖❖❖

ಮಧ್ಯಾಹ್ನ ೩ ಗಂಟೆಗೆ ಮತ್ತೊಮ್ಮೆ ಪವನ್‌ನ ಕೋಣೆಯೊಳಕ್ಕೆ ಬಂದ ರುಚಿ ಇನ್ನಷ್ಟು ಹತ್ತಿರದಿಂದ ಪವನ್‌ನನ್ನು ನೋಡುತ್ತಾಳೆ, ಮಾತನಾಡುತ್ತಾಳೆ, ಪವನ್ ಕೂಡ ತನ್ನ ಕಣ್ಣುಗಳ ಮುಂದಿದ್ದ ಪೊರೆಗಳನ್ನು ಕನ್ನಡಿಯ ಮೇಲಿರುವ ಮಂಜನ್ನು ಒರೆಸಿದಂತೆ ಒರಿಸಿ ಅವಳ ಮೈಕಾಂತಿಯನ್ನು, ಸರಳ ರೇಖೆಗಳನ್ನು ನೋಡಿ ವಿಸ್ಮಯ ಪಡುತ್ತಾನೆ. ರುಚಿಯ ಮುಖವನ್ನು, ಪ್ರಾಚಿಯ ಸೌಂದರ್ಯಕ್ಕೆ ಬೆಳಿಗ್ಗೆಯಿಂದಲೂ ಹೋಲಿಸಿಕೊಳ್ಳುತ್ತಲೇ ಇದ್ದಾನೆ.

ರುಚಿ ಪದಗಳನ್ನು ಉಚ್ಚರಿಸುವ ಸಮಯದಲ್ಲಿ ತುಟಿಗಳು ಎಷ್ಟೊಂದು ಸೊಗಸಾಗಿ ಲಯ ಬದ್ಧನೆಗೊಳ್ಳುತ್ತವೆ ಎಂದರೆ ಹೇಳಲಾಗದಷ್ಟು, ಬ್ರಹ್ಮಪುತ್ರಾ ದಡಗಳಲ್ಲಿರುವ ಅಸ್ಸಾಂ ಹೆಣ್ಣುಗಳು 'ಬಿಹು' ನೃತ್ಯವನ್ನು ಮಾಡುವಂತಿರುತ್ತದೆ. ಒಂದು ರೀತಿಯಲ್ಲಿ ಬೆಳಿಗ್ಗೆಯಿಂದ ಮಾನಸಿಕ ಉದ್ವೇಗ ಹೊಂದಿರುವ ಪವನ್ ತಳಮಳಗೊಂಡಿದ್ದಾನೆ.

ರುಚಿ ತನ್ನ ಕೋಣೆಯಲ್ಲಿ ಕುಳಿತುಕೊಂಡು ತನಗೆ ಸಿಕ್ಕ ವಸ್ತುಗಳನ್ನೆಲ್ಲ ಸೇವಕನ ಸಹಾಯದಿಂದ ತನಗೆ ಇಷ್ಟ ಬಂದ ರೀತಿಯಲ್ಲಿ ಜೋಡಿಸಿ ತನ್ನ ಕುರ್ಚಿಯಲ್ಲಿ ಕುಳಿತುಕೊಂಡಳು. ರುಚಿಯ ಜೀವನದಲ್ಲಿ ಆ ದಿನ ಎಷ್ಟೋ ಲವಲವಿಕೆಯಾಗಿ ಕಳೆಯಿತು.



ಅಪ್ಪಿಗೆ, ಮತ್ತು ಸರಸದ ಚದುರ
ಇದ ಪ್ರಣಪಗಡೆಗೆ, ಮನನೆ ಸಾಕ್ಷಿ
ಗೆಲ್ಲಲಿ, ಸೋಲಲಿ, ಭೋಗ ಅದೊಂದೆ
ಅದರ ಜಯದೊಳ್ ಮನ ಯುವಜನಕೆ

– ಅಮರಶತಕ

ಇಲ್ಲಿ ಯುವಜನಕೆ ಎನ್ನುವ ಸ್ಥಳದಲ್ಲಿ ಎಲ್ಲಾ ಜನಕು ಎಂದಿರಬೇಕಿತ್ತು. ಪ್ರೀತಿ ಪ್ರೇಮ ಸಲ್ಲಾಪ ಮನುಷ್ಯನ ದೇಹಕ್ಕೆ ಮನಸ್ವಾಸ್ಥ್ಯ ಮತ್ತು ಪ್ರಕೃತಿ ಸೌಖ್ಯ ತುಂಬುತ್ತದೆ. ಮನುಷ್ಯನ ಬಯಕೆಗಳು ಈಡೇರಬೇಕು. ಅದಕ್ಕೆ ಬದಲು ಇಂಗಿಹೋದರೆ ಮನುಷ್ಯನ ಮನಸ್ಸು ಭ್ರಮಣಗೊಳ್ಳುತ್ತದೆ.

ಪ್ರಾಚಿ ಅರಾವಳಿಯ ಬೆಟ್ಟಗಳಲ್ಲಿ ಮಯೂರ ನಾಚುವಂತೆ ಪವನ್ ಕೈಗಳಲ್ಲಿ ನಾಚುತ್ತಿದ್ದಾಳೆ. ಆವಳ ಎದೆಗಳು ಪ್ರಪಂಚದ ಛಾವಣಿ ಟಿಬೇಟ್ನಂತೆ ಪವನ್‌ನ ಕಣ್ಣುಗಳ ಮುಂದಿವೆ.

ಭೂಮಿ ಸೂರ್ಯನ ಆಕರ್ಷಣೆಗೆ ಸಮ್ಮೋಹನಗೊಂಡಂತೆ ಒಂದೇ ಸಮನೆ ತಿರುಗುತ್ತಿದೆ. ಸೂರ್ಯನ ಚೇತೋಹಾರಿ ಜೀವಕಿರಣಗಳ ಚುಂಬನದಿಂದ ಪುಳಕಿತಗೊಂಡ ಭೂಮಿ ಮೈತುಂಬಾ ಕಾಮನಬಿಲ್ಲುಗಳನ್ನು ತುಂಬಿಕೊಂಡು ಪ್ರಜ್ವಲಿಸುತ್ತಿದ್ದಾಳೆ.

ಹಾಗೆ ಪವನ್‌ನ ಚುಂಬನದಿಂದ ಪ್ರಾಚಿಯ ಯೌವ್ವನ, ಸೌಂದರ್ಯ ಹೊತ್ತಿಕೊಂಡು ಪ್ರಜ್ವಲಿಸುತ್ತಿದೆ. ಈಗ ಮೇಜಿನ ಮೇಲಿದ್ದ ಮೊಬೈಲ್ ಎಲ್ಲಿಂದಲೋ ಹವೆಯನ್ನು ಗಾಳಿ ಗೋಪುರಗಳಾಗಿಸಿಕೊಂಡು ಏನೋ ಹೇಳಲು ತವಕಿಸುತ್ತಿದೆ.

ನಿಧಾನವಾಗಿ ಮೊಬೈಲ್ ತೆಗೆದುಕೊಂಡ ಪವನ್, "ಹಲೋ ಪವನ್ ಮಾತನಾಡುವುದು" ಎನ್ನುತ್ತಿರುವಾಗಲೇ ಆ ಕಡೆಯ ಕೊಂಡಿ ಕಳೆದುಕೊಂಡಿತು. ಪವನ್ ಬೆಂಗಳೂರಿನ ಯಾವುದೋ ಮಿಸ್ ಕಾಲೆಂದು ಮತ್ತೊಮ್ಮೆ ಹಾಸಿಗೆಯ ಮೇಲೆ ಉರುಳಿಕೊಂಡ.

ದಿನದಿನಕ್ಕೂ ಪ್ರಾಚಿಯ ಸೌಂದರ್ಯ ಇನ್ನಷ್ಟು ಮತ್ತಷ್ಟು ಅದ್ಭುತವಾಗುತ್ತದೆಯೇನೋ ಎನಿಸುವಂತಿದೆ ಪವನ್ಗೆ. ಆವಳ ಕಣ್ಣುಗಳು, ಆವುಗಳ ಮೇಲಿನ ಹುಬ್ಬುಗಳು, ಕೋಲು ಮುಖ, ಆಬ್ಬಬ್ಬ.

ಪ್ರಾಚಿಯ ಕೆನೆಹಾಲು ಮೈಕಾಂತಿಯ ಮೇಲೆ ವಿದ್ಯುತ್ ಕಿರಣಗಳು ಕಂಗೊಳಿಸುತ್ತಿವೆ. ಪವನ್‌ನ ಕಣ್ಣುಗಳು ಪ್ರಾಚಿಯ ಸೌಂದರ್ಯವನ್ನು ತೋರಿಸಿ ನವಿರಾಗಿ ಹುಡುಕಾಡುತ್ತಿದ್ದಾಳೆ ಪ್ರೀತಿಯಲ್ಲಿನ ಆನಂದವನ್ನು. ಅಲ್ಲಿಗೆ ಒಂದು ಅಲೆ ದಡ ಸೇರಿದಂತಾಯಿತು.

ಈಗ ತಲೆದಿಂಬಿನ ಮಾತುಗಳು ಮೌನವನ್ನು ಭೇದಿಸಿ ಭೇದಿಸಲಾರದಂತೆ ಕತ್ತಲಲ್ಲಿ ಹೊಡೆದುಕೊಳ್ಳುತ್ತಿವೆ.

"ಸೆಕ್ಸ್ ಅಪೀಲ್' ಅನ್ನುವ ಪದದ ಬಗ್ಗೆ ನಿನಗೇನನಿಸುತ್ತದೆ?" ಪ್ರಾಚಿ ಕೇಳಿದಳು.

"ಸೆಕ್ಸ್ ಅಪೀಲ್ ಎಂದರೆ ಒಂದು ಗಂಡಿಗೆ ಒಂದೆಣ್ಣು, ಒಂದು ಹೆಣ್ಣಿಗೆ ಗಂಡು, ಒಂದೇ ಒಬ್ಬೊಬ್ಬ ಹೆಣ್ಣಿಗೂ ಒಂದೊಂದು ರೀತಿಯಲ್ಲಿ ಕಾಣಿಸುವುದು."

ಅದಕ್ಕೆ ಏನೋ ಬಹಳ ಕುರೂಪಿಯಾಗಿರುವ ಹೆಣ್ಣುಗಳ ಹಿಂದೆಯು ಸುಂದರವಾದ ಗಂಡಸರು ಬಿದ್ದರುತ್ತಾರೆ. ಕುರೂಪಿ, ಸೌಂದರ್ಯ ನೋಡುವ ಕಣ್ಣುಗಳಲ್ಲಿ ಇರುತ್ತದೆ.

"ಪ್ರಾಚಿ ನಿನಗೊಂದು ವಿಷಯ ಗೊತ್ತೆ?" ಕತ್ತಲಲ್ಲಿ ಕಣ್ಣುಗಳನ್ನರಳಿಸಿಕೊಂಡು

ಪ್ರಾಚಿ "ಹೇಳಿ" ಎಂದಳು. "ಹಾಲಿವುಡ್ನ ಮಹಾ ಸುಂದರಿ, ಹೆಸರು ಮರೆತು ಹೋಗಿದೆ, ಏನು ಮಾಡಿದಳು ಗೊತ್ತೆ? ಕಪ್ಪು ಮತ್ತು ಕುರೂಪಿಯಾದ ರಮ್ಯ ಕವಿ ಬರ್ನಾಡ್ ಷಾ ಗೊಂದು ಪತ್ರ ಬರೆದಳು. ನಾನು ಹೆಣ್ಣಿನ ಸೌಂದರ್ಯಕ್ಕೊಂದು ಸಂಕೇತ, ನೀನೊಬ್ಬ ಮಹಾ ಬುದ್ಧಿಜೀವಿ ಇಬ್ಬರೂ ಮದುವೆಯಾದರೆ ನಮಗೆ ಹುಟ್ಟುವ ಮಗು ಬುದ್ಧಿಯಲ್ಲಿ ನಿನ್ನನ್ನ ಮೀರಿ, ಸೌಂದರ್ಯದಲ್ಲಿ ನನ್ನನ್ನ ಮೀರಿದರೆ ಹೇಗಿರುತ್ತದೆ? ನೀನು ಇಷ್ಟಪಟ್ಟರೆ ಮದುವೆಯಾಗೋಣವೆಂದು ಪತ್ರ ಬರೆದಳು. ಬರ್ನಾಡ್ ಷಾ ಏನು ಬರೆದ ಗೊತ್ತೆ ?" "ಏನು ಬರೆದಾ".

"ನೀನು ಹೇಳಿದ ಹಾಗೆ ನಡೆದರೆ ಒಂದು ಆಶ್ಚರ್ಯವೇ ಸರಿ. ಆದರೆ ನಿನ್ನ ಬುದ್ಧಿ ಮತ್ತು ನನ್ನ ಕುರೂಪನ್ನು ಹಂಚಿಕೊಂಡು ಮಗುವಾದರೆ ಏನು ಮಾಡುವುದು ? ಅಂತಹ ಮಗು ನಾಳೆ ನಮ್ಮನ್ನ ಪ್ರಶ್ನಿಸಬಹುದಲ್ಲವೆ ? ಆದುದರಿಂದ ನನ್ನನ್ನು ಕ್ಷಮಿಸುವುದು ಎಂದು ಪತ್ರ ಬರೆದು ಉತ್ತರ ಕೊಟ್ಟ" ಪವನ್ ಹೇಳಿದ.

"ಪಾಪ" ಎಂದು ಪ್ರಾಚಿ ಜೋರಾಗಿ ನಕ್ಕಳು. ನೀರವ ಸಮುದ್ರದ ಮಧ್ಯದೊಳಗಿನ ಬುಳು ಬುಳು ನೀರ್ಗುಳ್ಳೆಗಳು ಎದ್ದಂತೆ ಕತ್ತಲು ಭಯಪಟ್ಟು ಮೂಲೆ ಸೇರಿತ್ತು.

ಪ್ರಾಚಿ ಮತ್ತೊಮ್ಮೆ ಕ್ಲಿಷ್ಟ ಪ್ರಶ್ನೆ ಹಾಕಿದಳು.

"ಪವನ್ ನಾನಿಂದು ನಿನ್ನ ರ್‍ಯಾಕ್‌ನಲ್ಲಿದ್ದ ಒಂದು ಪುಸ್ತಕ ಓದಿದೆ".

"ಯಾವುದು ?" ಹೆಸರೇಳಿದಳು ಪ್ರಾಚಿ. ಓ... ಎಂದು ಸಣ್ಣದಾಗಿ ದೀರ್ಘ ತೆಗೆದ ಪವನ್. ಮತ್ತೆ ಪ್ರಾಚಿ ಕೇಳಿದಳು. "ಆತ್ಮ ಇದೆಯೆ ? ಆತ್ಮ ಎಂದರೆ ಏನು ?"

ಪವನ್‌ಗೆ ಪ್ರಾಚಿ ಈ ರೀತಿಯ ಪ್ರಶ್ನೆ ಯಾವಾಗಲೂ ಕೇಳಿದವಳಲ್ಲ. "ಆ ಪುಸ್ತಕ ನಿನಗೆ ಹೇಗೆ ಇಷ್ಟವಾಯಿತು?" "ಇಷ್ಟದ ಪ್ರಶ್ನೆಯಲ್ಲ, ವಿಷಯಗಳನ್ನು ತಿಳಿದುಕೊಂಡರೆ ಒಳ್ಳೆಯದಲ್ಲವೆ" ಎಂದಳು. "ವೆರಿಗುಡ್".

"ನೋಡು ಪ್ರಾಚಿ ತಿಳಿದುಕೊಳ್ಳುವ ವಿಷಯಗಳು ಬಹಳ ಇವೆ. ಮುಖ್ಯವಾಗಿ ಎರಡು ವಿಧಧ ವಿಷಯಗಳಿರುತ್ತವೆ. ಒಂದು ತಿಳಿದುಕೊಳ್ಳುವ ವಿಷಯಗಳಿಗೆ ಉತ್ತರಗಳಿರುತ್ತವೆ. ಇನ್ನೊಂದು ಎಷ್ಟೇ ಹುಡುಕಿದರೂ ನಿಗೂಢವಾಗಿಯೆ, ವಿಸ್ಮಯವಾಗಿಯೇ ಉಳಿದು ಬಿಡುವ ವಿಷಯಗಳು.

ಆತ್ಮ ಎರಡನೆಯಕ್ಕೆ ಸೇರಿದ್ದು. ಆದರೂ ಹೇಳುತ್ತೇನೆ ಕೇಳು. ಇದು ನಾನು ತಿಳಿದುಕೊಂಡಂತೆ. ಕಾಸ್‌ಮಿಕ್ ಪ್ರಪಂಚ ಒಂದು ಸಮುದ್ರ, ಭೂಮಿ ಇದರ ಒಂದು ತೊಟ್ಟು ನೀರು ಈ ಭೂಮಿಯಲ್ಲಿರುವ ಮೂಲವಸ್ತುಗಳು ನೂರಾರು

ಎಂದುಕೊಳ್ಳೋಣ. ಈ ನೂರಾರು, ಒಂದರಲ್ಲಿ ಇನ್ನೊಂದು ಮತ್ತೊಂದು ಬೆರೆತುಕೊಂಡಾಗ ಅವುಗಳ ಹಾಜರಿ ಮತ್ತು ಪ್ರಮಾಣದಿಂದ ಸಾವಿರಾರು ವಸ್ತುಗಳು ಉತ್ಪತ್ತಿಯಾಗುತ್ತವೆ. ಈ ವಸ್ತುಗಳು ಭೂಮಿಯ ಮೇಲಿರುವ ಸಾವಿರಾರು ಪಕ್ಷಿ ಪ್ರಾಣಿಗಳು, ಗಿಡಮರಗಳು, ದವಸಧಾನ್ಯಗಳು, ವಜ್ರ ವೈಡೂರ್ಯಗಳು ಮೊತ್ತವಾಗಿ ಪಂಚಭೂತಗಳು. ಇವು ಪೃಥ್ವಿಯ ಮೇಲೆ ಒಂದಲ್ಲ ಒಂದು ರೂಪದಲ್ಲಿ ಹುಟ್ಟುತ್ತವೆ ಮತ್ತೆ ನೆಲ ಸೇರುತ್ತವೆ. ಗಿಡಮರ, ಪಕ್ಷಿಪ್ರಾಣಿಗಳು ತಾತ್ಕಾಲಿಕವಾಗಿ ಸಾಯುತ್ತವೆ. ಚಲನ ಕಳೆದುಕೊಳ್ಳುತ್ತವೆ ಅಥವಾ ರೂಪ ಕಳೆದುಕೊಳ್ಳುತ್ತವೆ.

ನಮ್ಮ ಕಣ್ಣುಗಳ ಮುಂದೆ ಚಲನ ಕಳೆದುಕೊಳ್ಳುವ ವಸ್ತುಗಳು ಮತ್ತೆ ಮತ್ತೊಂದು ರೂಪದಲ್ಲಿ ಬೀಜ ಹೊಡೆದುಕೊಂಡು ಚಲಿಸುತ್ತಾ ಬೆಳೆಯುತ್ತಾ ಸಾಗುತ್ತವೆ. ಅಂದರೆ ಬೀಜ ಹೊಡೆದುಕೊಂಡು ಚಲಿಸುತ್ತಾ ಬೆಳೆಯುತ್ತಾ ಸಾಗುತ್ತದೆ. ಅಂದರೆ ಭೂಮಿಯ ಮೇಲಿರುವ ಯಾವ ಮೂಲವಸ್ತುವಿಗೂ ಸಾವಿಲ್ಲ. ಕಾಸ್‌ಮಾಸ್ ಪ್ರಪಂಚವು ಅಷ್ಟೇ. ಇದನ್ನೇ ನಮ್ಮ ಪೂರ್ವಿಕರು ಆತ್ಮ ಎಂದಿರಬಹುದು.

ಒಂದು ಮರದಲ್ಲಿ, ಗಿಡದಲ್ಲಿ, ಒಂದು ಪ್ರಾಣಿಯಲ್ಲಿ, ಮನುಷ್ಯನಲ್ಲಿ ಏಳು ಸಮುದ್ರಗಳ ನೀರು, ಗಾಳಿ, ಬೆಳಕು ಆಕಾಶವಿರುತ್ತದೆ. ಅದಕ್ಕೆಯೇ ಆತ್ಮಕ್ಕೆ ಸಾವಿಲ್ಲ ಅದೊಂದು ಉಜ್ವಲ ಬೆಂಕಿಯ ಪುಂಜವೆನ್ನುವುದು.

ಪ್ರಾಚಿ ತುಸು ದೂರದವರಿಗೂ ಪವನ್‌ನ ಪದಗಳ ಹಿಂದೆಯೇ ಜಾರುತ್ತಾ ಹೋಗಿ ಎಲ್ಲಿಯೋ ಕೊಂಡು ಕಳೆದುಕೊಂಡಿದ್ದರಿಂದ ನಿದ್ದೆಮಾಡಿಬಿಟ್ಟಿದ್ದಳು. ಪವನ್ ಪ್ರಾಚಿ ನಿದ್ದೆಯಲ್ಲಿರುವುದನ್ನು ದೃಢಪಡಿಸಿಕೊಂಡು ಎದ್ದು ಒಂದು ಪುಸ್ತಕವನ್ನು ತೆಗೆದುಕೊಂಡು ಓದತೊಡಗಿದ.



ಮತ್ತೊಂದು ಬೆಳಗಾಗಿ ಬೆಂಗಳೂರಿನ ಬೀದಿಗಳು ಸಡಗರದಿಂದ ಕಂಗೊಳಿಸುತ್ತಿವೆ, ಹೆಣ್ಣುಗಳಂತೆ. ಪವನ್ ತನ್ನ ಆಫೀಸಿನ ಕೋಣೆಯಲ್ಲಿ ಒಂದು ಫೈಲ್ ನೋಡುತ್ತಾ ಕುಳಿತಿದ್ದಾನೆ. ಆಗ ಮೊಬೈಲ್ ರಿಂಗಾಯಿತು. ಸಾವಧಾನವಾಗಿ ಎಡಕೈಯಲ್ಲಿ ಮೊಬೈಲ್ ತೆಗೆದುಕೊಂಡ ಪವನ್ ಕಿವಿಯ ಹತ್ತಿರ ಹಿಡಿದು "ಹಲೋ ಪವನ್ ಹಿಯರ್" ಎಂದ.

"ಹಲೋ ಮಿ. ಪವನ್" ಎಂದ ಹೆಣ್ಣು ಧ್ವನಿ ಕೆಲವು ಕ್ಷಣಗಳು ನಿಶ್ಶಬ್ದವಾಗಿ, ಮತ್ತೆ ನಾನೊಂದು ಹೆಣ್ಣು ಎನ್ನುವುದು ಮಾತ್ರ ನಿಮಗಾಗಲೇ ಅರ್ಥವಾಗಿದೆ. ಆದರೆ ಯಾರು? ಏತಕ್ಕೆ? ಎನ್ನುವ ಪ್ರಶ್ನೆಗಳು ಏಳಬೇಕಲ್ಲವೆ?"

"ನೀನ್ಯಾರು?" ಪವನ್ ಕೇಳಿದ.

"ಪವನ್, ನೀನ್ಯಾರೋ ಎಂದು ಕೇಳುತ್ತೀಯ ಎಂದುಕೊಂಡಿದ್ದೆ".

"ಕ್ಷಮಿಸು. ಸದ್ಯ ಕ್ಷಮಿಸಿ ಎಂದು ದೂರವಿಡಲಿಲ್ಲ, ಸಂತೋಷ".

"ಕ್ಷಮಿಸು, ಕ್ಷಮಿಸಿ, ಏನು ವ್ಯತ್ಯಾಸ ಎಂದು ಮನದಲ್ಲಿದ್ದ ಪ್ರಶ್ನೆಯನ್ನು ಮೊಬೈಲ್ ಈ ಕಡೆಯಿಂದ ಆ ಕಡೆಗೆ ತಲುಪಿಸಿಬಿಟ್ಟಿತ್ತು.

"ಕ್ಷಮಿಸು ಎಂದರೆ ಪ್ರೀತಿಯಾಗಿ ಹತ್ತಿರದವರನ್ನು ಸಂಭೋದಿಸುವುದು. ಕ್ಷಮಿಸಿ ಎಂದರೆ ಸ್ವಲ್ಪ ದೂರ ನಿಂತು ಹೇಳುವ ಮಾತು."

ಸಂಬೋಧಿಸುವುದು ಎನ್ನುವ ಪದ ಅವನಿಗೆ ಬೇರೆಯಾಗಿಯೇ ಕೇಳಿತು. ಸ್ವಲ್ಪ ಅದರಿಂದತಾಗಿ "ಇಷ್ಟಕ್ಕೂ ನೀವ್ಯಾರು?"

"ಅಷ್ಟು ಅವಸರವೆ? ಅವಸರವಾದರೆ ತಿಳಿದುಕೊಳ್ಳಬಹುದಲ್ಲವೆ? ಮೊಬೈಲ್ ಕಟ್ಟಾಯಿತು. ಪವನ್ ದೇಹದಲ್ಲಿ ಏನೋ ಚಲನೆಗೊಂಡಂತಾಗಿ ಸುತ್ತಲೂ ನೋಡಿದ. ಎದುರಿಗಿದ್ದ ಗ್ಲಾಸನ್ನು ತೆಗೆದುಕೊಂಡು ಒಂದು ಗುಟುಕು ನೀರು ಕುಡಿದ. ದಿಢೀರನೆ ಮತ್ತೇನೋ ಹೊಳೆದು ಕರೆಗಂಟೆ ಒತ್ತಿದ. ಸೇವಕ ಬಂದು ನಿಂತ. "ಕಾರ್ಯದರ್ಶಿ ಇದ್ದಾರೆಯೇ ನೋಡು".

"ಇದ್ದಾರೆ ಸಾರ್" ಸೇವಕ ಹೇಳಿದ. ಪವನ್ ಕಣ್ಣಲ್ಲಿ ಸನ್ನೆಮಾಡಿ ಸೇವಕನನ್ನು ಕಳುಹಿಸಿದ.

ಪವನ್ ತನಗೆ ಗೊತ್ತಿರುವ ಹೆಣ್ಣುಗಳೆಲ್ಲರನ್ನೂ ಒಂದು ಕಡೆಯಿಂದ ಸ್ಮೃತಿಪಟಲದಿಂದ ಸ್ಪರ್ಶಿಸುತ್ತಾಹೋದ. ಆದರೆ ಯಾರ ಧ್ವನಿಯೂ ಹೊಂದಿಕೊಳ್ಳಲಿಲ್ಲ. ಯಾರಾದರೂ ಬಾಯಲ್ಲಿ ಏನಾದರೂ ವಸ್ತು ಇಟ್ಟುಕೊಂಡು ತಮಾಷೆ ಮಾಡಿರಬಹುದೆ. ಮತ್ತೆ ಮತ್ತೆ ಯೋಚಿಸತೊಡಗಿದ.

ಮೊಬೈಲ್ ತೆಗೆದುಕೊಂಡು ನೇರವಾಗಿ ಮನೆಗೆ ಡಯಲ್ ಮಾಡಿದ. ಸುಮಾರು ಮೂವತ್ತು ಸೆಕೆಂಡ್‌ಗಳಾದ ಮೇಲೆ ಅಡಿಗೆ ಭಟ್ಟ ಲೈನ್ ಮೇಲೆ ಬಂದು "ಅಮ್ಮಾವರು ಹೊರಗೆ ಹೋಗಿದ್ದಾರೆ" ಎಂದ. "ಎಷ್ಟೊತ್ತಾಯಿತು".

"ಸುಮಾರು ೩೦ ನಿಮಿಷಗಳಾಯಿತು".

"ಬಂದ ಮೇಲೆ ನಾನು ಫೋನ್ ಮಾಡಿದ್ದೆ ಎಂದು ಹೇಳಬ್ಯಾಡ" ಎಂದು ಮೊಬೈಲ್ ಕಟ್ ಮಾಡಿದ. ತಲೆ ಒಂದು ಸಲ ತಿರುಗಿದಂತಾಗಿ ಮತ್ತೆ ಫೈಲಿನ ಮೇಲೆ ಏಕಾಗ್ರತೆ ಹೊಂದಲು ಪ್ರಯತ್ನಿಸಿ ನೋಡಿದ, ಆಗಲಿಲ್ಲ. ರುಚಿಯನ್ನು ಕೋಣೆಗೆ

ಕರೆಸಿಕೊಂಡು ಏನಾದರೂ ಮಾತನಾಡೋಣ ಎಂದುಕೊಂಡನಾದರೂ ಕರೆಯಲಿಲ್ಲ. ಮೊಬೈಲ್ ಕಡೆಗೊಮ್ಮೆ ಪ್ರಶ್ನಾರ್ಥಕವಾಗಿ ನೋಡಿ ಮತ್ತೊಮ್ಮೆ ಕೆಲಸದಲ್ಲಿ ತಲ್ಲೀನನಾದ.



ಪ್ರಾಚಿ ಬೆಂಟ್ಲಿ ಕಾರಿಂದ ಇಳಿದು ಮನೆ ಒಳಕ್ಕೆ ಹೋಗಿ ಬಟ್ಟೆ ಬದಲಿಸಿಕೊಂಡು ಬೆಚ್ಚಗೆ ನೀರಿನ ಟಬ್ಬಿನಲ್ಲಿ ಸ್ವಲ್ಪ ಸಮಯ ಕಳೆಯಲೆಂದು ಸ್ನಾನದ ಕೊಠಡಿಗೆ ಸೇರಿದಳು. ದಿನದ ಬೆಳಕು ಕೋಣೆಯ ತುಂಬಾ ತುಂಬಿಕೊಂಡಿದೆ. ರಾತ್ರಿಯ ಹೊತ್ತು ಬೆತ್ತಲೆಯಾದಷ್ಟು ಸುಲಭವಾಗಿ ಬೆತ್ತಲೆಯಾಗಲು ಅವಳ ಮನಸ್ಸು ಒಪ್ಪಿಕೊಳ್ಳದಿದ್ದರೂ, ತನ್ನ ನಗ್ನ ಸೌಂದರ್ಯವನ್ನು ದರ್ಪಣದಲ್ಲಿ ನೋಡಿಕೊಳ್ಳುವ ಚಟವಿರುವುದರಿಂದ ಟಾಪ್‌ಲೆಸ್ ಆಗಿ ತನ್ನ ಎದೆಗಳನ್ನು ಅರೆಕ್ಷಣ ವೀಕ್ಷಿಸಿ ಸೊಂಟದ ಮೇಲಿದ್ದ ಬಟ್ಟೆಯನ್ನು ಕಳಚಿ ಬಾತ್‌ಟಬ್ ಒಳಕ್ಕೆ ನಿಧಾನವಾಗಿ ಜಾರಿಕೊಂಡಳು.

ನುಣುಪಾದ ದೇಹವನ್ನು ಉಗುರು ಬೆಚ್ಚನೆಯ ನೀರು ಸ್ವಾಧಿಸುತ್ತಾ ತರಂಗಗಳೇಳಿಸುತ್ತಿದೆ. ನೀರು ಇನ್ನಷ್ಟು ಬೆಚ್ಚಗಿದ್ದರೆ ಚೆನ್ನಾಗಿತ್ತು ಎನಿಸಿತು. ಕೋಮಲವಾದ ಕೈಗಳು ದೇಹದ ಮೇಲೆಲ್ಲ ಒಮ್ಮೆ ಹರಿದಾಡಿ ಪವನ್ ಜ್ಞಾಪಕಕ್ಕೆ ಬಂದ.

ಅದೇ ಸಮಯಕ್ಕೆ ಇನ್ನೊಂದು ಕೋಣೆಯಲ್ಲಿನ ಲ್ಯಾಂಡ್ ಲೈನ್ ರಿಂಗಾಯಿತು. ಕಿಚ್ಚನ್‌ನಲ್ಲಿದ್ದ ಸೇವಕ ಓಡಿಬಂದು ಫೋನ್ ತೆಗೆದುಕೊಂಡ. ಇನ್ನೊಂದು ತುದಿಯಲ್ಲಿರುವ ಸ್ವರ ಫೋನ್ ತೆಗೆದುಕೊಂಡಿದ್ದನ್ನು ಖಾತರಪಡಿಸಿಕೊಂಡು ಆರು ಸಂಖ್ಯೆಗಳನ್ನೇಳಿ ಇದೇ ಫೋನ್ ಅಲ್ಲವೆ ? ಎಂದಿತು "ಹೌದು".

"ಮೇಡಮ್ ಇದ್ದಾರಾ?"

"ಇದ್ದಾರೆ"

"ಸ್ವಲ್ಪ ಲೈನ್ ಮೇಲೆ ಕರೆಯುತ್ತೀಯ?"

"ಸ್ನಾನ ಮಾಡುತ್ತಿದ್ದಾರೆ" ಮಾತನಾಡುತ್ತಿರುವವನನ್ನು ಸೇವಕ ಎಂದು ತಿಳಿದುಕೊಂಡ ಆ ಸ್ವರ "ಸ್ನಾನದ ಕೋಣೆಯಲ್ಲಿ ಫೋನ್ ಇಲ್ಲವೆ?"

"ಇಲ್ಲ" ಇಷ್ಟಕ್ಕೂ ನೀವ್ಯಾರು ಎನ್ನುವ ಪ್ರಶ್ನೆ ಸೇವಕನ ಮನದಲ್ಲೆದ್ದರೂ ಪ್ರಶ್ನಿಸಲಿಲ್ಲ.

"ಮೇಡಮ್ ಹೊರಗಡೆ ಬರುವುದಕ್ಕೆ ಎಷ್ಟೊತ್ತಾಗಬಹುದು ?"

"ನನಗೆ ಗೊತ್ತಿಲ್ಲ"

"ನೀನ್ಯಾರು ?"

"ನಾನು ಸಿ.ಕೆ."

"ಸಿ.ಕೆ ಅಂದರೆ" ಸೇವಕ ಖುಷಿಯಿಂದ ನಗುತ್ತಾ "ಸಿ.ಕೆ. ಅಂದರೆ ಕುಕ್" ಎಂದ.

ಆ ಕಡೆಯ ಸ್ವರ ತುಸು ಸಾವರಿಸಿಕೊಂಡು ಒಳ್ಳೆ ಸಿಕೆನೆ ಎಂದುಕೊಂಡಿತು.

"ಸರಿ, ನಾನು ಮತ್ತೆ ಫೋನ್ ಮಾಡುತ್ತೇನೆ ಸಿ.ಕೆ" ಎಂದ ಹಾಸ್ಯವಾಗಿ. ಅಷ್ಟರಲ್ಲಿ ಫೋನ್ ಕಟ್ಟಾಯಿತು. ಒಳ್ಳೆ ಪಾರ್ಟಿನೆ ಹೆಸರು, ವಿಳಾಸ ಏನೂ ಕೇಳದೆ ಕಟ್ ಮಾಡಿಬಿಟ್ಟನಲ್ಲ ಎಂದುಕೊಂಡ ಸೇವಕ.

ಪ್ರಾಚಿ ಶುದ್ಧವಾದ ಹತ್ತಿಯ ಟವಲ್‌ನಿಂದ ಮೈ ಒರೆಸಿಕೊಂಡು ಸಡಿಲವಾದ ಬಟ್ಟೆ ತೊಟ್ಟು ಅಲಂಕಾರದ ಕುರ್ಚಿಯ ಮೇಲೆ ಕುಳಿತುಕೊಂಡು ಮುಖವನ್ನು ಸಿಂಗರಿಸತೊಡಗಿದಳು. ಗುಲಾಬಿ ಕೆನ್ನೆಗಳ ಮೇಲೆ ಪೌಡರನ್ನು ಅತಿ ತೆಳುವಾಗಿ ಲೇಪಿಸಿ ಕಣ್ಣುಬ್ಬು ಮತ್ತು ಕಣ್ಣು ರೆಪ್ಪೆಗಳ ಮೇಲೆ 'ಹರ್ಬಲ್' ಕಾಡಿಗೆ ತೆಳುವಾಗಿ ತೀಡಿ ತುಟಿಗಳ ಮೇಲೆ ಲಿಪ್‌ಸ್ಟಿಕ್ ಹಚ್ಚಿಕೊಂಡಳು.

ಬಾಗಿಲನ್ನು ತುಸು ಸಪ್ಪಳಮಾಡಿ ಒಳ ಬಂದ ಸೇವಕ ಫೋನ್ ಬಂದಿದ್ದ ವಿಷಯ ತಿಳಿಸಿದ. "ಹೆಸರೇನು?"

"ಹೆಸರು ಕೇಳುವಷ್ಟರಲ್ಲಿ ಫೋನ್ ಇಟ್ಟುಬಿಟ್ಟರು. ಆದರೆ ನಮ್ಮ ಫೋನ್ ಸಂಖ್ಯೆ ಹೇಳಿ ಇದೇನಾ ಎಂದರು. ಹೌದು ಎಂದೆ. ಮೇಡಮ್‌ನವರನ್ನು ಲೈನ್‌ಗೆ ಕರಿ ಎಂದರು. ನಾನು ಸ್ನಾನಮಾಡುತ್ತಿದ್ದಾರೆ ಎಂದೆ. ಆಮೇಲೆ ಫೋನ್ ಮಾಡುತ್ತೇನೆಂದೇಳಿ ಫೋನ್ ಇಟ್ಟುಬಿಟ್ಟರು".

"ಆಯಿತು ನೀನೋಗಿ ಸ್ವಲ್ಪ ಊಟ ಇಡು" ಅಂತೇಳಿ ಡೈನಿಂಗ್ ಟೇಬಲ್ ಮುಂದೆ ಕುಳಿತುಕೊಂಡಳು. ಯಾರಾದರೂ ತಿಳಿದಿರುವವರಾದರೆ ಖಂಡಿತ ಹೆಸರು ಹೇಳುತ್ತಿದ್ದರು. ಪ್ರಾಚಿಗೆ ಕೆಲವು ಹಳೆ ಬಾಯ್‌ಫ್ರೆಂಡ್ಸ್‌ಗಳಿದ್ದಾರೆ. ಆದರೆ ಬೆಂಗಳೂರಿನಲ್ಲಿಲ್ಲ, ಮುಂಬಯಿಯಲ್ಲಿ.

ಪವನ್ ಏನಾದರೂ ಸ್ವರ ಬದಲಿಸಿಕೊಂಡು ತಮಾಷೆ ಮಾಡಿರಬಹುದೆ, ಇದ್ದರೆ ಇರಬಹುದು. ಪವನ್ ಆಗಾಗ ತಮಾಷೆಮಾಡುತ್ತಾನೆ. ಯಾರೋ ಇರಲಿ,

ಎಂದುಕೊಳ್ಳುತ್ತಾ ಊಟ ಮಾಡಲು ಕುಳಿತುಕೊಂಡಳು. ಯಾರೋ ಅವಳ ಸೌಂದರ್ಯವನನ್ನು ಚೇಷ್ಟೆ ಮಾಡಿದಂತಾಗಿ ಎದ್ದು ಹೋಗಿ ಪವನ್ ಸಂಖ್ಯೆಗೆ ಡಯಲ್ ತಿರುಗಿಸಿದಳು.

ಆ ಕಡೆಯಲ್ಲಿ ಫೋನ್ ರಿಂಗಾಗಿ ಒಂದು ಎರಡು ಮೂರು ಕ್ಷಣಗಳು ಉರುಳತೊಡಗಿದವು. ಲೈನ್ ಮೇಲೆ ಯಾರೂ ಬರಲಿಲ್ಲ. ಸುಮಾರು ೩೦-೪೦ ಸೆಕೆಂಡ್‌ಗಳಾದ ಮೇಲೆ ಮಧುರವಾದ ಹೆಣ್ಣು ಕೊರಳು ಸುಂದರವಾದ ಇಂಗ್ಲಿಷ್‌ನಲ್ಲಿ 'ಹಲೋ' ಎಂದಳು.

ಪ್ರಾಚಿಯ ಮೈಯೆಲ್ಲಾ ಒಮ್ಮೆ ಹೊತ್ತಿಕೊಂಡಂತಾಗಿ "ಇದು ಮಿ. ಪವನ್ ಕೋಣೆಯಲ್ಲವೆ?"

"ಹೌದು ಇದು ಮಿ. ಪವನ್ ಕೋಣೆ."

"ನೀವ್ಯಾರು"

"ನಾನವರ ಖಾಸಗಿ ಕಾರ್ಯದರ್ಶಿ ಮಿಸ್ ರುಚಿ"

"ಮಿ. ಪವನ್ ಎಲ್ಲಿಗೋಗಿದ್ದಾರೆ...?"

ಅಷ್ಟರಲ್ಲಿ ಪವನ್ ಒಳಕ್ಕೆ ಬಂದ. "ಇಲ್ಲೆ ಇದ್ದಾರೆ, ಒಂದು ನಿಮಿಷ" ಎಂದು ಪವನ್ ಕೈಗೆ ಕೊಟ್ಟು "ನಿಮಗೆ ಫೋನ್" ಎಂದು ಹೇಳಿ ತನ್ನ ಕೋಣೆಯ ಕಡೆ ನಡೆಯತೊಡಗಿದಳು.

"ಹಲೋ ಪವನ್ ಮಾತನಾಡುವುದು" ಹೊತ್ತಿಕೊಂಡು ಉರಿಯುತ್ತಿದ್ದ ಪ್ರಾಚಿಯ ದೇಹ ಪವನ್‌ನ ಮಾತುಗಳಿಂದ ಶಾರ್ಟ್‌ಸರ್ಕೀಟ್ ಆಗಿ ಭುಗಿಲ್ಲನೆ ಉರಿದು ಹೋಗಿ ಲೈನ್ ಕಡಿದುಹೋಯಿತು.

ಪವನ್ ಮತ್ತೆ ಒಂದೆರಡು ಸಲ ಹಲೋ ಹಲೋ ಎಂದು ಪ್ರಯತ್ನಿಸಿ ಫೋನ್ ಇಟ್ಟುಬಿಟ್ಟ. ಬೆಳಿಗ್ಗೆ ಬಂದ ಫೋನ್ ಜ್ಞಾಪಕಕ್ಕೆ ಬಂದು "ಅಷ್ಟೇ ಅವಸರವಾದರೆ ತಿಳಿದುಕೊಳ್ಳಬಹುದಲ್ಲವೆ" ಎನ್ನುವ ಪದಗಳು ಒಂದೇ ಸಮನೇ ಅವನ ಮನಸ್ಸನ್ನು ಗೊಂದಲ ಮಾಡಿಬಿಟ್ಟವೆ.

ರುಚಿಯನ್ನು ಕರೆಸಿ ಫೋನ್ ಮಾಡಿದ್ದವರ ಬಗ್ಗೆ ಕೇಳಿದ. "ಯಾರೋ ಹೆಣ್ಣು ಇದು ಮಿ. ಪವನ್ ಕೋಣೆಯಲ್ಲವೆ" ಎಂದಳು. ಹೌದು ಎಂದೆ. ನೀವ್ಯಾರು ಅಂತ ಕೇಳಿದರು ನಾನು ಅವರ ಖಾಸಗಿ ಕಾರ್ಯದರ್ಶಿ ಮಿಸ್ ರುಚಿ ಎಂದೆ ಮಿಸ್ಟರ್ ಪವನ್ ಎಲ್ಲಿಗೋಗಿದ್ದಾರೆ? ಎಂದು ಕೇಳಿದರು. ಅಷ್ಟರಲ್ಲಿ ನೀವೇ ಬಂದಿರಿ ರುಚಿ ಹೇಳಿ ಮುಗಿಸಿದಳು.

"ನೀವು ಹೋಗಬಹುದು" ಪವನ್ ಹೇಳಿದ. ರುಚಿ ಅಲ್ಲಿಂದ ಹೊರಬಂದಳು. ಅದೇ ಕೊರಳೆ ಇರಬಹುದು. ಅಷ್ಟು ಅವಸರವಾದರೆ ತಿಳಿದುಕೊಳ್ಳಬಹುದಲ್ಲವೆ? ತಿಳಿದುಕೊಳ್ಳುತ್ತೇವೆ. ಖಂಡಿತ ತಿಳಿದುಕೊಳ್ಳುತ್ತೇನೆ ಎಂದುಕೊಂಡು ಮತ್ತೆ ಏನೋ ಪ್ರತಿಜ್ಞೆ ಮಾಡಿದವನಂತೆ ಮೃದುವಾಗಿ ಮುಖದ ಸ್ನಾಯುಗಳನ್ನು ಬಿಗಿಸಿಕೊಂಡ.



ಇಲ್ಲಿ ಮನೆಯಲ್ಲಿ ಪ್ರಾಚಿ, ಬರಲಿ ಈ ದಿನ ಏನಾದರೂ ಒಂದು ನಿರ್ಧಾರ ಆಗಲೇಬೇಕೆಂದುಕೊಳ್ಳುತ್ತಾ ದೇಹ ಮತ್ತು ಮನಸ್ಸಿಗೆ ಎಂದೂ ಶ್ರಮ ನೀಡದ ಪ್ರಾಚಿ ತನ್ನ ಸುಂದರ ಮುಖದ ಸ್ನಾಯುಗಳನ್ನು ಬಿಗಿಸಿಕೊಂಡು ಹಾಸಿಗೆಯ ಮೇಲೆ ಪ್ರಶ್ನಾರ್ಥಕ ಚಿಹ್ನೆಯಂತೆ ಕುಳಿತುಕೊಂಡಿದ್ದಾಳೆ. ಬಿಗಿಸಿಕೊಳ್ಳುವ ಅಭ್ಯಾಸವೇ ಇಲ್ಲದ ಸ್ನಾಯುಗಳು ಬಹಳ ಕಷ್ಟಪಟ್ಟು ಬಿಗಿದಿಟ್ಟುಕೊಂಡರು ಸಡಿಲಗೊಂಡು ಮುಖದ ಮೇಲೆ ಸುಂದರತೆಯನ್ನು ತುಂಬಿಕೊಂಡಿವೆ.

ಪ್ರಾಚಿ ಸಾಯಂಕಾಲ ೫.೩೦ ಗಂಟೆ ಯಾವಾಗ ಆಗುವುದೆಂದು ಸಮಯವನ್ನೇ ನೋಡುತ್ತಾ ಕುಳಿತಿದ್ದಾಳೆ. ಪವನ್ ಮತ್ತೊಮ್ಮೆ ಮೊಬೈಲ್ ಯಾವಾಗ ಮೊಳಗಬಹುದೆಂದು ಕಾಯುತ್ತಿದ್ದಾನೆ. ಸಮಯವೂ ಸರಳವಾಗಿ ಉರುಳಲಿಲ್ಲ, ಫೋನು ಮೊಳಗಲಿಲ್ಲ. ಪೃಥ್ವಿ ತನ್ನ ಪಾಡಿಗೆ ತಾನು ನಿಶ್ಚಿಂತೆಯಿಂದ ಸುತ್ತುತ್ತಿದೆ.

ಸಾಮಾನ್ಯವಾಗಿ ನಿಗದಿತ ಸಮಯಕ್ಕಿಂತ ಅರ್ಧ ಗಂಟೆ ಕೆಲಸವಿದ್ದಾಗ ಹೆಚ್ಚಾಗಿ ಕಚೇರಿಯಲ್ಲಿ ಉಳಿಯುವ ಪವನ್ ಈ ದಿನ ಇನ್ನಷ್ಟು ಸಮಯ ಫೋನ್‌ಗಾಗಿ ಎದುರು ನೋಡಿದ. ಪ್ರಾಚಿಯ ಕೋಪ ಗಡಿಗಳನ್ನು ಮೀರುತ್ತಿದ್ದು ಸುಂದರವಾದ ದೇಹದಲ್ಲಿನ ಜೀವ ಕಣಗಳು ತಡೆದುಕೊಳ್ಳಲಾರದಷ್ಟು ಒತ್ತಡವನ್ನು ಎದುರಿಸುತ್ತಿವೆ.

ಕಾರು ಸರ್ರನೆ ಶಬ್ದಮಾಡುತ್ತಾ ಬಂದು ನಿಂತುಕೊಂಡಿತು. ಪ್ರಾಚಿಯ ಮನ ಇನ್ನಷ್ಟು ಗೊಂದಲಮಯವಾಯಿತು. ಪವನ್ ಎಂದಿನಂತೆ ಕಾರಿನಿಂದಿಳಿದು ಬಾಗಿಲ ಕಡೆ ನೋಡಿದ. ಪ್ರಾಚಿ ಅವನನ್ನು ಸ್ವಾಗತಿಸಲು ಅಲ್ಲಿರಲಿಲ್ಲ. ಪ್ರಾಚಿ ಮನೆಯಲ್ಲಿದ್ದು ಪವನ್‌ನನ್ನು ಸ್ವಾಗತಿಸದೆ ಇರುವುದೆಂದರೆ ಬಹಳ ಅಪರೂಪವೇ ಸರಿ.

ಪವನ್ ಒಂದಷ್ಟು ಗಲಿಬಿಲಿಯಿಂದ ಪ್ರಾಚಿಯ ಕೋಣೆಯೊಳಕ್ಕೋಗಿ ಬ್ರೀಫ್‌ಕೇಸಿಟ್ಟು ಪ್ರಾಚಿಯ ಕಡೆ ನಡೆಯತೊಡಗಿದ. ಪ್ರಾಚಿ ಯಾವ ಪ್ರತಿಕ್ರಿಯೆಯೂ ತೋರಿಸದೆ ಬಿಗಿದಿಕೊಂಡ ಮುಖ ಸ್ನಾಯುಗಳ ಜೊತೆಗೆ ದುರುಗುಟ್ಟಿ ಪವನ್ ಕಡೆ ನೋಡಿದಳು.

ಹೌಹಾರಿದ ಪವನ್ ನೇರವಾಗಿ ಅವಳ ಎದೆ ಮಧ್ಯೆ ಬೆರಳುಗಳನ್ನು ತೂರಿಸಿ

ದೇಹದ ಉಷ್ಣಾವನ್ನು ಅಳತೆ ಮಾಡಿದ. ಅವನ ಬೆರಳುಗಳೇ ಅವಳ ದೇಹದ ಉಷ್ಣಾಂಶಕ್ಕಿಂತ ಹೆಚ್ಚು ಬಿಸಿ ಇದೆ.

ಕೆನ್ನೆಗಳನ್ನು ಮೃದುವಾಗಿ ಸ್ಪರ್ಶಿಸುತ್ತಾ "ಪ್ರಾಚಿ ಏನಾಯಿತು" ಎಂದನಷ್ಟೆ. "ನನ್ನ ಮುಟ್ಟಬೇಡಿ, ನಿಮ್ಮ ಕೈಗಳಲ್ಲಿ" ಎನ್ನುತ್ತ ಅವನ ಕೈಗಳನ್ನು ಅತ್ತ ತಳ್ಳಿದಳು.

ಇನ್ನೊಮ್ಮೆ ಆಘಾತವನ್ನು ಹೊಡಿಸಿಕೊಂಡವನಂತೆ ಏನೂ ಅರ್ಥವಾಗದೆ ಹತ್ತಿರದಲ್ಲೇ ಕುಳಿತುಕೊಂಡು ಭಿನ್ನಭಿನ್ನವಾಗಿ ಬೇಡಿಕೊಂಡ. ಪ್ರಾಚಿಯ ಸಂದೇಹ ಮತ್ತು ಕೋಪ ಬಹಳ ಸಮಯದ ನಂತರ ಪ್ರಶ್ನೆಗಳಾಗಿ ಪರಿವರ್ತನೆಗೊಂಡವು.

"ಮಧ್ಯಾಹ್ನ ಒಂದು ಗಂಟೆಗೆ ನೀವೇನು ಮಾಡ್ತಾ ಇದ್ರಿ?"

"ಮಧ್ಯಾಹ್ನ ಒಂದು ಗಂಟೆಗೆ ಕಚೇರಿಯಲ್ಲೆ ಇದ್ದೆ".

"ಮತ್ತೆ ಕಾರ್ಯದರ್ಶಿ (ಕಾರ್ಯದರ್ಶಿ ಪದವನ್ನು ಒತ್ತಿ) ನೀವಿಲ್ಲ ಅಂತ ಹೇಳಿದ್ಯಾಕೆ? ಯಾರು ಆ ಕಾರ್ಯದರ್ಶಿ ನಾಳೇನೆ ಅವಳನ್ನು ವರ್ಗಮಾಡಿ ಅಲ್ಲೆ ಇದ್ದರೆ ನೀವ್ಯಾಕೆ ಫೋನ್ ತೆಗೆದುಕೊಳ್ಳಲಿಲ್ಲ".

"ಓ... ಮಧ್ಯಾಹ್ನ ನೀನೇನಾ ಫೋನ್ ಮಾಡಿದ್ದು".

"ಆ ನಾನೇ ಯಾಕೆ ತೊಂದರೆ ಆಯಿತೆ ನಿಮ್ಮ ಸಲ್ಲಾಪಕ್ಕೆ ?" ಪವನ್ ಈಗ ಚಿತ್ರಣವನ್ನು ತುಸು ಅರ್ಥಮಾಡಿಕೊಂಡು ನಿರಾಳವಾಗಿ ಒಮ್ಮೆ ನಿಶ್ವಾಸ ಬಿಟ್ಟು.

"ಹಾಗಾದರೆ ಬೆಳಗ್ಗೆ ಫೋನ್ ಮಾಡಿದ್ದು ಯಾರು ?"

ಆ ಮಾತನ್ನು ಇಲ್ಲಿ ಜ್ಞಾಪಿಸಿಕೊಂಡಿದ್ದೆ ದೊಡ್ಡ ತರಲೆ ಎಂದುಕೊಂಡ ಪವನ್, ಈಗ ಬಂದಿರುವ ತೊಂದರೆಯನ್ನು ಸದ್ಯಕ್ಕೆ ನಿವಾರಿಸಿಕೊಂಡರೆ ಸಾಕೆಂದುಕೊಂಡು ಪ್ರಾಚಿಯನ್ನು ಸಮಾಧಾನ ಪಡಿಸಲು ತನ್ನ ಜ್ಞಾನಕ್ಕೆ ಎಟುಕಿದ ಎಲ್ಲಾ ಉಪಾಯಗಳನ್ನೂ ಪದಗಳಲ್ಲಿ ಪೋಣಿಸಿ ಪ್ರಾಚಿಯ ಕೋಪವನ್ನು ಕರಗಿಸತೊಡಗಿದ.

ಆರು ತಿಂಗಳು ಕಾಲ ಸೂರ್ಯನ ಕಿರಣಗಳನ್ನೇ ನೋಡಿದ ದಕ್ಷಿಣ ಧ್ರುವದ ಮಂಜುಗಡ್ಡೆಗಳು ಒಮ್ಮೆಲೆ ಕರುಗುವುದುಂಟೆ?

"ನೀನು ಫೋನ್ ಮಾಡಿದಾಗ ನಾನು ಹೊರಗಡೆಯಿಂದ ಒಳಕ್ಕೋದೆ. ಮಿಸ್ ರುಚಿ ನಿಮಗೆ ಫೋನ್ ಎಂದು ನನ್ನ ಕೈಗೆ ಕೊಟ್ಟು ಹೊರಟುಹೋದಳು. ನಾನು ಹಲೋ ಎಂದ ತಕ್ಷಣ ಲೈನ್ ಕಟ್ ಆಯಿತು. ನೀನು ಕೂಡ ರುಚಿಗೆ ಏನು, ಯಾರು ಒಂದೂ ಹೇಳಲಿಲ್ಲವಂತೆ ಮತ್ತೆ ನೀನೇ ಅಂತ ನನಗಾದರೂ ಹೇಗೆ ಗೊತ್ತಾಗಬೇಕು".

ಈಗಲೂ ಪ್ರಾಚಿ ದಕ್ಷಿಣ ಧೃವದ ಮಂಜುಗಡ್ಡೆಯನ್ನು ನುಂಗಿದ ಪೆಂಗ್ವಿನ್‌ನಂತೆ

ಕುಳಿತಿದ್ದಾಳೆ. ಕೊನೆಯ ಪ್ರಯೋಗವೆಂದುಕೊಂಡ ಪವನ್ ಪ್ರಾಚಿಯ ತಲೆಯ ಮೇಲೆ ಬಲಕೈ ಇಟ್ಟು "ಪ್ರಾಚಿ ನನ್ನ ನಂಬು, ನಿನ್ನಾಣೆ ನಾನೇನು ತಪ್ಪು ಮಾಡಿಲ್ಲ. ಆ ರುಚಿ ನನಗೆ ಖಾಸಗಿ ಕಾರ್ಯದರ್ಶಿಯಾಗಿ ಬಂದು ಕೇವಲ ಎರಡೇ ದಿನಗಳಾಗಿವೆ. ಹೊಸ ಕಾರ್ಯದರ್ಶಿ ಬಂದಿರುವ ವಿಷಯ ನಿನಗೆ ಮೊದಲೇ ತಿಳಿಸಿದ್ದೇನೆ" ಹೀಗೆ ಹೇಳುತ್ತಾ ಹೋಗುತ್ತಿದ್ದ.

ಈಗ ಪ್ರಾಚಿಯ ಮೇಲೆ ಒಂದಷ್ಟು ಪ್ರಭಾವ ಬೀರದಂತಿತ್ತು. ಹೆಣ್ಣು ಎಷ್ಟು ಜಿದ್ದಿಯೋ ಅಷ್ಟೇ ಮೃದು ಕೂಡ. ಅವರನ್ನು ಸರಿಯಾಗಿ ಮಣಿಸುವ ಸೆಂಟಿಮೆಂಟಲ್ ಬಗ್ಗೆ ಸ್ವಲ್ಪವೇ ಗೊತ್ತಿದ್ದರೂ ಸಾಕು ಅವರನ್ನು ಗೆದ್ದು ಬಿಡಬಹುದು.



ಮೇಜಿನ ಮೇಲಿದ್ದ ಫೋನ್ ಮೊಳಗಿತು. ಪ್ರಾಚಿ ಫೋನ್ ತೆಗೆದುಕೊಂಡು "ಹಲೋ" ಎಂದಳು. "ಹಲೋ ಸುಂದರಿ ಒಬ್ಬಳೇ ಇದ್ದೀಯಾ ?"

"ತಪ್ಪು ಸಂಖ್ಯೆ"

"ತಪ್ಪು ಸಂಖ್ಯೆಯಲ್ಲ"

"ನೀವ್ಯಾರು ?"

"ನಿನ್ನ ಸೌಂದರ್ಯ ರಸಿಕ"

"ಮೈ ಫುಟ್ ಸ್ಟುಪಿಡ್" ಎಂದಳು ಪ್ರಾಚಿ.

ಅದೇ ಮಾತುಗಳು ಮತ್ತೊಂದು ಕೊನೆಯಲ್ಲಿದ್ದ ಕಿವಿಗಳಿಗೆ ಮುಟ್ಟಿತು. ಬೈಯಿಸಿಕೊಂಡರೆ ಇಂತಹ ಸುಂದರ ಹೆಣ್ಣುಗಳಿಂದಲೇ ಬೈಯಿಸಿಕೊಳ್ಳಬೇಕೆಂದು ಕೊಂಡಿತು ಅವನ ಮನ.

ಪ್ರಾಚಿ ಮಾತನಾಡುವ ಶೈಲಿಯಲ್ಲೇ ಕಂಡುಕೊಂಡ ಪವನ್ ಫೋನ್ ತೆಗೆದುಕೊಂಡು ರಿಸೀವರನ್ನು ತನ್ನ ಕಿವಿಯಲ್ಲಿಟ್ಟುಕೊಂಡು "ಹಲೋ... ಹಲೋ..." ಎಂದ, ಲೈನ್ ಕಟ್ ಆಯಿತು.

"ಯಾವನೋ ಪೋಲಿ ಅನ್ನಿಸುತ್ತೆ ನಿನ್ನ ಸೌಂದರ್ಯ ರಸಿಕ ಅನ್ನುತ್ತಾನೆ" ಎಂದಳು ನಾಚಿಕೊಳ್ಳುತ್ತಾ ಪ್ರಾಚಿ. ಪವನ್ ಹಗುರವಾಗಿ ನಗತೊಡಗಿದ. ಬಹುಶಃ ಬೆಳಿಗ್ಗೆಯೂ ಇವನೇ ಫೋನ್ ಮಾಡಿದಂತಿದೆ ಪ್ರಾಚಿ ಪವನ್‌ಗೆ ಹೇಳಿದಳು.

ಯಾರೋ ಇನ್ನೊಂದು ಸಲ ಮಾಡಲಿ ಎನ್ನುತ್ತಾ ಪವನ್ ಎದ್ದು ಹೋಗಿ ಬಟ್ಟೆಗಳನ್ನು ಬದಲಿಸಿಕೊಂಡು ಮತ್ತೆ ಪ್ರಾಚಿಯ ಪಕ್ಕಕ್ಕೆ ಬಂದು ಕುಳಿತುಕೊಂಡ.

"ಯಾವುದಾದರೂ ಸಿನಿಮಾಗೆ ಹೋಗೋಣವೆ" ಪವನ್ ಹೇಳಿದ. ಅಂದಿನ ಪೇಪರ್ ನೋಡಿ ಒಂದು ಇಂಗ್ಲಿಷ್ ಸಿನಿಮಾ ಗುರುತಿಸಿಕೊಂಡಳು. ಇಬ್ಬರೂ ತಯಾರಾಗಿ ಪ್ರಾಚಿ ಬ್ರಿಗೇಡ್ ರಸ್ತೆಯ ಕಡೆ ಕಾರನ್ನು ಓಡಿಸತೊಡಗಿದಳು.

ಬೆಂಗಳೂರಿನ ರಸ್ತೆಗಳಲ್ಲಿ ಕತ್ತಲು – ಬೆಳಕು ಚೆಲುವಾಗಿ ಸಮ್ಮಿಲನಗೊಂಡಿದೆ. ಬೆಂಟ್ಲಿ ಕಾರು ಓಡುವ ವಾಹನಗಳ ನಡುವೆ ಮದುಮಗಳಂತೆ ಹಗುರವಾಗಿ ಸಪ್ಪಳ ಮಾಡುತ್ತಾ ಓಡುತ್ತಿದೆ.

ಪ್ರಾಚಿ ಪವನ್‌ನ ದೇಹಕ್ಕೆ ಒತ್ತಿಕೊಂಡು ಎಡಗಡೆ ಕುಳಿತಿದ್ದಾಳೆ. ಈ ದಿನ ನಡೆದ ಘಟನೆಗಳು ಮತ್ತೆ ಮತ್ತೆ ಅವಳ ಮನದಲ್ಲಿ ತರಂಗಗಳಂತೆ ಏಳುತ್ತಿವೆ, ಜೊತೆಗೆ ಪವನ್ ಮಾಡದ ತಪ್ಪಿಗೆ ಜವಾಬ್ದಾರನಾಗಿಸಿದ್ದಕ್ಕೆ ಅವಳಲ್ಲಿ ಎಂದೂ ಮೂಡದಷ್ಟು ಅನುರಾಗ ಮೂಡುತ್ತಿದೆ. ಆಗಾಗ ಪವನ್ ಮುಖ ನೋಡುತ್ತಿದ್ದಾಳೆ. ಪವನ್‌ನ ಮುಖ ಏನೂ ನಡೆದೇ ಇಲ್ಲವೆನ್ನುವಷ್ಟು ಮಾಮೂಲಿಯಾಗಿದೆ.

ಪವನ್‌ನ ತುಟಿಗಳು ಯಾವುದೋ ಹಾಡನ್ನು ಗುನುಗುತ್ತಿವೆ. "ಪವನ್, ನಾನೂ ಕೇಳುತ್ತೇನೆ, ಸ್ವಲ್ಪ ಸ್ವರವನ್ನು ಏರಿಸು" ಎಂದಳು ಪ್ರಾಚಿ. ಅರೆ ಕಣ್ಣುಗಳಲ್ಲೇ ನೋಡಿದ ಪವನ್.

Chubby cheeks... dimple chin

Rosy lips... teeth within

Curly hairs... very fair

Eyes are blue,,, lovely too

ಪ್ರಾಚಿ ಜೋರಾಗಿ ನಕ್ಕಳು.

ಪ್ರೀತಿ ಮಾಡುವುದು ಒಂದು ದೊಡ್ಡ ಕಲೆ, ಆ ಕಲೆಗೆ ಬೇಕಾಗಿರುವ ಕೌಶಲ್ಯ ಚುರುಕು ಚೆಲುವು, ಜಾಣತನ, ಚಾತುರ್ಯ ಸಾಹಸ ಎಲ್ಲವೂ ಅವನಲ್ಲಿದೆ ಎಂದುಕೊಳ್ಳುತ್ತಾಳೆ ಪ್ರಾಚಿ.

"ಪ್ರಾಚಿ, ನಿಮ್ಮ ತಂದೆ ತಂದಿದ್ದಾರಲ್ಲ ಲೇಟೆಸ್ಟ್ ಮೊಬೈಲ್ ಫೋನ್ ಅದನ್ನು ನಾಳೆನೇ ಲ್ಯಾಂಡ್‌ಲೈನ್ ಜೊತೆಗೆ ಜೋಡಿಸಿಬಿಡೋಣ".

"ಹೌದು ನಾನು ಕೂಡ ಅಂದುಕೊಂಡೆ, ಆ ಪೋಲಿ ಮತ್ತೊಮ್ಮೆ ಫೋನ್ ಮಾಡಿದರೆ ಎಲ್ಲವೂ ರಿಕಾರ್ಡ್ ಆಗುತ್ತದೆ. ಆಗ ಪೊಲೀಸರಿಗೆ ಈಜಿ ಆಗುತ್ತದೆ".

"ಇಲ್ಲ ಪೊಲೀಸರಿಗೆ ತಿಳಿಸುವ ಬದಲು ಟೆಲಿಫೋನ್ ಕಚೇರಿಗೆ ವಿಷಯ

ತಿಳಿಸಿದರೆ ಒಳ್ಳೆಯದು. ಪೊಲೀಸ್, ಸುಮ್ಮನೆ ಪಜೀತಿ" ಎಂದಳು ಪ್ರಾಚಿ. "ಅದು ಒಳ್ಳೆಯ ಉಪಾಯವೆ" ಪವನ್ ಹೇಳಿದ.

ಕಾರು ಬ್ರಿಗೇಡ್ ರಸ್ತೆಯ ಒಂದು ಹಳೆ ಶೈಲಿಯ ಚಿತ್ರಮಂದಿರದ ಮುಂದೆ ನಿಂತುಕೊಂಡಿತು. ಸಣ್ಣ ಸಣ್ಣ ಪ್ಲ್ಯಾಕಾರ್ಡ್ಸ್ ಕಾಣಿಸುವ ಪೋಸ್ಟರುಗಳ ಮೇಲೆ ಹೀರೋ ರಿವ್ವಾಲ್ವರ್ ಹಿಡಿದು ನಿಂತಿದ್ದಾನೆ. ಅವನ ಸುತ್ತಲು ನಾಲ್ಕೈದು ಸುಂದರಿಯರು ಅರೆಕೊರೆ ವಸ್ತ್ರಗಳ ಧರಿಸಿ ನಾಯಕನನ್ನು ಸುತ್ತುವರಿದಿದ್ದಾರೆ.

ಪವನ್ ಇಳಿದು ಜೋರಾಗಿ ಕೌಂಟರ್ ಕಡೆ ನಡೆಯುತ್ತಿದ್ದಾನೆ, ಪ್ರಾಚಿ ಕಾರಿನ ಒಳಗೆಯೆ ಕುಳಿತಿದ್ದಾಳೆ. ಕೌಂಟರ್‌ನಲ್ಲಿ ಟಿಕೇಟು ತೆಗೆದುಕೊಂಡು ಒಬ್ಬೊಬ್ಬರೇ ಒಳಕ್ಕೆ ಹೋಗುತ್ತಿದ್ದಾರೆ. ಸ್ವಲ್ಪ ಸಮಯದಲ್ಲೆ ಟಿಕೇಟ್ ತೆಗೆದುಕೊಂಡ ಪವನ್ ಕಾರಿನ ಕಡೆ ನಡೆದು ಬರುತ್ತಾನೆ. ಪವನ್ ತನ್ನ ಕಡೆ ಬರುವುದನ್ನು ಗಮನಿಸಿದ ಪ್ರಾಚಿ ಬಾಗಿಲು ತೆಗೆದುಕೊಂಡು ಹೊರಕ್ಕೆ ಬರುತ್ತಾಳೆ.

ವಿದ್ಯುತ್ ದೀಪಗಳು ನೋಡವವರ ಕಣ್ಣುಗಳಲ್ಲಿ ಏನೋ ಒಂದು ರೀತಿಯ ಸೌಂದರ್ಯವನ್ನು ತುಂಬುವಂತೆ ಬೆಳಗುತ್ತಿವೆ.

ಅಷ್ಟರಲ್ಲಿ ಒಂದು ಕಾರು ಸರ‍್ರನೆ ಚಿತ್ರಮಂದಿರದ ಒಳಕ್ಕೆ ಬಂದು ಪ್ರಾಚಿ ಇರುವ ಕಾರಿನ ಹಿಂದೆ ನಿಲ್ಲುತ್ತದೆ. ಪ್ರಾಚಿ ಮತ್ತು ಪವನ್ ಮಾದರಿ ಜೋಡಿಯಂತೆ ನಡೆದು ಹೋಗುತ್ತಿದ್ದಾರೆ ಹಾಲಿನೊಳಕ್ಕೆ. ಕಾರಿನ ಒಳಗಡೆಯೆ ಕುಳಿತಿರುವ ಜೋಡಿ ಕಣ್ಣುಗಳು ಹಾಲಿನೊಳಕ್ಕೋಗಿ ಮಾಯವಾಗುವತನಕ ಆ ಮಾದರಿ ಜೋಡಿಯನ್ನು ತದೇಕಚಿತ್ತದಿಂದ ನೋಡುತ್ತವೆ.

ಆ ಜೋಡಿ ಒಳಕ್ಕೋದ ತಕ್ಷಣ ಕಾರು ಮತ್ತೆ ಹಿಂದಕ್ಕೆ ತಿರುಗಿಕೊಂಡು ಹತ್ತಿರದ ಸಾರ್ವಜನಿಕ ಟೆಲಿಫೋನ್ ಬೂತ್ ಒಂದರ ಹತ್ತಿರ ನಿಂತುಕೊಳ್ಳುತ್ತದೆ. ಕಾರಿನಿಂದ ಹೊರಗಿಳಿದ ಮನುಷ್ಯ ಒಂದು ರೂಪಾಯಿ ನಾಣ್ಯ ತೆಗೆದುಕೊಂಡು ಡಯಲ್ ತಿರುಗಿಸಿ, ಆ ಕಡೆಯಿಂದ ರಿಸೀವರ್ ತೆಗೆದುಕೊಂಡು ಹಲೋ ಎಂದಾಗ ನಾಣ್ಯವನ್ನು ಒಳಕ್ಕಾಕಿ ಮಾತನಾಡುತ್ತಾನೆ.



ಪ್ರಾಚಿ ಮತ್ತು ಪವನ್ ರಾತ್ರಿ ೯.೩೦ಕ್ಕೆ ಮನೆ ಸೇರಿಕೊಳ್ಳುತ್ತಾರೆ. ಮತ್ತೊಂದು ರಾತ್ರಿ ಮಿರಮಿರನೆ ಹೊಳೆಯುವ ಕೇಶರಾಶಿ ಹಾಸಿಗೆಯ ಮೇಲೆ ಬಿಚ್ಚಿಕೊಳ್ಳುತ್ತದೆ. ಹುಣ್ಣಿಮೆ ಚಂದ್ರನ ನೋಡಿದ ಸಮುದ್ರ, ದಡಗಳಿಗೆ ಅಪ್ಪಳಿಸಿ ಅಪ್ಪಳಿಸಿ ನೊರೆ ಉಕ್ಕಿಸುತ್ತದೆ. ಬೆಳಗ್ಗೆ ೯.೦೦ ಗಂಟೆಗೆ ಪವನ್ ಪ್ರಾಚಿಗೆ ದಿನನಿತ್ಯ ಕೊಡುವ ಕೊಡುಗೆಯನ್ನು ಕೊಟ್ಟು ಕಚೇರಿಗೆ ಹೋಗುತ್ತಾನೆ.

೧೦.೦೦ ಗಂಟೆಗೆ ಟೆಲಿಫೋನ್ ಕಚೇರಿಯ ನೌಕರ ಬಂದು ಹಾಂಗ್‌ಕಾಂಗ್‌ನಿಂದ ತಂದೆ ಲೇಟಸ್ಟ್ ಫೋನ್ ರಿಸೀವರನ್ನು ಅಳವಡಿಸಿ ಹೋಗುತ್ತಾನೆ.



ಪವನ್ ತನ್ನ ಕಚೇರಿಯಲ್ಲಿ ಕುಳಿತು ಯಾವುದೋ ಫೈಲನ್ನು ನೋಡುತ್ತಿದ್ದಾನೆ. ಅದೇ ಸಮಯಕ್ಕೆ ಅದೇ ಮೇಜಿನ ಎಡಗಡೆ ಇದ್ದ ಟೆಲಿಫೋನ್ ಟ್ರಿಣ್ ಟ್ರಿಣ್ ಎಂದು ಗಂಟೆ ಬಾರಿಸುತ್ತದೆ.

ಅವನ ಎದೆಯ ಆಳದಲ್ಲಿ ಅಡಗಿದ್ದ ಜ್ವಾಲಾಮುಖಿ ಒಮ್ಮೆಲೆ ಸ್ಫೋಟನೆಗೊಂಡಂತಾಗಿ ಯಾವುದೋ ಗೊತ್ತಿರದ ಪರೀಕ್ಷೆಯನ್ನು ಎದುರಿಸಲು ಸಿದ್ಧತೆಗೊಂಡಂತೆ ಟೆಲಿಫೋನ್ ಕಡೆಗೊಮ್ಮೆ ವೀಕ್ಷಿಸಿ ಎಡಕೈಯಿಂದ ಫೋನ್ ರಿಸೀವರ್ ತೆಗೆದುಕೊಂಡು ಹಲೋ... ಪವನ್ ಎನ್ನುವುದರೊಳಗೆ

"ನನ್ನ ಅವಸರ ಇಲ್ಲ ಎನಿಸುತ್ತದೆ" ಅದೇ ಮಧುರ ಸ್ವರ, ಜೊತೆಗೆ ಕಿಲಕಿಲ ನಗು.

"ಮೇ ಐ ನೋ ಯುವರ್ ನೇಮ್ ಪ್ಲೀಸ್" ಎನ್ನುತ್ತಾನೆ.

"ಧಾರಾಳವಾಗಿ ಆದರೆ ಹೆಸರು ತಿಳಿದುಕೊಂಡು ಏನು ಮಾಡ್ತೀರ ? ಬೆಂಗಳೂರಿನಲ್ಲಿ ನನ್ನ ಹೆಸರಿನ ನೂರಾರು ಹೆಣ್ಣುಗಳಿರಬಹುದು..."

ಹೇಗಾದರೂ ಆಗಲಿ... ನೀವು ನನ್ನನ್ನು ಇದಕ್ಕೆ ಮುಂದೆ ಏಕವಚನದಲ್ಲಿ ಮಾತನಾಡಿಸಿದ್ದಕ್ಕೆ ವಂದನೆಗಳು. ಆದರೆ ಬೇರೆ ಯಾರೂ ನನ್ನನ್ನು ಏಕವಚನದಲ್ಲಿ ಕರೆಯುವುದು ಇಷ್ಟ ಪಡುವುದಿಲ್ಲ".

"ನಿಮಗೆ ನನ್ನಿಂದ ಬೇಕಾದುದು ಏನು ?"

"ನೋ ನಿನಗೆ ಎಂದೇಳಿ" ಮತ್ತೊಮ್ಮೆ ಕಿಲಕಿಲ ನಗು. ಆ ನಗು ಅವನನ್ನು ಛೇಡಿಸಿದಂತಿತ್ತು. "ನಿಮ್ಮಿಂದ ನನಗೆ ಬೇಕಾದದ್ದು ಬಹಳವಿದೆ".

"ನನಗೇನೂ ಅರ್ಥವಾಗುತ್ತಿಲ್ಲ".

"ಮೊದಮೊದಲು ಎಲ್ಲವೂ ಹಾಗೇನೆ. ತಾಯಿಯ ಗರ್ಭದಿಂದ ಹೊರಕ್ಕೆ ಬಂದ ಮಗುವಿನ ಹಾಗೆ, ಹೋಗಲಿ ಒಂದು ಸಣ್ಣ ಪ್ರಶ್ನೆ ಕೇಳಬಹುದೆ ?"

"ಕೇಳಿ ಆದರೆ ಒಂದು ಷರತ್ತು. ನಾನು ಉತ್ತರ ಹೇಳಿದರೆ ನಿನ್ನ ವಿಳಾಸ ಹೇಳಬೇಕು" ಅಷ್ಟು ಅವಸರವೆ ? ಎಂದುಕೊಂಡ ಅವಳು "ಮನೆ ಪೂರ್ತಿ ವಿಳಾಸ

ಹೇಳುವುದಿಲ್ಲ. ಆದರೆ ನನ್ನನ್ನು ಹುಡುಕುವುದಕ್ಕೆ ಸುಳಿವು ಕೊಡುತ್ತೇನೆ" ಎಂದಳು. ಪವನ್ "ಆಗಲಿ" ಎಂದ.

"ಜೂನ್ ತಿಂಗಳಲ್ಲಿ ಸರಾಸರಿ ೫ ಡಿಗ್ರಿ ಸೆ. ನಿಂದ ೧೫ ಡಿಗ್ರಿ ಸೆ. ಒಳಗಡೆ ತಾಪಮಾನ ಇರುವ ಒಂದು ದೊಡ್ಡ ನಗರವೇಳಿ (ನಮ್ಮ ದೇಶದಲ್ಲಿಲ್ಲ) ೧೦ ಸೆಕೆಂಡ್ಸ್ ಸಮಯ" ಹೇಳದೆ ಹೋದರೆ "ನಿಮ್ಮ ಜೊತೆ ಒಂದು ತಿಂಗಳು ಮಾತನಾಡುವುದಿಲ್ಲ".

"ಹೇಳಿದರೆ?"

"ಪಂದ್ಯ ಇದ್ದೇ ಇದೆಯಲ್ಲಾ".

ಒಂದು... ಆ ಕಡೆಯಿಂದ ಸ್ಟಾಪ್ ಸಮಯದ ಎಣಿಕೆ ಶುರುವಾಯಿತು. ಪವನ್‌ನ ಜ್ಞಾನ ಒಮ್ಮೆಲೆ ಉರಿಯತೊಡಗಿತು.

"ಜೂನ್ ತಿಂಗಳಲ್ಲಿ ಭಾರತ ಬಿಸಿಲು ಬೇಗೆಯಲ್ಲಿ ತಲ್ಲಣಿಸುತ್ತದೆ ಎಂದುಕೊಳ್ಳೋಣ. ಸಮಭಾಜಕ ವೃತ್ತದಿಂದ ಉತ್ತರಕ್ಕಿರುವ ಭಾರತದಲ್ಲಿ ಸೂರ್ಯನ ಕಿರಣಗಳ ಪ್ರಭಾವ ಹೆಚ್ಚಿಗೆ ಇದ್ದರೆ ದಕ್ಷಿಣ ಧ್ರುವದಲ್ಲಿ ಸೂರ್ಯನ ಕಿರಣಗಳು ಬೀಳದೆ ಹೆಪ್ಪುಗಟ್ಟಿದ ಕಪ್ಪುಗತ್ತಲು. ದಕ್ಷಿಣ ಧ್ರುವದ ಹತ್ತಿರವಿರುವ ದೇಶಗಳು ದಕ್ಷಿಣ ಅಮೇರಿಕಾ, ದಕ್ಷಿಣ ಆಫ್ರಿಕಾ, ಆಸ್ಟ್ರೇಲಿಯ, ಮೆಲ್‌ಬೋರ್ನ್" ಎಂದ.

ಹೌಹಾರಿದ ಸ್ಟಾಪ್ ಎಣಿಕೆ ಕೇವಲ ೬ ಸೆಕೆಂಡಗಳಲ್ಲೇ ಸೋಲೊಪ್ಪಿಕೊಂಡು "ಒಂದು, ಎರಡು, ಮೂರರಲ್ಲಿ ಒಂದನ್ನ ಆಯ್ಕೆ ಮಾಡಿಕೊಳ್ಳಿ ನನ್ನ ಹೆಸರು, ಮನೆ ಸಂಖ್ಯೆ ನನ್ನ ಎತ್ತರ ಚಪ್ಪಲಿ ಇಲ್ಲದೆ" ಎಂದಳು.

ಎತ್ತರ ಮತ್ತು ಕೊನೆಯ ಸಂಖ್ಯೆಗಳ ಆಧಾರದ ಮೇಲೆ ಹುಡುಕುವುದಾದರೆ ಬಹಳ ಕಷ್ಟವೆಂದುಕೊಂಡ ಪವನ್ "ನಿನ್ನ ಹೆಸರು" ಎಂದ.

ಸ್ವರ ಸ್ವಲ್ಪ ಸಡಿಲಗೊಂಡಂತೆ "ನನ್ನ ಹೆಸರಲ್ಲಿ ಆರು ಇಂಗ್ಲಿಷ್ ಅಕ್ಷರಗಳಿವೆ. ಆ ಅಕ್ಷರಗಳಿಗೆ ೧ ರಿಂದ ೨೬ ಅಂಕಿಕೊಟ್ಟು ಕೂಡಿದಾಗ ೨೬ ಬರುತ್ತವೆ. ಅದನ್ನು ಮತ್ತೆ ಒಂದು ಮತ್ತು ಎರಡನೇ ಅಕ್ಷರದ ಸಂಖ್ಯೆಗಳಿಂದ ಕಳೆದಾಗ ೨೨ ಅಂಕಗಳು ಬರುತ್ತವೆ. ಇನ್ನೊಂದು ವಿಷಯ ಟೆಲಿಫೋನ್‌ನಲ್ಲಿ ನನ್ನ ವಾಯ್ಸ್ ರೆಕಾರ್ಡ್ ಮಾಡಿಕೊಳ್ಳಬಾರದು, ಮಾಡಿಕೊಂಡು ನನ್ನನ್ನು ಟೆಲಿಫೋನ್ ಮುಖಾಂತರ ಬೆನ್ನಟ್ಟಬಾರದು. ಹಾಗೇನಾದರೂ ಮಾಡಿದ್ದಲ್ಲಿ ನಮ್ಮಿಬ್ಬರ ಮಧ್ಯದ ಷರತ್ತು ಮುರಿದಂತೆಯೇ? ಸರಿಯಾಗಿ ೧೦ ನಿಮಿಷ ಸಮಯ ಕೊಡುತ್ತೇನೆ" ಲೈನ್ ಮುರಿದುಕೊಂಡಿತು. ಪವನ್‌ಗೆ ಜೀವ ಹೋದಂತಾಯಿತು.

ಪವನ್ ಸುಮಾರು ಹತ್ತು ಬಿಳಿ ಕಾಗದಗಳನ್ನು ತೆಗೆದುಕೊಂಡು ೧ ರಿಂದ ೨೬ರ ಸಂಖ್ಯೆಗಳ ಕೆಳಗೆ ಎ ಯಿಂದ ಜೆಡ್ ವರೆಗೆ ಅಕ್ಷರಗಳನ್ನು ಚಕಚಕನೆ ಬರೆದು ಎ ಯಿಂದ ಜೆಡ್ ವರೆಗಿನ ಅಕ್ಷರಗಳಲ್ಲಿ ಒಂದೊಂದೇ ಹೆಣ್ಣುಗಳ ಹೆಸರನ್ನು ಬರೆಯುತ್ತಾ ಹೋದ.

ಪ್ರಶ್ನೆ ಬಹಳ ಸುಲಭವಾಯಿತೋ ಏನೋ ಎಂದುಕೊಳ್ಳುತ್ತಾ ತನ್ನ ಸ್ವಾಫ್ ಗಡಿಯಾರವನ್ನು ನೋಡಿಕೊಳ್ಳುತ್ತಾ ಕುಳಿತಿದ್ದಾಳೆ ಒಂದು ಸುಂದರ ಹೆಣ್ಣು. ಬಿಳಿ ಹಾಳೆಗಳ ಮೇಲೆ ಆರಕ್ಷರಗಳ ಸುಮಾರು ಹೆಸರುಗಳನ್ನು ಒಂದೊಂದಾಗಿ ಬರೆದು ತಕ್ಷಣ ೧ ರಿಂದ ೨೬ ಸಂಖ್ಯೆಗಳನ್ನು ಸೇರಿಸಿ ಕೂಡಿದಾಗ ೨೬ ಬರದೆ ಹೊಡೆದು ಹಾಕುತ್ತಾ ಹೋದ. ಇನ್ನೂ ೨೬ ಬಂದ ಮೇಲೆ ೧ ಮತ್ತು ೨ ನೇ ಅಕ್ಷರವನ್ನು ಕಳೆದಾಗ ೨೨ ಸಂಖ್ಯೆ ಬರುವ ಸಮಯ ಬಹಳ ದೂರವಿದೆ ಎಂದುಕೊಂಡರು ತನ್ನ ಜ್ಞಾನವನ್ನೆಲ್ಲಾ ಕೂಡಾಕಿ ಸಂಖ್ಯೆಗಳ ಜೊತೆ ಯುದ್ಧ ನಡೆಸುತ್ತಿದ್ದಾನೆ.

ಸಮಯ ಚಕಚಕನೆ ಉರುಳುತ್ತಿದೆ.

ನಾಚಿಕೆ ಅಪಮಾನ ಎಲ್ಲವೂ ಅವನ ಒಳಗಿಂದ ಹೊಮ್ಮಿಕೊಂಡು ಮುಖದ ಮೇಲೆಲ್ಲಾ ಬೆವರಾಗಿ ಹನಿಯುತ್ತಿದೆ. ಮಧ್ಯದಲ್ಲಿ ಆಗಾಗ ಸಮಯ ನೋಡಿಕೊಳ್ಳುತ್ತಿದ್ದಾನೆ. ಟೆಲಿಫೋನ್ ಹೊಡೆದುಕೊಂಡಿತು. ಪವನ್ ಒಂದೆರಡು ಕ್ಷಣಗಳನ್ನು ಬಿಟ್ಟು ಫೋನ್ ರಿಸೀವರನ್ನು ಕೈಗೆ ತೆಗೆದುಕೊಂಡ.

"ನಾನೇ, ಉತ್ತರ ಬೇಕು".

ಪವನ್ ಅಪಮಾನ ತುಂಬಿದ ಸ್ವರದಲ್ಲಿ "ಸಾರಿ" ಎಂದ.

"ಆಗಲಿ, ಬರುವ ವಾರ ಇದೇ ಸಮಯ. ಅದುವರೆವಿಗೂ ಶುಭ ಕೋರುವ ನಿನ್ನ ೨೬" ಲೈನ್ ಮತ್ತೊಮ್ಮೆ ಮುರಿದುಕೊಂಡಿತು.

ಪವನ್ ಅರೆಕ್ಷಣ ತಬ್ಬಿಬ್ಬಾದವನಂತೆ ಸುತ್ತಲೂ ನೋಡಿದ. ನಿಮ್ಮಿಂದ ಬೇಕಾದದ್ದು ಬಹಳ ಇದೆ ಜ್ಞಾಪಿಸಿಕೊಳ್ಳುತ್ತಾನೆ. ಈ ರೀತಿಯ ಅಪಮಾನ ಅವನಿಗೆ ಸರಿ ಹಿಡಿಸಲಿಲ್ಲವಾದರೂ ಅವಳ ಜೊತೆ ಮಾತನಾಡುವುದಕ್ಕೆ, ಅವಳ ಜೊತೆ ಬೆರೆತು ಹೋಗುವುದಕ್ಕೆ ಯಾವುದೋ ಒಂದು ರೀತಿಯ ಕುತೂಹಲ, ತವಕ, ಪ್ರೀತಿ ಕುದಿಯುತ್ತಿದೆ ಅವನ ಒಳಗೆ.

ರುಚಿ ಫೈಲ್ ಒಂದನ್ನು ತೆಗೆದುಕೊಂಡು ಒಳಕ್ಕೆ ಪ್ರವೇಶಿಸುತ್ತಾಳೆ. ಪವನ್ ತನ್ನ ತಳಮಳವನ್ನು ವ್ಯಕ್ತಪಡಿಸದಂತೆ ಮುಖದ ಸ್ನಾಯುಗಳನ್ನು ಬದಲಿಸಿಕೊಳ್ಳುತ್ತಾನೆ. ರುಚಿ ತನ್ನ ಕೆಲಸ ಮುಗಿಸಿಕೊಂಡು ಪವನ್ ಕೋಣೆಯಿಂದ ಹೊರಗಡೆ ಬರುತ್ತಾಳೆ.

ಹಿಂದಿನಿಂದ ಪವನ್, ರುಚಿಯನ್ನು ಮಾಮೂಲಿಯಾಗಿ ತಾನು ನೋಡುವ ಭಾವನೆಯಿಂದಲೇ ನೋಡುತ್ತಿದ್ದಾನೆ. ಆದರೆ ಅವನ ಭಾವನೆಗಳು ಚೂರುಚೂರಾದ ಅಪೂರ್ಣ ನಕ್ಷತ್ರಗಳಂತೆ ಬಿಡಿ ಬಿಡಿ ಆಗುತ್ತವೆ.

ಆಗ ಮತ್ತೊಮ್ಮೆ ಫೋನ್ ಮೊಳಗಿತು. ಹೃದಯ ಸಣ್ಣಗೆ ಕಂಪಿಸಿದಂತಾಗಿ ಫೋನ್ ರಿಸೀವರನ್ನು ಕೈಗೆ ತೆಗೆದುಕೊಂಡು "ಹಲೋ... ಪವನ್ ಮಾತನಾಡುವುದು".

"ಪವನ್ ನಾನು ಮಾತನಾಡುವುದು ಆ ಪೋಲಿ ಫೋನ್ ಮಾಡಿದ್ದ"

"ಏನು ಮಾತನಾಡಿದ ?"

"ಅದೇ ಮೊದಲು ದಿನ ಮಾತನಾಡಿದ ಹಾಗೆ ನನಗೇನೋ ಭಯ ಆಗುತ್ತೆ".

ಧ್ವನಿ ಬೇರೆ ತರಾ ಇದೆ. "ನಾನು ರೆಕಾರ್ಡ್ ಮಾಡಿಕೊಂಡರು ಪ್ರಯೋಜನವಿಲ್ಲ. ನಾನು ಬಾಯಲ್ಲಿ ಒಂದು ರೂಪಾಯಿ ಕಾಯಿನ್ ಇಟ್ಟುಕೊಂಡಿದ್ದೇನೆ" ಎಂದ. ನಾನು ಫೋನ್ ಇಟ್ಟುಬಿಟ್ಟೆ, ಮತ್ತೆ ಮಾತನಾಡುತ್ತಾನೋ ಏನೋ ಭಯಾ ಆಗುತ್ತೆ ಪವನ್ ನೀವು ಸಾಧ್ಯವಾದರೆ ಬಂದು ಬಿಡಿ" ಎಂದಳು.

"ಪ್ರಾಚಿ ಇಷ್ಟಕ್ಕೆಲ್ಲಾ ಭಯಪಟ್ಟರೆ ನಾವು ಇರುವುದಕ್ಕೇ ಸಾಧ್ಯವಿಲ್ಲ. ನೀನೇನೂ ಭಯ ಪಡಬೇಡ, ನಾನು ಸಾಯಂಕಾಲ ಬೇಗ ಬಂದುಬಿಡುತ್ತೇನೆ. ಆಮೇಲೆ ಮಾತನಾಡೋಣ ಫೋನ್ ಇಡಲೇ ?"

"ಆಯಿತು ನೀವು ಬೇಗ ಬನ್ನಿ" ಎಂದ ಪ್ರಾಚಿ ಫೋನ್ ಕ್ರೆಡಲ್ ಮೇಲಿಟ್ಟು "ರಾಮು" ಎಂದು ಸೇವಕನನ್ನು ಕರೆದಳು.

ರಾಮು ಒಳಬಂದ. ಒಂದು ಕಪ್ಪು ಕಾಫಿ ತರುವಂತೆ ಹೇಳಿದಳು. ಅವನ ಮನ ಯಾವುದರ ಮೇಲೆಯೂ ಕೇಂದ್ರಿತವಾಗದೆ ತಳಮಳಗೊಂಡಿದೆ. ದಿನದ ಆಕಾಶದಲ್ಲಿ ನಕ್ಷತ್ರಗಳು ಚದರಿ ಮಾಯವಾದಂತಿವೆ.

The kiss is reverberating

electrifying spark, voluptuous

sensation...

ಬೆಂಗಳೂರಿನ ಸಾಯಂಕಾಲ ಪ್ರಿಯತಮೆಯ ಮಡಿಲಂತಿದೆ. ರಸ್ತೆಗಳು ಯೌವ್ವನವನ್ನು ತುಂಬಿಕೊಂಡು ಸೌಂದರ್ಯವನ್ನು ಹೊಮ್ಮಿಸುತ್ತಿವೆ. ಬೆಂಗಳೂರಿನ ಕೆಲವು ಹುಡುಗಿಯರು ಆಕಾಶದಲ್ಲಿನ ಮಿಂಚಿನಂತೆ ನಡೆದರೆ, ಮತ್ತೆ ಕೆಲವರು

ಸಮುದ್ರದ ಅಲೆಗಳಂತೆ ಭೋರ್ಗರೆಯುತ್ತಿದ್ದಾರೆ, ಇನ್ನೂ ಕೆಲವರು ಶಿಖರಗಳ ಮೇಲಿನ ಮುಗಿಲುಗಳಂತೆ ಚಲಿಸುತ್ತಿದ್ದಾರೆ.

ಈ ಹೆಣ್ಣುಗಳ ಸುತ್ತಲೂ ಕಾಮ ವಿದ್ಯುತ್ತಿನ ತರಂಗಗಳನ್ನು ಮೈತುಂಬಾ ತುಂಬಿಕೊಂಡು ನಡೆದಾಡುತ್ತಿರುವ ಗಂಡು ಸಮೂಹಕ್ಕೆ ಆ ಹೆಣ್ಣುಗಳ ದೇಹ ವಸ್ತ್ರ ಸೋಕಿದರೂ ಸಾಕು, ಬೆಳದಿಂಗಳನ್ನು ಅದ್ದಿ ನವಿಲುಗರಿಯಿಂದ ಸ್ಪರ್ಶಿಸಿದಂತೆ ಉಲ್ಲಾಸರಾಗುತ್ತಾರೆ.

ನಮ್ಮ ನಾಯಕ ಹೀರೋ, ಅಲಿಯಾಸ್ ಚಿರಂಜೀವಿ ಅಲಿಯಾಸ್ ಉದಯ್ ಕಾರಿನ ಡ್ರೈವಿಂಗ್ ಆಸನದಲ್ಲಿ ಕುಳಿತು ಸ್ಟೀರಿಂಗನ್ನು ಮೃದುವಾಗಿ ತಿರುಗಿಸುತ್ತಾ ಕಾರನ್ನು ಚಲಿಸುತ್ತಿದ್ದಾನೆ.

ಮನೆಯಿಂದ ಹೊರಡುವ ಮುಂಚೆಯೇ ತನಗೆ ಅಗತ್ಯವಾದ ವಸ್ತುಗಳನ್ನು ಜೇಬಿನಲ್ಲಿಟ್ಟುಕೊಂಡು ಬಂದಿದ್ದಾನೆ. ಅಷ್ಟೇ ಅಲ್ಲ, ತನ್ನ ಸ್ವಹಸ್ತ ಲೇಖನದಲ್ಲಿ ಏನೋ ಬರೆದುಕೊಂಡು ಬಂದು ಸಂಖ್ಯೆಗೆ ಗುರ್ತಿಟ್ಟಿದ್ದಾನೆ. ಇಂಗ್ಲಿಷ್ ಭಾಷೆಯ ಕೆಲವು ಸಂಖ್ಯೆಗಳು ಅವನಿಗೆ ಒಳ್ಳೆ ಅದೃಷ್ಟವೆನಿಸುತ್ತವೆ. ಅವನು ಏನೇ ಕೆಲಸ ಕೈಗೊಂಡಾಗಲು ಸಂಖ್ಯೆಗಳ ತಾಳಮೇಳವನ್ನು ಸೂಕ್ಷ್ಮವಾಗಿ ಗಮನಿಸುತ್ತಾನೆ.

ಈಗಾಗಲೇ ಅದೇ ವೃತ್ತದಲ್ಲಿನ ಕೆಲವು ಮಲ್ಟಿಪ್ಲೆಕ್ಸ್ ಕಾಂಪ್ಲೆಕ್ಸ್‌ಗಳಲ್ಲಿ ಆಗಾಗ ಅವನ ಕಣ್ಣುಗಳ ಎದುರಿಗಿರುವ ಒಂದು ಹೆಣ್ಣು ಅವನ ಪಟ್ಟಿಯಲ್ಲಿದ್ದಾಳೆ. ಬಹಳ ನಾಜೂಕಾದ ಮತ್ತು ಆಕರ್ಷಕವಾದ ಹೆಣ್ಣು. ಕಾರನ್ನು ಪಾರ್ಕಿಂಗ್ ಮಾಡಿ ಬೀಗದ ಕೈಗೊಂಚಲನ್ನು ಜೇಬಿಗೆ ಸೇರಿಸಿ ಒಂದು ಸಿಗರೇಟ್ ತೆಗೆದು ತುಟಿಗಳಲ್ಲಿ ಸಿಕ್ಕಿಸಿಕೊಂಡು ಸಿಗಾರ್ ಇರುವ ಜೇಬಿಗೆ ಕೈ ಹಾಕುತ್ತಾನೆ. ಮತ್ತೊಂದು ಜೇಬಿನಲ್ಲೂ ಹುಡುಕುತ್ತಾನೆ. ಅಲ್ಲಿಯೂ ಇಲ್ಲದೆ ಎದುರಿನ ಪೆಟ್ಟಿಗೆ ಅಂಗಡಿಯಲ್ಲಿ ಬೆಂಕಿ ಪೊಟ್ಟಣ ತೆಗೆದುಕೊಂಡು ಸಿಗರೇಟ್ ಹೊತ್ತಿಸಿಕೊಂಡು ಒಂದೆರಡು 'ಫಪ್' ಉಗುಳುತ್ತಾನೆ.

ಬೆಂಗಳೂರಿನ ವಿದ್ಯುತ್ ದೀಪಗಳು ತಮ್ಮ ಸುತ್ತಮುತ್ತಲಿನ ವಸ್ತುಗಳ ಮೇಲೆ ಬೆಳಕನ್ನು ಚೆಲ್ಲಿ ತಮ್ಮ ಇರುವಿಕೆಯನ್ನು ಎತ್ತಿ ತೋರಿಸುತ್ತಿವೆ. ಓಡಾಡುವ ಜನ ಮತ್ತು ವಾಹನಗಳು ತಮ್ಮ ಜೊತೆ ಹಲವಾರು ಗಿಡ್ಡ ಉದ್ದ ಛಾಯೆಗಳನ್ನೊತ್ತು ಸಾಗುತ್ತಿವೆ. ಒಬ್ಬೊಬ್ಬರ ಮುಖಗಳು, ಅವರು ಧರಿಸಿರುವ ವಸ್ತುಗಳು ವಿಧವಿಧ ರೇಖಾಕೃತಿಗಳಾಗಿ ವಿಚಿತ್ರ ನೆರಳು ಬೆಳಕಿನ ಚಿತ್ರಗಳಾಗಿ ತೋರುತ್ತಿವೆ.

ಹೀರೋ ಕೆಲವು ರೇಖಾಕೃತಿಗಳನ್ನು ಆಯ್ಕೆ ಮಾಡಿಕೊಂಡು ಅವುಗಳ ಸಾರಾಂಶವನ್ನೆಲ್ಲಾ ಹೀರಿಕೊಂಡಂತೆ ಸಿಗರೇಟ್ ಹೊಗೆಯನ್ನು ಎಳೆದುಕೊಂಡು ಬೇಡವಾದದ್ದನ್ನು ಹೊರಕ್ಕೆ ಚೆಲ್ಲುವಂತೆ ಹೊಗೆಯನ್ನು ಉಗುಳುತ್ತಿದ್ದಾನೆ.

ಹೆಣ್ಣುಗಳನ್ನು ವಾಚ್ ಮಾಡುವುದೊಂದು ಕರಗತ ಕಲೆಯಾಗಿ ಮಾಡಿಕೊಂಡಿರುವ ಹೀರೋ ಬಹಳ ದಿನಗಳಾದ ಮೇಲೆ ನಿಜವಾಗಿಯೂ ಅದರ ಆನಂದವನ್ನು ಅನುಭವಿಸುತ್ತಿದ್ದಾನೆ.

ಹೆಣ್ಣು-ಗಂಡು ಎನ್ನುವ ಭೇದವಿಲ್ಲದೆ ಜನ ಒಂದೇ ಸಮನೆ ನಡೆದಾಡುತ್ತಿದ್ದಾರೆ. ಹೀರೋ ಸಿಗರೇಟನ್ನು ಕೆಳಕ್ಕಾಕಿ ಕಾಲಿನಿಂದ ಹೊಸಕಿ ಕೊನೆಯ ಪಫ್‌ನ ಆನಂದವನ್ನು ಅನುಭವಿಸುತ್ತಿದ್ದಾನೆ. ಎಡಕೈಯನ್ನು ಪ್ಯಾಂಟ್ ಜೇಬಿನೊಳಕ್ಕೆ ತೂರಿಸಿ ಬಲಕೈಯಿಂದ ತನ್ನ ಗಡ್ಡವನ್ನೊಮ್ಮೆ ಸವರಿಕೊಳ್ಳುತ್ತಾನೆ. ಹೆಪ್ಪುಗಟ್ಟಿದ ಯೋಚನೆಗಳೆಲ್ಲ ಅವನ ಗಡ್ಡದಿಂದ ಹೊರಕ್ಕೆ ಜಿಗಿಯುತ್ತಿವೆ. ಅದೊಂದು ಅತ್ಯಾಧುನಿಕ ಸಾಮಾನುಗಳು ಸಿಗುವ ಕಾಂಪ್ಲೆಕ್ಸ್ ಒಳಕ್ಕೆ ನಡೆಯುತ್ತಾನೆ.

ಅವನ ಅದ್ಭುತ ಪರಿಪೂರ್ಣ ಪುರುಷ ಲಕ್ಷಣವನ್ನು ನೋಡಿದ ಕೆಲವು ಹೆಂಗಸರು ಮತ್ತೆ ಮತ್ತೆ ಅವನ ಮೇಲೆ ನೋಟವನ್ನು ಕೇಂದ್ರೀಕರಿಸುತ್ತಾರೆ. ಕೆಲವು ಗಂಡಸರೂ ಸಹ ಅವನ ಕಡೆ ಜಲಸಿಯಿಂದ ನೋಡುತ್ತಾರೆ.

ಕೆಲವರ ನೋಟವನ್ನು ಗಮನಿಸಿದ ಹೀರೋ ಇಲ್ಲಿಗೆ ಬರಬಾರದಿತ್ತೇನೋ ಎನ್ನುವಂತೆ ತನಗೆ ತಾನೇ ಛೀಮಾರಿ ಹಾಕಿಕೊಳ್ಳುತ್ತಾ ಹೆಜ್ಜೆಗಳನ್ನು ತಾನು ನಡೆಯುವ ಅಳತೆಗಿಂತ ತುಸು ಉದ್ದವಿಟ್ಟು ನಡೆಯುತ್ತಾ ಹೊರಕ್ಕೆ ಬರುತ್ತಿದ್ದಾನೆ.

ಅದೇ ಸಮಯಕ್ಕೆ, ಅವನಿಗಿಂತ ಸುಮಾರು ಹತ್ತು ಅಡಿಗಳ ದೂರದಲ್ಲಿ ಇದಕ್ಕೆ ಮುಂಚೆಯೇ ಕೆಲವು ಸಲ ಅವನ ನೋಟ ಎದುರಿಸಿರುವ ಹೆಣ್ಣು ಬರುತ್ತಿದ್ದಾಳೆ. ಆದರೆ ಮುಂಚೆ ಈ ಉಡುಪಿನಲ್ಲಿ ಎಂದೂ ಅವಳನ್ನು ನೋಡಿರಲಿಲ್ಲ. ಕಪ್ಪು ಕನ್ನಡಕ ಕಣ್ಣುಗಳನ್ನು ಮುಚ್ಚಿದೆ. ದೊಗಳೆ ಅಂಗಿ, ಸರಳವಾದ ಮುಖ, ಜನರ ಓಡಾಟ ಜಾಸ್ತಿಯಾದುದರಿಂದ ಅವಳ ಪೂರ್ತಿ ರೂಪ ಕಾಣಿಸಲಿಲ್ಲ. ಎತ್ತರವಾದ ದೇಹ ಜೊತೆಗೆ ದೃಢವಾದ ಭುಜಗಳು, ಒಂದು ಕೋನದಲ್ಲಿ 'ಬ್ರೂಕ್ ಶೀಲ್ಡ್'ಗೆ ಹೋಲುತ್ತಿದ್ದು, ನೇರವಾದ ಮೂಗು, ಹೊಳೆಯುವ ಕಣ್ಣುಗಳು, ಅವಳ ಸೌಂದರ್ಯಕ್ಕೆ ಅರೆಕ್ಷಣ ತಬ್ಬಿಬ್ಬಾದ ಹೀರೋ ಯಾವ ರೀತಿಯ ಭಾವನೆಗಳನ್ನು ಮುಖದಲ್ಲಿ ತುಂಬಿಕೊಳ್ಳಬೇಕೆನ್ನುವುದೇ ಮರೆತು ಅವಳ ಕಡೆ ನೋಡುತ್ತಲೇ ಇದ್ದುಬಿಟ್ಟ.

ಮತ್ತೊಂದು ಕ್ಷಣದಲ್ಲಿ ತನ್ನ ಮುಖದಲ್ಲಿನ ಭಾವನೆಗಳನ್ನು ಊಸರವಳ್ಳಿಯಂತೆ ಮಾರ್ಪಡಿಸಿಕೊಂಡು ತನ್ನ ಕಣ್ಣುಗಳಲ್ಲಿನ ಕಾಮ ತೇಜಸ್ಸನ್ನು ಅವಳ ಮೇಲೆ ಚೆಲ್ಲಿದ. ಹೀರೋನನ್ನು ಬಹಳ ಹತ್ತಿರದಿಂದ ನೋಡಿದ ಅವಳ ಕಣ್ಣುಗಳು ಆಶ್ಚರ್ಯದಿಂದ ಹೊತ್ತಿಕೊಂಡವು ಉಜ್ವಲವಾಗಿ. ಹೀರೋ ಹತ್ತಿರ ಹತ್ತಿರ ಬರುತ್ತಿದ್ದಂತೆ ಬಹಳ ಸಭ್ಯತೆಯಿಂದ ಅವಳೆ ಕಡೆಗೊಂದು ಮನೋಹರವಾದ ನೋಟ ಬೀರಿದ.

ಯಾವ ಆಕರ್ಷಣೆ ಅವಳನ್ನು ಸೆಳೆದುಬಿಟ್ಟಿತೋ ? ಉತ್ತರ ಧ್ರುವದಲ್ಲಿರುವ ಅಯಸ್ಕಾಂತವೆಲ್ಲ ಎದ್ದು ನಿಂತಂತಾಗಿ ಅವನ ಸಭ್ಯತೆಗೆ ಇಲ್ಲವೆನ್ನುವಂತೆ ರಮ್ಯವಾಗಿ ನಕ್ಕಳು.

"ಹಲೋ" ಎಂದ ಅವನ ತುಟಿಗಳು ಅವಳನ್ನು ಇನ್ನಷ್ಟು ಹತ್ತಿರಕ್ಕೆ ಸೆಳೆದುಕೊಂಡುಬಿಟ್ಟವು. ಅವಳ ಕಾಲುಗಳು ಕಂಪಿಸಿ ಮುಂದಕ್ಕೆ ಸಾಗದೆ ಅಲ್ಲೇ ತೂರಾಡುತ್ತಾ ಏನೋ ಮಾಂತ್ರಿಕ ಶಕ್ತಿಗೆ ಸಿಕ್ಕಿದಂತಾಗಿ ನಿಂತುಬಿಟ್ಟವು.

"ಕ್ಷಮಿಸಿ, ನಿಮಗೆ ತೊಂದರೆ ಮಾಡಿದೆ".

ಹೀರೋ ಇನ್ನಷ್ಟು ಸಭ್ಯವಾಗಿ ಅವಳ ಕುತೂಹಲದ ಹೃದಯವನ್ನು ಮುಟ್ಟುವಂತೆ ಹೇಳಿದ. "ಪರವಾಗಿಲ್ಲ ನನ್ನ ಹೆಸರು ದರ್ಶನಾಸಿಂಗ್ ಅಂತ. ಒಂದು ಪ್ರತಿಷ್ಠ ಕಂಪನಿಯಲ್ಲಿ ರೀಸರ್ಚ್ ಮಾಡ್ತಾ ಇದ್ದೇನೆ" ಎಂದಳು.

"ಓ..." ಎಂದು ಹೌಹಾರಿದಂತೆ ನಟಿಸಿದ ಹೀರೋ.

"ಸೌಂದರ್ಯ ಮತ್ತು ಜ್ಞಾನ ಎರಡು ಸಮ್ಮಿಲನಗೊಂಡಿವೆ ಬಹಳ ಅದ್ಭುತವಾಗಿ" ಎಂದು ನಕ್ಕ. ನಾಚಿಕೆಗೊಂಡ ಅವಳ ಕಣ್ಣು ರೆಪ್ಪೆಗಳು ಚಿರಾಪುಂಜಿಯ ಚಿಟ್ಟೆಗಳಂತೆ ಹೊಡೆದುಕೊಂಡು ಅವನ ಕಡೆ ನೋಡಿದವು. ಆ ನೋಟ ಪ್ರೀತಿ ಮೊದಲ ನೋಟದಲ್ಲಿ ಎನ್ನುವಂತಿತ್ತು. ದುಷ್ಯಂತ ಮತ್ತು ಶಕುಂತಲ ಇಬ್ಬರೆ ಇದ್ದಾಗ ಆ ರೀತಿಯಾಗಿ ಆಗಿತ್ತು. ಆದರೆ ಇವರ ಸಮ್ಮಿಲನ ನೂರಾರು ಜನರ ಮಧ್ಯೆಯೇ ನಡೆದುಹೋಯಿತು.

"ನೀವು ದಯವಿಟ್ಟು ಶಾಪಿಂಗ್ ಮುಂದುವರಿಸಿ. ನಾನು ಬೇಕಾದರೆ ಹೊರಗಡೆ ನಿಲ್ಲುತ್ತೇನೆ" ಎಂದ ಹೀರೋ ಬಹಳ ವಿನಮ್ರವಾಗಿ ಅವಳಿಗೆ ದಾರಿಬಿಟ್ಟು ಹೊರಕ್ಕೆ ಬಂದು ನಿಂತುಕೊಂಡ.

ಅವನ ಅಂತರಾಳದಲ್ಲಿ ನೂರು ಚಿಟ್ಟೆಗಳು ಒಮ್ಮೆಲೆ ಓಡಾಡುತ್ತಿವೆ. ಎಷ್ಟೊಂದು ಅದ್ಭುತ ವಿನಯಶೀಲ ಪುರುಷ ಎಂದುಕೊಳ್ಳುತ್ತಿದೆ ಅವಳ ಮನ. ಆದರೂ ಇನ್ನೆಲ್ಲೋ ಅವಳ ಅಂತರಾಳದಲ್ಲಿ ಒಂದು ಸಣ್ಣ ವಿಷಮುಳ್ಳು ಅವಳ ಎದೆಯಲ್ಲಿ ಕುಕ್ಕುತ್ತಿದೆ.

ತನ್ನ ಪರಿಚಯ ಹೇಳಿದ ಅವಳು, ಅವನ ಪರಿಚಯ ಹೇಳಿದ ಮೇಲೆ ಹೇಳಬೇಕಾಗಿತ್ತು ಎಂದುಕೊಳ್ಳುತ್ತಾಳೆ. ಜಗಜಗಿಸುವ ಬೆಳಕಿನಲ್ಲಿ ಪ್ರತಿಯೊಂದು ವಸ್ತುವು ತನ್ನದೇ ಆದ ಒಂದು ರೂಪವನ್ನು ತುಂಬಿಕೊಂಡು ನೋಡುವವರ ಕಣ್ಣುಗಳಿಗೆ ಇನ್ನಷ್ಟು ಅಂದವಾಗಿ ಕಾಣಿಸುತ್ತಿವೆ.

ದರ್ಶನಾಳ ಊಹೆಗೆ ಯಾವ ವಸ್ತುವು ನಿಲುಕದಾಗ ಆದಷ್ಟು ಬೇಗ ಹೊರಕ್ಕೆ

ಹೋಗಬೇಕೆನಿಸುತ್ತದೆ. ಹೊರಗೆ ನಿಂತಿರುವ ಹೀರೋ ಮುಂದೆ ಬರುವ ಕ್ಷಣಗಳನ್ನು ಹೇಗೆ ಗೆಲ್ಲಬೇಕೆನ್ನುವ ಕಲ್ಪನೆಯಲ್ಲಿ ತೊಡಗಿದ್ದಾನೆ.

ಬೆಂಗಳೂರಿನ ಸಾಯಂಕಾಲ ಪಾರಿಜಾತ ಹೂಗಿಡದಿಂದ ಪರಿಮಳ ತುಂಬಿಕೊಂಡಿದೆ. ಕೇದಿಗೆ ಪೊದೆಯಲ್ಲಿ ಕೈ ಹಾಕುವುದೆಂದರೆ ಸುಲಭದ ಕೆಲಸವಲ್ಲ. ಹೀರೋ ಮತ್ತೊಮ್ಮೆ ತನ್ನ ನಿಲುವನ್ನು ಕಾರ್ಯರೂಪಗೊಳಿಸಬೇಕೋ ಇಲ್ಲವೋ ಎಂದು ಯೋಚಿಸುತ್ತಿದ್ದಾನೆ. ಈ ದಿನ ಇನ್ನಷ್ಟು ಸಭ್ಯವಾಗಿ ವರ್ತಿಸಿ ಅವಳ ಮನವನ್ನು ಸ್ಥಿರವಾಗಿ ಮುಟ್ಟಿಬಿಡಬೇಕೆಂದುಕೊಳ್ಳುತ್ತಾನೆ.

ಅಷ್ಟರಲ್ಲಿ ಮಿಸ್ ದರ್ಶನಾ ಶಾಪಿಂಗ್ ಕಾಂಪ್ಲೆಕ್ಸ್‌ನಿಂದ ಹೊರಕ್ಕೆ ಬಂದು ಏನೋ ಹುಡುಕುತ್ತಾಳೆ. ನಮ್ಮ ಹೀರೋ ಮುಖ್ಯದ್ವಾರದ ಬಳಿ ಸಿಗರೇಟೊಂದನ್ನು ತುಟಿಗಳಿಗೆ ಸಿಕ್ಕಿಸಿಕೊಂಡು ರಸ್ತೆಯ ಕಡೆ ನೋಡುತ್ತಿದ್ದಾನೆ. ದರ್ಶನಾ ಹಿಂದಿನಿಂದ ಬಂದು ಅವನ ಕಣ್ಣುಗಳ ಮುಂದಕ್ಕೆ ನಡೆಯಲಾರದೆ ಹಿಂದಿನಿಂದಲೇ ಹೆಜ್ಜೆಯಿಡುತ್ತಾ ಹಂಸದಂತೆ ಸದ್ದಿಲ್ಲದೆ ಅವನ ಹಿಂದಕ್ಕೆ ಬಂದು ನಿಲ್ಲುತ್ತಾಳೆ.

ಅವಳ ಕೈಗಳಲ್ಲಿ ಒಂದು ಚೊಕ್ಕದಾದ ಕಾಣಿಕೆ (ಪಾರ್ಸೆಲ್) ಇದೆ. ಭುಜದ ಕೆಳಗೆ ಒಂದು ಕೈ ಚೀಲ ಸುಂದರವಾದ ಕೊರಳು ಸರದಂತೆ ನೇತಾಡುತ್ತಿದೆ.

ಸರಳವಾಗಿ ಹೇಳಬೇಕಾದರೆ ಅದ್ಭುತವಾದ ಮುಖ ಅವನ ಮುಂದಿದೆ. ದೊಗಳೆ ಅಂಗಿ ಮತ್ತು ಪ್ಯಾಂಟಿನ ಒಳಗೆ ಅವಿತುಕೊಂಡಿರುವ ಸುಂದರ ಸಂಖ್ಯೆಗಳನ್ನು ಅವನ ಕಣ್ಣುಗಳು ನಿರ್ದಿಷ್ಟವಾಗಿ ಅಳೆಯಲಾರದೆ ಹೋದರು, ಮಾಡೆಲ್ ಪ್ರಪಂಚದಲ್ಲಿ ಕುತೂಹಲವಾಗಿ ಉಳಿಯುವಂತಾ ಸಂಖ್ಯೆಗಳು ಅವಳದಾಗಿರುತ್ತವೆ ಎಂದುಕೊಳ್ಳುತ್ತಾನೆ.

"ನನ್ನ ಹೆಸರು ಅನಿಲ್ ಗೌರವ್" ಅಂತ ಒಂದು ಪಬ್ಲಿಕ್ ಸೆಕ್ಟರ್ ಹೆಸರೇಳಿ, ಅದರಲ್ಲಿ ಅಧಿಕಾರಿಯಾಗಿದ್ದೇನೆ ಎಂದು ಕೊಚ್ಚಿಕೊಂಡ. ತನ್ನ ಮಾತುಗಳಿಂದ ಪರಿಣಾಮ ಬೀರದಂತೆ ಶಂಕಿಸಿದ ಗೌರವ್ ನಿಮಗೆ ಅಭ್ಯಂತರವಿಲ್ಲದಿದ್ದರೆ ಒಟ್ಟಿಗೆ ಸ್ವಲ್ಪ ಸಮಯ ಕಳೆಯೋಣ ಎನ್ನುತ್ತಾ ಪೀಠಿಕೆ ಹಾಕಿದ.

ಉರಿಯುವ ದೀಪದ ಪ್ರಕಾಶಕ್ಕೆ ಆಕರ್ಷಣೆಗೊಳ್ಳುವ ಹುಳುಗಳು ಗೊತ್ತಿದ್ದೂ ಗೊತ್ತಿಲ್ಲದೆಯೇ ಸುತ್ತಲು ಗಸ್ತು ಹೊಡೆಯುತ್ತಾ ಸಾಯುವುದು ಸಹಜ. ಪ್ರೇಮ ಕಾಮ ಕೂಡ ಅದೇ ದಾಟಿಯವು.

ದರ್ಶನಾ, ಗೌರವ್‌ನ ವಿನಮ್ರತೆಗೆ ತುಸು ಆಕರ್ಷಣೆಗೊಂಡರೆ ಅವನ ಗಡುಸು ಪುರುಷ ಲಕ್ಷಣಗಳಿಗೆ ಇನ್ನಷ್ಟು ಆಕರ್ಷಣೆಗೊಂಡು ಅವನ ಹಿಂದೆ ನಡೆಯುತ್ತಾಳೆ. ಸುಮಾರು ನೂರು ಅಡಿಗಳ ದೂರದಲ್ಲಿ ತಾನು ನಿಲ್ಲಿಸಿರುವ ಕಾರಿನ ಕಡೆ ಕೈ

ತೋರಿಸಿ "ಆ ಕಾರು ನನ್ನದೆ ನೀವು ಅನುಮತಿ ಕೊಟ್ಟರೆ ನಿಮ್ಮ ಕೈಯಲ್ಲಿರುವ ಪ್ಯಾಕೆಟ್ಟನ್ನು ಕಾರಿನಲ್ಲಿಟ್ಟು ಬರುವೆ" ಎಂದು, ಅವಳ ಕೈಯಲ್ಲಿರುವ ಪ್ಯಾಕೆಟ್‌ಗೆ ಕೈ ನೀಡುತ್ತಾನೆ.

"ಪರವಾಗಿಲ್ಲ, ಅದು ಏನೂ ಭಾರವಲ್ಲದ ಗಿಫ್ಟ್ ಕೈಯಲ್ಲಿದ್ದರೂ ಏನೂ ಅನಾನುಕೂಲವಾಗದು" ದರ್ಶನಾ ಹೇಳುತ್ತಾಳೆ.

"ಗಿಫ್ಟ್ ಹೆಣ್ಣಿನಷ್ಟೆ ಕೋಮಲ, ಗಿಫ್ಟ್ ಕೊಡುವವರಿಗಿಂತ ತೆಗೆದುಕೊಳ್ಳುವವರೇ ಭಾಗ್ಯಶಾಲಿಗಳು" ಇಬ್ಬರೂ ನಗುತ್ತಾರೆ.

"ಹೌದು ನಿಮಗೆ ಮದುವೆಯಾಗಿದೆಯೆ ?"

ತುಸು ಮುಕ್ತವಾದ ಅವನ ಮನ, ಅವಳ ಮಾತಿನಿಂದ ಲಾಭ ಪಡೆದುಕೊಂಡಂತೆ, "ಮದುವೆಯಾಗಿದ್ದರೆ ಈ ರಮ್ಯ ಸಾಯಂಕಾಲ ನಿಮ್ಮ ಜೊತೆ ಇಷ್ಟು ಸ್ವತಂತ್ರ್ಯವಾಗಿ ಓಡಾಡುತ್ತಿದ್ದನೆ ?" ಮತ್ತೆ ಇಬ್ಬರೂ ನಗುತ್ತಾರೆ.

ಕಾರನ್ನು ದೂರದಿಂದಲೇ ನೋಡಿದ ದರ್ಶನಾ ಅದರ ಸಂಖ್ಯೆಗಳನ್ನು ಗಮನಿಸಲಿಲ್ಲ. ವಿದ್ಯುತ್ ದೀಪಗಳ ಕೆಳಗೆ ತನ್ನದೇ ಆದ ಬೆಳಕನ್ನು ಹಚ್ಚಿಕೊಂಡಿರುವ ಕಾರು ನಿಜವಾದ ಬಣ್ಣವನ್ನು ಮುಚ್ಚಿಕೊಂಡಿದೆ.

ಗೌರವ್ ಮುಂದೆ, ದರ್ಶನಾ ಹಿಂದೆ ನೇರವಾಗಿ ಹವಾನಿಯಂತ್ರಣ ಕೋಣೆಯ ಒಳಕ್ಕೆ ನಡೆಯತೊಡಗಿದರು. ಈಗ ಇಬ್ಬರೂ ಹೆಚ್ಚುಕಮ್ಮಿ ಒಬ್ಬರನ್ನೊಬ್ಬರು ಬಹಳ ಅರಿತುಕೊಂಡಂತೆ ಕೆಲವು ಮಿ.ಮೀ. ಗಳ ಅಂತರದಲ್ಲಿ ಇಬ್ಬರೂ ವಿದ್ಯುತ್ ಕಿರಣಗಳನ್ನು ಚೆಲ್ಲಿಕೊಳ್ಳುತ್ತಾ ಸಭ್ಯತೆ ತಮಗಿಬ್ಬರಿಗೆ ಮಾತ್ರ ಗೊತ್ತು ಎನ್ನುವಂತೆ ವರ್ತಿಸುತ್ತಿದ್ದಾರೆ.

ತಾನೇನೋ ತಪ್ಪು ಮಾಡುತ್ತಿದ್ದೇನೆ ಎನ್ನುವಂತೆ ಅವಳ ಸ್ಮೃತಿಪಟಲದಲ್ಲಿ ಪ್ರಶ್ನೆಗಳೇಳುತ್ತಿವೆ. ಕುರ್ಚಿಗಳಲ್ಲಿ ಇಬ್ಬರೂ ಕುಳಿತಿದ್ದಾರೆ. ದರ್ಶನಾ ತಾನು ಮಾಡುತ್ತಿರುವ ಸಂಶೋಧನೆಯ ಬಗ್ಗೆ ಹೇಳುತ್ತಾ ತಾನು ಲೇಡೀಸ್ ಹಾಸ್ಟೆಲ್‌ನಲ್ಲಿ ಇರುವುದರ ಬಗ್ಗೆ ತಮ್ಮ ತಂದೆ ತಾಯಿ, ತನ್ನ ಚಟುವಟಿಕೆಗಳ ಬಗ್ಗೆ ಹೇಳುತ್ತಾ ಹೋಗುತ್ತಿದ್ದಾಳೆ.

ಗೌರವ್ ತಾನೊಬ್ಬ ಒಳ್ಳೆ ಕೇಳುವವನಾಗಿ ಅವಳ ಮಾತುಗಳನ್ನು ಬಹಳ ಗಂಭೀರವಾಗಿ ಕೇಳಿಸಿಕೊಳ್ಳುತ್ತಿದ್ದಾನೆ.

"ನಾನು ಎಂಟು ಗಂಟೆಗೆಲ್ಲಾ ಹಾಸ್ಟಲ್‌ಗೋಗಬೇಕು" ದರ್ಶನಾ ಹೇಳಿದಳು. ಗೌರವ್ ಕೈ ಗಡಿಯಾರ ನೋಡಿಕೊಂಡ. ಸಮಯ ಗ್ರೀನ್‌ವಿಚ್ ದಾಟಿ 90

ನಿಮಿಷಗಳಾಗಿವೆ. ಅವನ ಇಲೆಕ್ಟ್ರಾನಿಕ್ ಕೈ ಗಡಿಯಾರದಲ್ಲಿ ಗ್ರೀನ್‌ವಿಜ್ ಸಮಯವನ್ನೂ ಅಳವಡಿಸಿಕೊಂಡಿದ್ದಾನೆ.

ನಾನು ನಿಮ್ಮನ್ನು ಪ್ರೀತಿಸುತ್ತೇನೆ ಎನ್ನುವ ಮಾತುಗಳು ಅವನ ತುಟಿಗಳ ಮೇಲೆ ನರ್ತಿಸುತ್ತಿವೆಯಾದರೂ ಅತ್ಯವಸರ ಅಪಾಯವೆನ್ನುವ ಸಂಜ್ಞೆ ಕೂಡ ಹಿಂದೆಯೇ ನಿಂತಿದೆ. ಅದೇ ಐರೋಪ್ಯ ದೇಶವಾಗಿದ್ದರೆ ಇಷ್ಟೊತ್ತಿಗೆ ಒಂದು ಚುಂಬನವನ್ನು ಕೊಟ್ಟುಬಿಡುತ್ತಿದ್ದ. ಆದರೆ ಈಗ ಬೆಂಗಳೂರಿನ ಹೋಟೆಲ್ ಒಂದರಲ್ಲಿ ಕುಳಿತಿದ್ದಾನೆ.

ಎರಡು ವಿಶೇಷ ಊಟಗಳಿಗೆ ಆಜ್ಞೆ ನೀಡಿ ಇನ್ನಷ್ಟು ಮಾತುಗಳೇಳಿ ಅವಳ ಮೇಲೆ ಪ್ರಭಾವ ಬೀರತೊಡಗಿದ. ಬರುಬರುತ್ತಾ ಅವನ ಧ್ವನಿಯಲ್ಲಿ ಸ್ವಲ್ಪ ಸ್ವಲ್ಪವಾಗಿ ಮಾದಕತೆ ತುಂಬಿಕೊಳ್ಳುತ್ತದೆ. ಅವರು ಕುಳಿತಿರುವ ಕೋಣೆ ಪ್ರತ್ಯೇಕವಾಗಿರುವುದರಿಂದ ಗೌರವ್ ಈಗ ಸಿಕ್ಕಿರುವ ಸದಾವಕಾಶವನ್ನು ಸರಿಯಾಗಿಯೇ ಉಪಯೋಗಿಸಿಕೊಳ್ಳ ಬೇಕೆಂದುಕೊಂಡು, ನಿಜವಾದ ನೋಟದಲ್ಲಿ ಅವಳ ಮುಖವನ್ನು ನೋಡುತ್ತಾನೆ.

ಈಗ ಅವನ ಮುಖದಲ್ಲಿ ಸರಿಯಾದ ಮಾರ್ಪಾಡುಗಳು ಎದ್ದಿವೆ. ದರ್ಶನಾ ದಿಢೀರನೆ ಅವನ ಮುಖದ ಕಡೆ ನೋಡಿ ಅವನಲ್ಲೆದ್ದಿರುವ ರೇಖಾಕೃತಿಗಳನ್ನು ಗಮನಿಸಿ ಬೆಚ್ಚಿಬೀಳುವಂತಾಗುತ್ತಾಳೆ. ಅಷ್ಟರಲ್ಲಿ ಸೇವಕ ಅವರೇಳಿದ ಎಲ್ಲಾ ತಿನಿಸುಗಳನ್ನು ಮೇಜಿನ ಮೇಲೆ ನೀಟಾಗಿ ಅಣಿಮಾಡುತ್ತಾನೆ.

ಮತ್ತೊಮ್ಮೆ ದರ್ಶನಾ ಅವನ ಮುಖವನ್ನು ಓದತೊಡಗುತ್ತಾಳೆ. ಗೌರವ್ ತನ್ನ ಸಭ್ಯತೆಯನ್ನು ಬದಿಗಿತ್ತು ಮೃದುವಾಗಿ ವಿದ್ಯುತ್ ಕಿರಣಗಳನ್ನು ತುಂಬಿಕೊಂಡು ಎಡಕೈಯಿಂದ ಅವಳ ಕೈ ಸ್ಪರ್ಶಿಸಲು ಪ್ರಯತ್ನಿಸುತ್ತಾನೆ.

ಸರಕ್ಕನೆ ತನ್ನ ಕೈಯನ್ನು ದೂರ ಸರಿಸಿಕೊಂಡ ದರ್ಶನಾ ಪ್ರಶ್ನಾರ್ಥಕವಾಗಿ ಅವನ ಕಡೆ ನೋಡುತ್ತಾಳೆ. ಸಂದೇಹದ ಜೊತೆ ನಿರಾಶೆ, ಗೊಂದಲದ ಗೆರೆಗಳನ್ನೊತ್ತುಕೊಂಡ ಅವನು, ಮುಖ ಸ್ವರೂಪವನ್ನು ಬದಲಿಸಿಕೊಂಡು, ಮೈಯಲ್ಲಿದ್ದ ಜ್ವಾಲೆಯನ್ನು ನಿಯಂತ್ರಿಸಿಕೊಂಡು, ಮತ್ತೊಮ್ಮೆ ಸಭ್ಯತೆಯನ್ನು ತುಂಬಿಕೊಳ್ಳಲು ಪ್ರಯತ್ನಿಸುತ್ತಾನೆ.

"ಕ್ಷಮಿಸಿ" ಎಂದೇಳಿದ ಗೌರವ್ ಒಂದು ಸಣ್ಣ ಕತೆ ಹೇಳಿ ಅವಳನ್ನು ಮತ್ತಷ್ಟು ಸರಳೀಕರಿಸುತ್ತಾನೆ. ಈಗ ತನ್ನ ನಿಜ ಸ್ವರೂಪವನ್ನು ಒಳಗೊಳಗೆ ತುಂಬಿಕೊಂಡು ಜೇಬಿನಲ್ಲಿರುವ ಒಂದು ಸಣ್ಣ ಗುಳಿಗೆಯನ್ನು ಅವಳ ಕಣ್ಣು ತಪ್ಪಿಸಿ ಮುಂದಿರುವ ನೀರಿನ ಗ್ಲಾಸಿನಲ್ಲಾಕುತ್ತಾನೆ.

ಅರೆಕ್ಷಣದಲ್ಲಿ ಆ ಗುಳಿಗೆ ಕತ್ತಲ ಜೊತೆ ಕರಗಿಹೋಗುತ್ತದೆ. ಇಬ್ಬರೂ ಊಟ ಮಾಡುತ್ತಾ ಇದ್ದಂತೆ, ದರ್ಶನಾ ಹೀರೋ ಕೈಯಲ್ಲಿ ವಾಲಿಕೊಳ್ಳುತ್ತಾಳೆ.

ಅವಳ ಸ್ಮೃತಿಪಟಲದಲ್ಲಿ ನಕ್ಷತ್ರಗಳು ಮೂಡುತ್ತಿದ್ದಂತೆ.

'ಓ... ಗೌರವ್ ಪ್ಲೀಸ್ ತಬ್ಬಿಕೋ' ಎನ್ನುತ್ತಾ ಅವನ ಮೇಲೆ ಎದೆಗಳನ್ನೊತ್ತಿಕೊಂಡು ತುಟಿಗಳನ್ನು ಸವರಿಕೊಂಡು ಮೇಲೆ ಬೀಳತೊಡಗುತ್ತಾಳೆ.

ಮುದ್ದು ಮುಖವನ್ನೊಮ್ಮೆ ಗುಲಾಬಿಯ ದಳಗಳನ್ನು ಸವರಿದಂತೆ ಮೃದುವಾಗಿ ಸ್ಪರ್ಶಿಸಿದ. ಅಷ್ಟರಲ್ಲಿ ಸೇವಕ ಬಿಲ್ಲನ್ನು ಟ್ರೇನಲ್ಲಿ ತಂದಿಡುತ್ತಾನೆ. ಅಗತ್ಯಕ್ಕಿಂತ ಹೆಚ್ಚು ಹಣವನ್ನು ಟ್ರೇನಲ್ಲಾಕಿ, ದರ್ಶನಾಳನ್ನು ಅಪ್ಪಿಕೊಂಡು ಮೆಲ್ಲಗೆ ನಡೆಸಿಕೊಂಡು ಕಾರಿನ ಹತ್ತಿರಕ್ಕೆ ಬರುತ್ತಾನೆ.

ವಿದ್ಯುತ್ ದೀಪಗಳು ತಮಗೆ ಏನೂ ತಿಳಿದೇ ಇಲ್ಲ ಎನ್ನುವಂತೆ ಬೆಳಗುತ್ತಿವೆ. ಇಂಗ್ಲಿಷ್ ಸಿನಿಮಾದಲ್ಲಿನ ಹೀರೋ ನೋಡಿದಂತೆ ಸುತ್ತಲೂ ಒಮ್ಮೆ ಗಂಭೀರವಾಗಿ ಪರೀಕ್ಷಿಸಿ ನೋಡಿ ಒಂದು ಕೈಯಲ್ಲಿ ಕಾರು ಬಾಗಿಲನ್ನು ತೆಗೆದು ಮೊದಲು ತಾನು ಒಳಕ್ಕೆ ಹೋಗಿ ನಂತರ ಮಗುವನ್ನು ಕೋಮಲವಾಗಿ ತೊಡೆಗಳ ಮೇಲೆ ಕುಳ್ಳಿರಿಸಿಕೊಂಡಂತೆ ತನ್ನೆದೆಯ ಅಂತಃಕರಣದಲ್ಲಿ ಸೇರಿಸಿಕೊಂಡ.

ಹತ್ತಾರು ವರ್ಷಗಳು ಹೆಣ್ಣಿನ ಕಾಮ ಸಂಬಂಧವೇ ಕಾಣದ ಒಬ್ಬ ಸೈನಿಕನಂತೆ ಅವನ ಮನ ತುಡಿಯುತ್ತಿದೆ.

ಕೀಯಿಂದ ಇಗ್ನೀಶನ್ ಕೊಟ್ಟ ಕೂಡಲೇ ಚಲಿಸುತ್ತಿದ್ದ ಅವನ ಕಾರು, ಎರಡು ಮೂರು ಸಲ ಇಗ್ನಿಶನ್ ಕೊಟ್ಟರೂ ಚಲಿಸಲಿಲ್ಲ. ಕಾರಿನೊಳಗಿಂದಲೆ ಸುತ್ತಲೂ ಒಮ್ಮೆ ಕಣ್ಣಾಯಿಸಿ ಯಾರೂ ನೋಡುತ್ತಿಲ್ಲವೆಂದು ಕಾತರಿಪಡಿಸಿಕೊಂಡು ಮೇಲೂ ಅವನ ಹೃದಯವೇಕೋ ತುಸು ನಡುಗಿದಂತಾಗಿ ಮೊದಲಬಾರಿಗೆ ಒಂದು ವಿಲಕ್ಷಣ ಅನುಭವವಾಯಿತು. ಮತ್ತೊಮ್ಮೆ ಇಗ್ನಿಶನ್ ಕೊಟ್ಟು ನೋಡಿದ ಚಲಿಸಲಿಲ್ಲ.

ದರ್ಶನಾಳ ಸುಕೋಮಲವಾದ ಸೌಂದರ್ಯವನ್ನು ಕ್ಷಣಗಳು ತನ್ನ ವಶದಲ್ಲಿಟ್ಟುಕೊಂಡು ಅವನನ್ನು ಛೇಡಿಸಿದಂತಿವೆ. ತನ್ನ ಕಾರಿನ ಬಗ್ಗೆ ಒಳ್ಳೆ ಹೆಮ್ಮೆ ಹೊಂದಿದ್ದ ಇವನು ಈಗ ಆವೇಶದಿಂದ ವ್ಯಾಘ್ರನಾದ. ಥಟ್ಟನೆ ಏನೋ ಹೊಳೆದು ಕೀನಲ್ಲಿದ್ದ ಒಂದು ಸಣ್ಣ ಚಾಕುವನ್ನು ಎಳೆದುಕೊಂಡು ಇಗ್ನಿಶನ್ ಹಿಂದಿದ್ದ ಸಣ್ಣ ಸಣ್ಣ ಎರಡು ತಂತಿಗಳನ್ನು ಕತ್ತರಿಸಿ ಒಂದು ತಂತಿಯನ್ನು ಇನ್ನೊಂದು ತಂತಿಗೆ ಜೋಡಿಸಿ ಆಕ್ಸಿಲೇಟರ್ ಒತ್ತಿದ. ಕಾರು ಬುರ್ರನೆ ಶಬ್ದಮಾಡುತ್ತಾ ಚಲಿಸಲು ಸಿದ್ಧಗೊಂಡಿತು. ಆಗ ಅವನಿಗೆ ಏನೋ ಮಿಂಚಿನಂತೆ ಹೊಳೆದು ತಾನು ಇಗ್ನಿಶನ್ ಕೊಡಲು ಉಪಯೋಗಿಸಿದ ಕೀ ನೋಡಿ ತನ್ನ ಮೂರ್ಖತನಕ್ಕೆ ತಾನೇ ಛೀಮಾರಿ ಹಾಕಿಕೊಂಡ. ಆ ಕೀ ಬೇರೆಯಾಗಿತ್ತು.

ಎಡಕಾಲಿನಲ್ಲಿ ಕ್ಲಚ್‌ನ್ನು ಒತ್ತಿಕೊಂಡು ನ್ಯೂಟ್ರಲ್ ಗೇರನ್ನು ಒಂದನೇ ಗೇರಿಗೆ ಹಾಕಿ ಆ್ಯಕ್ಸಿಲೇಟರ್ ಕೊಟ್ಟು ಮತ್ತೊಂದು ಕ್ಷಣದಲ್ಲಿ ಎರಡು ಮೂರನೇ ಗೇರಿಗೆ ಬದಲಿಸಿ ಕ್ಲಚ್‌ನ್ನು ಬಿಟ್ಟು ಸ್ಟೇರಿಂಗ್ ತಿರುವಿಸತೊಡಗಿದ.

ಕಾರು ಆವೇಶದಿಂದ ರೆಸ್ಟೋರೆಂಟ್‌ನ ಪಾರ್ಕಿಂಗ್‌ನಿಂದ ಹೊರಕ್ಕೆ ಜಿಗಿದು ರಸ್ತೆಯ ಮೇಲೆ ಸರಾಗವಾಗಿ ಓಡತೊಡಗಿತು.



ಹಸಿರು ನಗರದ ಒಂದು ಕೋಣೆಯಲ್ಲಿ ವಿನೋದ್ ಬಿ.ಟಿ.ಎಸ್ ಬಸ್ಸಿಗಿಂತ ಸುಮಾರು 35 ಅಡಿಗಳ ದೂರದಲ್ಲಿ ನಿಂತು ನೋಡುತ್ತಿದ್ದಾನೆ. ಶಾಲಿನಿ ಇಂದು ಮಿಂಚಿನ ಬಳ್ಳಿಯಂತೆ ವೈಯ್ಯಾರವಾಗಿ ನಡೆದು ಬಂದು ಸೌಂದರ್ಯವನ್ನೆಲ್ಲ ಬಸ್ಸಿನಲ್ಲಿ ತುಂಬಿಕೊಂಡು ಹೋಗುವಂತೆ ನಿಂತಿದ್ದಾಳೆ. ತಾನಿರುವ ಮುಂದಿನ ಬೀದಿಯಿಂದಲೇ ಶಾಲಿನಿಯ ಹಿಂದೆ ಬೀಳುವ ಬಯಕೆ ಇದ್ದರೂ ಎಲ್ಲಿ ತಪ್ಪಿಸಿಕೊಂಡು ಬಿಡುವಳೋ ಎಂದು ಮೊದಲೇ ಬಸ್ಸಿನ ಹತ್ತಿರ ಹಾಜರಾಗಿರುವ ವಿನೋದ್ ಬಸ್ಸನ್ನು ಹತ್ತಿಕೊಳ್ಳಲೋ ಬೇಡವೋ ಎನ್ನುತ್ತಾ ತನ್ನ ಮನಸ್ಸಿನ ಸುತ್ತಲು ಗಿರಿಕಿ ಹೊಡೆಯುತ್ತಿದ್ದಾನೆ. ಇನ್ನೊಂದು ಯೋಚನೆಯ ಪ್ರಕಾರ ಎಷ್ಟೋ ಹೆಣ್ಣುಗಳ ಪಕ್ಕದಲ್ಲಿ ಕುಳಿತು ನಿರ್ಭಯವಾಗಿ ಪ್ರಯಾಣ ಮಾಡಿರುವುದನ್ನು ನೆನೆಸಿಕೊಂಡು ಏನಾದರೂ ಆಗಲಿ, ಹೋಗಿ ಪಕ್ಕದಲ್ಲಿ ಕುಳಿತು ಬಿಡೋಣವೆಂದುಕೊಳ್ಳುತ್ತಾನೆ. ಕೋಳಿ ಹೃದಯಕ್ಕಿಂತ ಸ್ವಲ್ಪ ದೊಡ್ಡದಾದ ಅವನ ಹೃದಯ ಫಿಕ್ ಫಿಕ್ ಎಂದು ಹೊಡೆದುಕೊಳ್ಳುತ್ತಿದೆ. ಶಾಲಿನಿ ಕಿಟಕಿಯಿಂದ ಹೊರಕ್ಕೊಮ್ಮೆ ನೋಡಿ "ಅಯ್ಯೋ ಪಾಪ" ಎಂದುಕೊಳ್ಳುತ್ತಾ ಒಂದು ಹೂನಗೆ ಬೀರಿದಳು, ಉಚಿತವಾಗಿ. ಅಷ್ಟೇ ಬಸ್ಸನ್ನು ಹತ್ತಿಯೇ ಬಿಟ್ಟ ಭೂಪ.

ಬೆಳಗಿನ ಬಿಸಿಲು, ಶ್ವಾಸನಿಶ್ವಾಸಗಳ ತಾಪ, ಹವೆಯ ನೀರಿನಾಂಶ ಎಲ್ಲವೂ ಮಿಶ್ರಣವಾಗಿ ಜನ ಬಿ.ಟಿ.ಎಸ್. ಬಸ್ಸುಗಳನ್ನು ಬೈಯ್ಯುತ್ತಿದ್ದಾರೆ. ಮೇಕಪ್ ಮಾಡಿಕೊಂಡು ಬಂದಿರುವ ಹೆಣ್ಣುಗಳು ಯಾಕಾದರೂ ಈ ಬಸ್ಸುಗಳಲ್ಲಿ ಪ್ರಯಾಣ ಮಾಡುತ್ತಿದ್ದೇವೊ ಎಂದು ತಮಗೆ ತಾವೇ ಛೀಮಾರಿ ಹಾಕಿಕೊಳ್ಳುತ್ತಿದ್ದಾರೆ. ವಿನೋದ್ ಜನಗಳ ಮಧ್ಯದಿಂದಲೇ ಶಾಲಿನಿಯ ಅರೆಕೊರೆ ದೇಹವನ್ನು ನೋಡುತ್ತಿದ್ದಾನೆ.

ಕೆಲವು ಯುವಕರು ಬೇಕೆಂತಲೇ ಹೆಣ್ಣುಗಳನ್ನು ಒಂದಲ್ಲಾ ಒಂದು ಭಂಗಿಯಲ್ಲಿ ನಿಂತು ಸ್ಪರ್ಶಿಸುತ್ತಿದ್ದಾರೆ. ಬಸ್ಸು ಒಂದೊಂದು ನಿಲ್ದಾಣದಲ್ಲೂ ನಿಲ್ಲುತ್ತಾ ತನ್ನ ಭಾರವನ್ನು ಇಳಿಸಿಕೊಳ್ಳುತ್ತಾ ಚಲಿಸುತ್ತಿದೆ. ನಿಂತಿರುವ ಹೆಚ್ಚಿನ ಜನವೆಲ್ಲಾ ಇಳಿದಾಗ, ಕುರ್ಚಿಗಳಲ್ಲಿರುವ ಜನ ಮಾತ್ರ ಈಗ ಉಳಿದಿದ್ದಾರೆ.

ಮುಂದಿದ್ದ ಜಡೆಯನ್ನೊಮ್ಮೆ ಮೇಲಿನಿಂದ ಕೆಳಗಿನವರಿಗೂ ಎಡಕೈಯಲ್ಲಿ ಸವರಿ ತೆಗೆದು ಹಿಂದಕ್ಕೆ ಹಾಕಿಕೊಂಡ ಶಾಲಿನಿ ತೊಂಬತ್ತು ಡಿಗ್ರಿಗಳಲ್ಲಿ ಹಿಂದಕ್ಕೆ ನೋಡಿದಳು. ಅದೊಂದು ಅಪರೂಪವಾದ ಭಂಗಿಯನ್ನು ಗಮನಿಸಿದ ಗಂಡಸರೆಲ್ಲ ಒಮ್ಮೆಲೆ ಅವಳ ಚೆಲುವನ್ನು ನೋಡಿ ಆನಂದಿಸಿದರು. ವಿನೋದ್‌ಗೆ ತನ್ನ ಹೆಂಡತಿಯನ್ನು ಎಲ್ಲರೂ ನೋಡಿ ಆನಂದಿಸಿದಂತಾಗಿ ಸುತ್ತಲಿರುವ ಗಂಡಸರನ್ನೊಮ್ಮೆ ಕೋಪ ತುಂಬಿದ ಕಣ್ಣುಗಳಿಂದ ನೋಡತೊಡಗಿದ. ಆದರೆ ಯಾರೂ ಅವನನ್ನು ಗಮನಿಸಲಿಲ್ಲ.

ಈಗ ಒಂದು ಮುಖ್ಯ ನಿಲ್ದಾಣ ಬಂದು ಹೆಚ್ಚೂ ಕಡಿಮೆ ಎಲ್ಲಾ ಜನರು ಒಬ್ಬೊಬ್ಬರಾಗಿ ಇಳಿಯತೊಡಗಿದರು. ಮುಂದಿದ್ದ ಶಾಲಿನಿ ವ್ಯಾನಿಟಿ ಚೀಲವನ್ನು ನೇತಾಕಿಕೊಂಡು ಮತ್ತೊಮ್ಮೆ ಹಿಂದಕ್ಕೆ ಓರೆಯಾಗಿ ನೋಡಿ ನಿಧಾನವಾಗಿ ಮುಂದಿನ ಬಾಗಿಲ ಕಡೆ ಹೆಜ್ಜೆಯಾಕತೊಡಗಿದಳು.

ವಿನೋದ್ ಹಿಂದಿನ ಬಾಗಿಲಿಂದ ಇಳಿದು ಒಂದು ಶಾಲಿನಿಯ ಎದುರಿಗೆ ನಿಂತುಕೊಂಡ. ಶಾಲಿನಿ ತಲೆ ಬಗ್ಗಿಸಿಕೊಂಡು ಗಂಡಸರ ಮಧ್ಯದಿಂದ, ನುಸುಳಿಕೊಂಡು ಪಕ್ಕಕ್ಕೆ ಬಂದು ನಡೆಯತೊಡಗಿದಳು. ಮತ್ತೊಮ್ಮೆ ಹೃದಯ ಕಂಪಿಸಿದಂತಾಗಿ ಈಗ ಬಾಯಿಗೆ ಬಂದಿತ್ತು. ಭಂಡ ಧೈರ್ಯ ತಂದುಕೊಂಡ ವಿನೋದ ಎರಡು ಅಡಿಗಳ ಅಂತರದಲ್ಲಿ ಹಿಂದೆಯೇ ನಡೆಯುತ್ತಾ "ಎಕ್ಸ್‌ಕ್ಯೂಜ್ಮಿ" ಎಂದೇ ಬಿಟ್ಟ.

ಹಿಂದಕ್ಕೆ ತಿರುಗಿ ನೋಡಿದ ಶಾಲಿನಿ ಸೊಗಸಾಗಿ ಕೋಮಲವಾಗಿ ಮುದ್ದಾಗಿ ನಾಲ್ಕನೆ ಒಂದು ಭಾಗದ ನಗು ಬೀರಿದಳು. ವಿನೋದ್ ಇನ್ನಷ್ಟು ಉತ್ಸಾಹಗೊಂಡು, ಕರುವಿನಂತೆ ಹಿಂದೆಯೇ ಹೆಜ್ಜೆಯಾಕತೊಡಗಿದ. ಬೆಂಗಳೂರಿನ ಹೆಣ್ಣುಗಳು ಮೊದಲು ದುರುಗುಟ್ಟಿ ನೋಡಿ, ನಂತರ ಕೇಳುವ ಮೊದಲ ಪ್ರಶ್ನೆ "ಯಾಕ್ರೀ ನನ್ನಿಂದೆ ಬರ್ತೀರ?" ಎಂದು. "ಎಲ್ಲಿ ಕೆಲಸ ಮಾಡ್ತಾ ಇದ್ದೀರ" ಕೇಳಿದಳು. ವಿನೋದ್ ಟೀಚರ್‌ಗೆ ಉತ್ತರ ಹೇಳುವಂತೆ ಹೇಳಿದ. "ಒಳ್ಳೆ ಕಂಪನೀನೆ".

"ಏನು ಕೆಲಸ ಮಾಡ್ತೀರಾ?"

"ನಾನು ಮ್ಯಾನೇಜರ್‌ಗೆ ಸ್ಟೆನೋ"

ಮತ್ತೊಮ್ಮೆ ಕಣ್ಣುಗಳಲ್ಲಿ ಅಳತೆ ಮಾಡಿದ ಶಾಲಿನಿ "ಆಯ್ತು ಆಫೀಸಿಗೆ ಈಗಾಗಲೇ ಹೊತ್ತಾಗಿದೆ ಬರ್ತೀನಿ" ಎಂದೇಳಿ ನಡೆದೇ ಬಿಟ್ಟಳು.

ಅರೆಕ್ಷಣ ತಬ್ಬಿಬ್ಬಾದ ವಿನೋದ್ "ಎಕ್ಸ್‌ಕ್ಯೂಜ್ಮಿ" ಎಂದ ಭಾರವಾದ ಸ್ವರದಲ್ಲಿ. ತಿರುಗಿ ನೋಡಿದ ಶಾಲಿನಿ "ಏನ್ರೀ" ಎಂದಳು. ಒಂದೇ ಒಂದು ಪರ್ಸೆಂಟ್ ಕೂಡ

ದಯೆ ಇಲ್ಲದ ಭಾವದಲ್ಲಿ. ಎದೆ ತುಂಬಾ ಭಾರ ತುಂಬಿಕೊಂಡ ವಿನೋದ್ ಧ್ವನಿ ಇನ್ನಷ್ಟು ಕೀರಲಾಗಿ "ನಿಮ್ಮ ಜೊತೆ ಸ್ವಲ್ಪ ಮಾತನಾಡಬೇಕು" ಎಂದ.

ಸುತ್ತಲಿರುವ ಜನಗಳ ಮಧ್ಯೆ ತಿಳಿದೂ ತಿಳಿಯದಂತೆ ಬಿದಿಗೆ ಚಂದ್ರನ ಹಾಗೆ ನಕ್ಕ ಶಾಲಿನಿ.

"ಏನು ನಿಮ್ಮ ಜೊತೆ ಸಿನಿಮಾಗೆ ಬರಬೇಕೆ? ಕಬ್ಬನ್‌ಪಾರ್ಕ್, ಲಾಲ್‌ಬಾಗ್ ತೋಟ ಸುತ್ತಬೇಕೇ ಅಥವಾ ಅರಮನೆ, ಬನ್ನೇರುಘಟ್ಟಕ್ಕೆ ಬರಬೇಕೇ? ಹೇಳಿ ಮೆಜೆಸ್ಟಿಕ್, ಬ್ರಿಗೇಡ್ ರಸ್ತೆ ಎಲ್ಲಿಗೆ ಬರಬೇಕು ಹೇಳಿ" ಶಾಲಿನಿ ವಿನೋದ್ ಕಡೆಗೊಮ್ಮೆ ಅಳುಕಿಸಿದಂತೆ ನೋಡಿದಳು.

ಶಾಲಿನಿಯ ಮಾತುಗಳಿಂದ ಒಳಗೊಳಗೆ ಗುಟುಕರಿಸಿದ ವಿನೋದ್ ಒಮ್ಮೆ ದೀರ್ಘವಾದ ಶ್ವಾಸವೆಳೆದುಕೊಂಡು "ಕಾಫಿ ಕುಡಿಯೋಣ ಬನ್ನಿ" ಎಂದ.

ಸುಮ್ಮನೆ ಬಿಡುವ ಪಾರ್ಟಿ ಅಲ್ಲ ಎಂದು ತಿಳಿದುಕೊಂಡ ಶಾಲಿನಿ ಕ್ಷಮಿಸಿ ಬ್ಯಾಂಕ್‌ಗೆ ಸಮಯವಾಗಿದೆ ಎಂದಳು.

"ಬ್ಯಾಂಕ್, ಯಾವ ಬ್ಯಾಂಕ್ ?"

"ಕೆನರಾ ಬ್ಯಾಂಕ್...?"

"ನೀವು ಬೇರೆ ಎಲ್ಲೋ ಕೆಲಸ ಮಾಡ್ತೀರ ಅಂದುಕೊಂಡಿದ್ದೆ".

"ಬೇರೆ ಎಲ್ಲೋ ಅಂದರೆ..." ಅದಕ್ಕೆ ಉತ್ತರ ಕೊಡದೆ ವಿನೋದ್ "ಎರಡು ನಿಮಿಷ ಬನ್ನಿ" ಎಂದ.

"ಇಲ್ಲ, ಒಂದು ಕೆಲಸ ಮಾಡಿ, ಈ ದಿನ ಶನಿವಾರ ಒಂದೂವರೆಗೆಲ್ಲಾ ಬ್ಯಾಂಕ್ ಮುಗಿದೋಗುತ್ತೆ. ನೀವು ಎರಡು ಗಂಟೆಗೆ ಇಲ್ಲಿಗೆ ಬನ್ನಿ" ಎಂದೇಳಿ ಹೊರಟು ಹೋದಳು.

ಹೆಚ್ಚು ಕಮ್ಮಿ ತನ್ನ ೨೯ ವರ್ಷಗಳ ಅನುಭವದಲ್ಲಿ ಎಂದೂ ಇಷ್ಟೊಂದು ಬಂಪರ್ ಆಹ್ವಾನ ಪಡೆಯದ ವಿನೋದ್ ೫೦-೨೯=೨೧ರ ಗಡಿಯಲ್ಲಿ ಒಂದು ಕುತೂಹಲ ಕ್ಷಣದಲ್ಲಿ ವಿಹಾರ ಮಾಡುತ್ತಿದ್ದಾನೆ. ರಸ್ತೆಯ ಮಧ್ಯದಲ್ಲಿ ಕಿರ್ರನೆ ಶಬ್ದಮಾಡಿಕೊಂಡು ಒಂದು ಕಾರೊಂದು ವಿನೋದ್‌ನ ಪಕ್ಕದಿಂದಲೇ ಹಾದುಹೋಯಿತು. ಕಾರಿನ ಒಳಗಿದ್ದ ಡ್ರೈವರ್ ಲೇಯ್ ಯಾಕೋ ಮನೆಯಲ್ಲಿ ಹೇಳಿ ಬಂದಿದ್ದೀಯ ಏನು?" ಕೂಗಿದ.

ವಿನೋದ್ ಸುತ್ತಲೂ ಒಮ್ಮೆ ನೋಡಿ ರಸ್ತೆಯ ಅಂಚಿನಲ್ಲಿ ನಡೆಯತೊಡಗಿದ.

ಕೈ ಗಡಿಯಾರ ಈಗಾಗಲೇ ಹತ್ತೂವರೆ ತೋರಿಸುತ್ತಿದ್ದು, ಇನ್ನು ಆಫೀಸಿಗೋಗಿ ಪ್ರಯೋಜನವಿಲ್ಲ ಎಂದುಕೊಂಡು ಹೀಗೆ ಕಾಲ ಕಳೆದು ಎರಡು ಗಂಟೆಗೆ ಇಲ್ಲಿಗೆ ಬರಬೇಕೆಂದುಕೊಂಡ. ಅವನ ಮನಸ್ಸು ಎಲ್ಲಿಲ್ಲದ ಲೆಕ್ಕಾಚಾರಗಳನ್ನು ಹಾಕಿಕೊಳ್ಳುತ್ತಿದೆ.



ವಿನೋದ ಬರಲಿರುವ ಕ್ಷಣಗಳನ್ನು ಚೊಕ್ಕಟವಾಗಿ ಉಪಯೋಗಿಸಿಕೊಳ್ಳಲು ತನ್ನ ಬಲ ತಲೆಯ ಅರ್ಧಗೋಳದ ನಕಾಶೆಯಲ್ಲಿರುವ ಮಿದುಳನ್ನು ಹೆಚ್ಚಾಗಿಯೇ ಉಪಯೋಗಿಸತೊಡಗಿದ್ದಾನೆ. ಬಲ ತಲೆಯ ಅರ್ಧಗೋಳದಲ್ಲಿ ಭ್ರಮೆ ಮತ್ತು ಕಲ್ಪನೆಯ ಗೂಡುಗಳಿರುತ್ತವೆ. ಶಾಲಿನಿ ಹೇಳಿದ ಸಮಯಕ್ಕಿಂತ ಅರ್ಧ ಗಂಟೆ ಮುಂಚೆಯೇ ತಾನು ಇರಬೇಕಾದ ಸ್ಥಳದಲ್ಲಿ ಮೊಕ್ಕಾಂ ಹೊಡೆದಿದ್ದಾನೆ. ಅವನ ಮನಸ್ಸು ಅಜ್ಞಾತ ನಕ್ಷತ್ರಗಳ ಸುತ್ತ ಕುತೂಹಲದಿಂದ ಸುತ್ತುವ ಉಪಗ್ರಹದಂತೆ ಸುತ್ತುತ್ತಿದೆ.

ಎಡಗಡೆಯ ಅರ್ಧ ತಲೆಯ ಗೋಳದ ನಕಾಶೆಯಲ್ಲಿರುವ ಮಿದುಳು ಶಾಲಿನಿ ಏನಾದರೂ ತನ್ನನ್ನು ಮೂರ್ಖನಾಗಿಸಲು ಉಪಾಯ ಹೂಡಿರುವಳೇ ಎಂದು ಯೋಚಿಸುತ್ತಿದೆಯಲ್ಲದೆ, ಅವನಿಗೆ ಕೆಲವು ಸಲಹೆಗಳನ್ನು ಕೊಡುತ್ತಿದೆ.

ವಿನೋದ್ ಶಾಲಿನಿ ಹೇಳಿದ ಸ್ಥಳಕ್ಕಿಂತ ಇನ್ನಷ್ಟು ಮುಂದೆ ಹೋಗಿ ಹೆಚ್ಚುಕಮ್ಮಿ ಅವಳ ಬ್ಯಾಂಕ್ ಇರುವ ಕಟ್ಟಡದ ಮುಂದೆಯೇ ನಿಂತಿದ್ದಾನೆ. ಈಗ ಶಾಲಿನಿ 1.55 ನಿಮಿಷಕ್ಕೆ ಸರಿಯಾಗಿ ಕಟ್ಟಡದ ಮುಖ್ಯದ್ವಾರದಿಂದ ಹೊರಕ್ಕೆ ಬಂದು ರಸ್ತೆಗೆ ಇಳಿದಳು. ಸ್ವಲ್ಪ ದೂರದಲ್ಲಿ ನಿಂತಿದ್ದ ವಿನೋದ್ ಶಾಲಿನಿಯನ್ನು ನೋಡಿದ್ದೆ ಒಮ್ಮೆಲೆ ತಲ್ಲಣಿಸಿದಂತೆ ಇನ್ನಷ್ಟು ದೂರ ಬೇಗ ಬೇಗ ನಡೆದೋಗಿ ತಾನು ನಿಲ್ಲಬೇಕಾದ ಸ್ಥಳದಲ್ಲಿ ನಿಂತುಕೊಳ್ಳುತ್ತಾನೆ.

ಶಾಲಿನಿ ವ್ಯಾನಿಟಿ ಚೀಲವನ್ನು ಬಲಕೈಯಲ್ಲಿಡಿದು ಭುಜದ ಮೇಲೆ ಹಾಕಿಕೊಂಡು ಬೆಂಗಳೂರಿನ ಹೆಣ್ಣುಗಳು ನಡೆದು ಬರುವಂತೆ ಬರುತ್ತಿದ್ದಾಳೆ. ಎಡಕೈಯಲ್ಲಿರುವ ಗಡಿಯಾರ ಎದ್ದು ಕಾಣಿಸುತ್ತಿದೆ. ಅಲ್ಲೊಬ್ಬರು ಇಲ್ಲೊಬ್ಬರು ಅವಳ ಕಡೆ ವಾರೆ ನೋಟ ಬೀರುತ್ತಾ ತಮ್ಮ ಹೆಜ್ಜೆ ತಪ್ಪುತ್ತಿದ್ದಾರೆ.

ವಿನೋದ್ ನಿಂತಿರುವುದನ್ನು ನೋಡಿದ ಶಾಲಿನಿ ನಗುವನ್ನು ತುಟಿಗಳ ಮಧ್ಯದಲ್ಲಿ ತಡೆ ಹಿಡಿದು ಹತ್ತಿರ ಬಂದಿದ್ದೆ "ಹಲೋ" ಎಂದಳು. ಆ ನಗುವಿನ ಜೊತೆ ಹಲವು ವಾಸ್ತವ ಸಂಗತಿಗಳನ್ನು ಮುಟ್ಟಿ ನೋಡಿದಂತಾದ ವಿನೋದ್ ಅವಳ ಜೊತೆಗೆ

ಹೆಜ್ಜೆಗಳನ್ನು ಸೇರಿಸಿದ. ಶಾಲಿನಿ ಮುಂದೆ ವಿನೋದ್ ಹಿಂದೆ ನಡೆಯತೊಡಗಿದರು. ನೇರವಾಗಿ ವಿಷಯಕ್ಕೆ ಬಂದ ವಿನೋದ್ ಮತ್ತೆ ಶಾಲಿನಿಯನ್ನು ಸಿನಿಮಾಗೆ ಆಹ್ವಾನಿಸಿದ.

ವಿನೋದ್ ಕಡೆಗೊಮ್ಮೆ ಚುಚ್ಚಿನೋಡಿದ ಶಾಲಿನಿ "ಕ್ಷಮಿಸಿ" ಈ ಸಿನಿಮಾಗಳೆಂದರೆ ನನಗ್ಯಾಕೋ ವಾಕರಿಕೆ ಬರುತ್ತೆ, ಅದೂ ಕನ್ನಡ ಸಿನಿಮಾಗಳು ಎಂದಳು. ಕನ್ನಡದ ಬಗ್ಗೆ ಅಭಿಮಾನವಿರುವ ಅವನು ಸಮತೋಲನೆ ಕಳೆದುಕೊಂಡಂತಾದ "ಪಾರ್ಕ್" ಎಂದು ಉಚ್ಚರಿಸಿ ಈ ಮಾತು ತನ್ನ ಬಾಯಿಂದ ಬಂತೆ ಎನ್ನುವಂತೆ ಆಶ್ಚರ್ಯವಾಗಿ ಅವಳ ಕಡೆ ನೋಡಿದ.

"ಪಾರ್ಕ್‌ನಲ್ಲಿ ಓಡಾಡುವುದು ಯಾರು ಗೊತ್ತೆ ? ಒಂದು ಮದುವೆಯಾಗಿ ಮಕ್ಕಳಾಗಿ ಎಲ್ಲಾ ಆಸಕ್ತಿ ಕುತೂಹಲ ಕಳೆದುಕೊಂಡಿರುವವರು, ಇನ್ನೊಂದು ಕಳ್ಳತನವಾಗಿ ಧೈರ್ಯವಿಲ್ಲದೆ ಜನಗಳ ಮಧ್ಯೆ ಮುಖಗಳನ್ನು ಕಳೆದುಕೊಂಡಿರುವವರು" ಗುಟುಕರಿಸಿದ ವಿನೋದ್ ಸಣ್ಣದಾದ ಸ್ವರದಲ್ಲಿ ದೀರ್ಘವಾಗಿ ಉಸಿರೆಳೆದುಕೊಂಡು "ಅಂದರೆ ಈಗ" ಎಂದ. "ಈಗ ಎಲ್ಲಿಗೂ ಹೋಗುವುದಿಲ್ಲ, ಮನೆಗೆ ಹೋಗುತ್ತಿದ್ದೇನೆ, ನಿಮಗೇನು ಅಭ್ಯಂತರವಿಲ್ಲದಿದ್ದರೆ ನನ್ನ ಜೊತೆಯಲ್ಲಿ ನಮ್ಮ ಮನೆಗೆ ಬರಬಹುದು" ಎಂದಳು.

ಹಾವನ್ನು ತುಳಿದವನಂತೆ ಹೌಹಾರಿದ ವಿನೋದ್.

"ನಿಮ್ಮ ಮನೆಗೆ" ಎಂದ.

"ಹೌದು ನಮ್ಮ ಮನೆಗೆ"

"ನಿಮ್ಮ ಮನೆಯಲ್ಲಿ ಯಾರ್‍ಯಾರಿರ್ತಾರೆ?"

"ನಾನು, ನಮ್ಮ ತಂದೆ, ನಮ್ಮಣ್ಣ"

"ನಿಮ್ಮಣ್ಣ ಏನು ಕೆಲಸ ಮಾಡುತ್ತಾರೆ?"

"ಸಿ.ಬಿ.ಐ ನಲ್ಲಿದ್ದಾರೆ" ಮತ್ತೊಮ್ಮೆ ಶಾಕ್ ಹೊಡೆಸಿಕೊಂಡ ವಿನೋದ್ "ನಿಮ್ಮ ತಂದೆ" ಎಂದ.

"ರಿಟೈರ್ಡ್ ಆಗಿದ್ದಾರೆ".

ಅಷ್ಟರಲ್ಲಿ ಬಸ್ ನಿಲ್ದಾಣ ಬಂದಿತ್ತು. ತಾನು ಹೋಗಬೇಕಾಗಿರುವ ಬಸ್ಸು ಬಂದುದರಿಂದ ಶಾಲಿನಿ ಬಸ್ಸನ್ನು ಹತ್ತಿಕೊಂಡಳು. ಹಿಂದೆಯೇ ವಿನೋದ್ ಕೂಡ ಹತ್ತಿಕೊಂಡ. ಬಸ್ಸು ನಿಧಾನವಾಗಿ ಚಲಿಸುತ್ತಿದೆ.

ಒಂದು, ಎರಡು ನಿಲ್ದಾಣಗಳಾದ ಮೇಲೆ ಬಸ್ಸು ನಿಂತಿತು. ಶಾಲಿನಿ ವಿನೋದ್ ಕಡೆಗೊಮ್ಮೆ ನೋಡಿ ಕೆಳಗಿಳಿದಳು. ಈ ನಿಲ್ದಾಣದಲ್ಲಿ ಇಳಿಯುವುದಕ್ಕಿಂತ ಹೀಗೆ ಕೂತು ಮುಂದಕ್ಕೋಗುವುದೇ ವಾಸಿ ಎಂದಿತು ಅವನ ಮನ. ನಂತರವೇ ಏನೂ ಆಗುವುದಿಲ್ಲ, ಬಂಗಾರದಂತಹ ಆಕಾಶವನ್ನು ಮಣ್ಣುಪಾಲು ಮಾಡಿಕೊಳ್ಳಬೇಡವೋ ಮೂರ್ಖ ಎನ್ನುತ್ತಿದೆ.

ನಿಧಾನವಾಗಿ ಸುತ್ತಲೂ ಒಮ್ಮೆ ಕಣ್ಣು ಹಾಯಿಸಿ ಕೆಳಗಿಳಿದದ್ದೇ ತಡ ಬಸ್ಸು ಪುರ್ರನೆ ಹಾರಿಹೋಯಿತು. ಅಲ್ಲೊಬ್ಬರು ಇಲ್ಲೊಬ್ಬರಂತೆ ಓಡಾಡುತ್ತಿದ್ದಾರೆ. ವಿನೋದ್ ಹೆಚ್ಚುಕಮ್ಮಿ ಶಾಲಿನಿಯ ಹಿಂದೆಯೇ ನಡೆಯುತ್ತಿದ್ದಾನೆ. "ನೋಡಿ ಒಂದು ವಿಷಯ ನಮ್ಮ ಮನೆಯಲ್ಲಿ ಯಾರಾದರೂ ಕೇಳಿದರೆ ನಾನು ಕೆನರಾ ಬ್ಯಾಂಕಿನಲ್ಲೇ ಕೆಲಸ ಮಾಡ್ತೀನಿ ಅಂತ ಮಾಡುತ್ತೇನೆಂದು ಹೇಳಬೇಕು. ಮಿಕ್ಕಿದ್ದೆಲ್ಲ ನಾನು ನೋಡಿಕೊಳಿಸ್ತೀನಿ" ಎಂದಳು ಶಾಲಿನಿ. ವಿನೋದ್ ತಲೆಯಲ್ಲಾಡಿಸಿದ.

ಅದೊಂದು ಭವ್ಯವಾದ ಮನೆ ಅಲ್ಲದಿದ್ದರು ಮುಂದೆ ಸಣ್ಣ ತೋಟ ಇರುವ ಸ್ವಾತಂತ್ರ ಮನೆ. ಒಂದು ಮೂಲೆಯಲ್ಲಿ ಸಣ್ಣ ಪೋರ್ಟಿಕೋ ಕೂಡ ಇದೆ. ಆದರೆ ಕಾರು ನಿಂತಿರುವ ಚಿಹ್ನೆ ಮಾತ್ರ ಇಲ್ಲ. ಒಂದು ದ್ವಿಚಕ್ರ ವಾಹನ ನಿಲ್ಲುವ ಚಿಹ್ನೆಗಳಿವೆ. ಮನೆಯ ಒಳಕ್ಕೆ ನಡೆದ ಶಾಲಿನಿ ಮುಂದಿನ ಕೋಣೆಯಲ್ಲಿರುವ ಕುರ್ಚಿ ತೋರಿಸಿ ಇನ್ನೊಂದು ಕೋಣೆಯ ಒಳಕ್ಕೆ ನಡೆದಳು. ವಿನೋದ್ ಶ್ವಾಸೋಚ್ಛ್ವಾಸಗಳನ್ನು ಸ್ವಲ್ಪ ತಡೆ ಹಿಡಿದುಕೊಂಡು ಕುರ್ಚಿಯಲ್ಲಿ ಕುಳಿತುಕೊಂಡ.

ಅದೊಂದು ಮಧ್ಯ ತರಗತಿಯ ಮನೆ ಎನ್ನುವ ವಿಷಯ ಅವನಿಗೆ ಗೊತ್ತಾಗಲು ಸಮಯ ಹಿಡಿಸಲಿಲ್ಲ. ಆದರೂ ಈ ಶಾಲಿನಿಯ ವಿಚಾರ ಅವಳಂತಹ ಹೆಣ್ಣು, ಒಬ್ಬ ಗಂಡಸನ್ನು ನೇರವಾಗಿ ಮನೆಗೆ ಕರೆದುಕೊಂಡು ಬಂದಿದ್ದು, ಮಾತನಾಡುವ ಶೈಲಿ, ತುಂಡುತುಂಡಾಗಿಸುವ ಮಾತುಗಳು ಅವಳನ್ನು ಇನ್ನೂ ಅರಿಯಲಾರದಂತಹ ಒಂದು ಘಟ್ಟದಲ್ಲಿಯೇ ಹಿಡಿದು ನಿಲ್ಲಿಸಿದ್ದವು.

ಒಳಗೆ ಯಾರೋ ಶಾಲಿನಿಯ ಜೊತೆ ಮಾತನಾಡುವುದು ಕೇಳಿಸಿತು. ಸುಮಾರು ೬೫-೭೦ ವರ್ಷಗಳ ಮುದುಕ ನಿಧಾನವಾಗಿ ವಿನೋದ್ ಕುಳಿತಿರುವ ಕೋಣೆಯೊಳಕ್ಕೆ ಬಂದ. ವಿನೋದ್ ಎದ್ದು ನಿಂತು ನಮಸ್ಕರಿಸಿದ.

"ಕೂತ್ಕೊಳ್ಳಿ ಕೂತ್ಕೊಳ್ಳಿ" ಎಂದ ಮುದುಕನ ಹಿಂದೆಯೇ ಬಂದ ಶಾಲಿನಿ "ಅಪ್ಪ, ಇವರು ವಿನೋದ್ ಅಂತ ನಮ್ಮ ಬ್ಯಾಂಕ್‌ನಲ್ಲೇ ಕೆಲಸ ಮಾಡ್ತಾರೆ".

"ಹೌದಾ ಓ... ನೀನು ಮೊದಲೇ ಒಂದು ದಿನ ಹೇಳಿದ್ದೆ ಅಲ್ಲಮ್ಮಾ" ಎಂದರು.

ವಿನೋದ್ ಈಗ ಇನ್ನೊಂದು ಶಾಕ್ ಹೊಡಿಸಿಕೊಂಡಂತೆ ಕಕ್ಕಾಬಿಕ್ಕಿಯಾಗಿ

ನೋಡಿದ. ಇಬ್ಬರೂ ಸೇರಿ ಯಾವುದೋ ಒಂದು ದೊಡ್ಡ ಹಳ್ಳಾನೆ ತೋಡಿದ್ದಾರೆ ಎಂದುಕೊಂಡ. "ಕುಳಿತುಕೊಳ್ಳಿ, ಕಾಫಿ ತರುತ್ತೇನೆ" ಎಂದು ಒಳಗೆ ಹೋದಳು.

ಮುದುಕ ಎದುರಿಗೆ ಕುಳಿತ, "ಮುಪ್ಪಾದ ವಯಸ್ಸಿನಲ್ಲಿ ಹೆಚ್ಚಿನ ಜನ ತಮ್ಮ ಹಳೆಯ ನೆನಪುಗಳಲ್ಲಿ ಕಾಲ ಕಳೆಯುತ್ತಾರೆ. ಅದೇ ರೀತಿಯಲ್ಲಿ ತನ್ನ ಗತಕಾಲದ ಟೇಪನ್ನು ಬಿಚ್ಚುತ್ತಾ ಹೋದ. ಪ್ರತಿಯೊಂದು ಮಾತಿನಲ್ಲೂ ತನಗೆ ಸಂಬಂಧಿಸಿದ ವಿಷಯವೇನಾದರೂ ಇದೆಯೋ ಎನ್ನುತ್ತಾ ವಿನೋದ್ ಯೋಚಿಸಿದ. ಆದರೂ ಅವನಿಗೇನೂ ಹೊಳೆಯಲಿಲ್ಲ.

ವಿನೋದ್ ಜೊತೆಗೆ ಕಾಫಿ ಮುಗಿಸಿದ ಮುದುಕ ನಾನು ಸ್ವಲ್ಪ ಅಡ್ಡಾಡಿ ಬರುತ್ತೇನೆ. ನೀವು ಮಾತಾಡಿ ಎಂದಿದ್ದೆ ಊರುಗೋಲನ್ನು ತೆಗೆದುಕೊಂಡು ಬೀದಿಯ ಕಡೆ ನಡೆದ. ಶಾಲಿನಿ ಹೊರಗಡೆ ಕುಳಿತುಕೊಳ್ಳೋಣ ಎನ್ನುತ್ತಾ ತೋಟದ ಒಂದು ಮೂಲೆಗೆ ವಿನೋದ್‌ನನ್ನು ಕರೆದುಕೊಂಡು ಹೋದಳು. ವಿನೋದ್‌ಗೆ ಒಂದು ಸಣ್ಣ ಕುರ್ಚಿ ಹಾಕಿ ತಾನು ಇನ್ನೊಂದು ಕುರ್ಚಿಯಲ್ಲಿ ಕುಳಿತುಕೊಂಡಳು.

ವಿನೋದ್ ಶಾಲಿನಿಯ ಮುಖವನ್ನೇ ದಿಟ್ಟಿಸಿ ನೋಡಿದ. ಆ ನೋಟಕ್ಕೆ ಅವಳ ಎದೆಗಳು ಸ್ವಲ್ಪ ಭಾರವಾದಂತೆ ತೋರಿದವು. ದೊಡ್ಡ ದೊಡ್ಡ ಕಣ್ಣುಗಳು ಗುಲಾಬಿದಳಗಳಂತಹ ತುಟಿಗಳು. ಒಟ್ಟಿನಲ್ಲಿ ಸೌಂದರ್ಯ ಅವನನ್ನು ಆ ಸಾಯಂಕಾಲ ರೊಚ್ಚಿಗೆಬ್ಬಿಸಿಬಿಟ್ಟಿತ್ತು. ನೋಡುತ್ತಾ ನೋಡುತ್ತಾ ಹಿಂದಿ ಸಿನಿಮಾಗಳಲ್ಲಿ ಖಳನಾಯಕ ಸುತ್ತಾಕಿದಂತೆ ಎದ್ದು ಶಾಲಿನಿಯ ಸುತ್ತ ಒಂದು ಸುತ್ತಾಕಿದ. ಸ್ವಲ್ಪ ಆತಂಕಗೊಂಡ ಶಾಲಿನಿ, ನಿಂತಿರುವ ವಿನೋದ್ ಕಡೆಗೊಮ್ಮೆ ನೋಡಿದಳು. ವಿನೋದ್ ಗೂಳಿ ಗುಟುಕರಿಸಿದಂತೆ ಗುಟುಕರಿಸಿ ನೋಡಿದ.

"ರೀ ವಿನೋದ್ ಬನ್ನಿ, ಇಲ್ಲಿ ಕುಳಿತುಕೊಳ್ಳಿ" ಎಂದಳು.

ವಿನೋದ್ ಏನೂ ಮಾತನಾಡದೆ ಕುರ್ಚಿಯ ಮೇಲೆ ಎದುರಿಗೆ ಬಂದು ಕುಳಿತುಕೊಂಡ. ೨೯ ವರ್ಷಗಳಲ್ಲಿನ ಧೈರ್ಯವೆಲ್ಲ ಒಮ್ಮೆಲೆ ಸ್ಫೋಟಗೊಂಡಂತಿತ್ತು. ಅವನ ಮುಖದಲ್ಲೀಗ ರಕ್ತ ಎರಡರಷ್ಟು ಧಾವಿಸಿತ್ತು.

"ನೀವು ಬಹಳ ಅಂದವಾಗಿದ್ದೀರ" ವಿನೋದ್ ಹೇಳಿದ. ಶಾಲಿನಿ ಕಿಲಕಿಲನೆ ನಕ್ಕಳು.

"ಅದು ಹೇಳುವುದಕ್ಕೆ ಇಷ್ಟೊತ್ತು ಬೇಕಾಗಿತ್ತೆ" ಮತ್ತದೆ ನಗು. ಆ ನಗು ಅವನನ್ನು ಸೋಲಿಸಿದಂತೆ ಕಂಡರೂ ಅದರಲ್ಲೇ ಗೆಲುವನ್ನು ಕಂಡುಕೊಳ್ಳುವವನಂತೆ,

"ನಿಮ್ಮ" ಏನೋ ಹೇಳಲು ಹೋದ.

"ಹೇಳಿ ಪರವಾಗಿಲ್ಲ" ಎಂದಳು ಶಾಲಿನಿ.

"ನೀವು ತಪ್ಪು ತಿಳಿಯಲ್ಲಾ ತಾನೆ ?"

"ಇಲ್ಲ ಹೇಳಿ" ಮತ್ತೆ ನಕ್ಕಳು ಶಾಲಿನಿ.

ನಿಮ್ಮನ್ನು ಈಗ ಇಲ್ಲೇ ಹಿಡಿದುಕೊಂಡರೆ ಏನು ಮಾಡ್ತೀರ ?" ವಿನೋದ್ ಹೇಳಿದ.

"ಓ... ನಿಜವಾಗಲೂ ನೀವು ಒಳ್ಳೆ ಜೋಕ್ ಮಾಡ್ತೀರ" ಈಗ ಶಾಲಿನಿ ಇನ್ನಷ್ಟು ಜೋರಾಗಿ ನಕ್ಕಳು. ಕಾಡಿನಲ್ಲಿರುವ ಹೂವುಗಳೆಲ್ಲ ಒಮ್ಮೆಲೆ ಗಾಳಿಯಲ್ಲಿ ಉದುರಿಹೋದಂತೆ. "ನಿಜವಾಗಿಯೂ ಗಂಭೀರವಾಗಿ ಹೇಳುತ್ತಿದ್ದೀರ?"

"ಹೌದು, ನನ್ನ ಜೀವನದಲ್ಲಿ ಇಷ್ಟು ಗಂಭೀರ ಯಾವಾಗಲೂ ಆಗಿಲ್ಲ. "ಅಯ್ಯೋ ಪಾಪ" ಆ ಮಾತಿಗೆ ಸ್ವಲ್ಪ ಸಡಿಲಗೊಂಡ.

"ಹೌದು, ನಿಮಗೆ ಯಾರಾದರೂ ಗೆಳತಿಯರಿದ್ದಾರೆಯೇ?" "ಗೆಳತಿಯರು. ಒಬ್ಬಳೇ ಒಬ್ಬಳು ಗೆಳತಿ ಇದ್ದಿದ್ದರೆ ನಿಮ್ಮ ಹಿಂದೆ ಹೀಗೆ ತಿಪ್ಪರಲಾಗ ಹಾಕುತ್ತಿರಲಿಲ್ಲ."

"ನನ್ನನ್ನು ಯಾರಾದರೂ ರೇಪ್ ಮಾಡಿದ್ದರೆ ಎಷ್ಟು ಚೆನ್ನಾಗಿತ್ತು ಶಾಲಿನಿ ಹೇಳಿದಳು. ವಿನೋದ್ ಈಗ ತನ್ನ ತಲೆ ಕೂದಲನ್ನು ಕಿತ್ತುಕೊಳ್ಳುವುದೊಂದೇ ಬಾಕಿ ಇತ್ತು. ಮತ್ತೆ "ನನ್ನ ಮಾತುಗಳನ್ನು ಗಂಭೀರವಾಗಿ ತೆಗೆದುಕೊಳ್ಳಬೇಡಿ, ಎಲ್ಲಿಯೂ ಬರೆದುಕೊಳ್ಳಬೇಡಿ" ಎಂದಳು. ವಿನೋದ್ ಸುಮ್ಮನೆ ಶಾಲಿನಿಯ ಕಡೆ ನೋಡುತ್ತಿದ್ದ.

"ನಿನ್ನೆ ನೀವ್ಯಾರೋ ನಾವ್ಯಾರೋ...? ಈ ದಿನ ನಾವಿಬ್ಬರು ಒಂದು ಕಡೆ ಕುಳಿತಿದ್ದೇವೆ" ಎಂದಳು. ವಿನೋದ್‌ಗ್ಯಾಕೋ ಇದು ಒಳ್ಳೆ ಮೆಂಟಲ್ ಕೇಸಂತೂ ಅಲ್ಲ ತಾನೆ ಎನ್ನುವ ಸಂದೇಹ ಮೂಡಿತು. ಕತ್ತಲು ಬೆಂಗಳೂರಿನ ಮೇಲೆ ಸ್ವಲ್ಪ ಸ್ವಲ್ಪವಾಗಿ ಅಧಿಕಾರವನ್ನು ಹೆಚ್ಚಿಸುತ್ತಾ ಹೋಗುತ್ತಿತ್ತು. ವಿನೋದ್ ವಿಧವಿಧವಾಗಿ ಯೋಚಿಸಿ ನೋಡಿದ. ಆದರೆ ಶಾಲಿನಿಯನ್ನು ಯಾವ ರೀತಿಯಲ್ಲಿ ವಶಮಾಡಿಕೊಳ್ಳಬೇಕೆನ್ನುವುದೇ ಅರ್ಥವಾಗದೆ ಪೆಚ್ಚಾಗಿ ನೋಡುತ್ತಾ ಕುಳಿತುಬಿಟ್ಟ.

ಅಷ್ಟು ದೂರದಲ್ಲಿ ಶಾಲಿನಿಯ ತಂದೆ ಕೋಲೂರಿಕೊಂಡು ನಡೆದು ಬರುತ್ತಿದ್ದಾರೆ. ವಿನೋದ್ "ತುಂಬಾ ವಂದನೆಗಳು ನಾನು ಬರುತ್ತೇನೆ" ಎಂದು ಎದ್ದು ಹೊರಕ್ಕೆ ನಡೆದ.

ಶಾಲಿನಿ ಮೆಲ್ಲಗೆ ಹೇಳಿದಳು.

"ಒಳ್ಳೆ ಅವಕಾಶವಿತ್ತು. ಹಾಳು ಮಾಡಿಕೊಂಡಿರಿ. ನಮ್ಮಣ್ಣ ಬೇರೆ ಊರಿನಲ್ಲಿರಲಿಲ್ಲ, ಅದಕ್ಕೆ ನಿಮ್ಮನ್ನ ಮನೆಗೆ ಕರೆದುಕೊಂಡು ಬಂದಿದ್ದು".

"ಹೂಂ ಯಾವುದಕ್ಕೂ ಅದೃಷ್ಟವಿರಬೇಕಲ್ಲ".

ವಿನೋದ್ ಅವಳನ್ನೊಮ್ಮೆ ವಿಚಿತ್ರವಾಗಿ ನೋಡಿ, ಗೇಟ್ ತೆಗೆದುಕೊಂಡು ಹೊರನಡೆದ. ಶಾಲಿನಿ ತಂದೆ "ಹೋಗ್ತೀಯೇನಪ್ಪ, ದೇವರು ಒಳ್ಳೇದು ಮಾಡ್ಲಿ, ಹೋಗಿ ಬನ್ನಿ" ಎಂದರು. ವಿನೋದ್ ಕೈ ಮುಗಿದು ಬಂದ ದಾರಿಗೆ ಸುಂಕವಿಲ್ಲ ಎನ್ನುವಂತೆ ತಿರುಗಿ ನೋಡದೆ ನಡೆಯತೊಡಗಿದ.



ಮೆತ್ತನೆಯ ಹಾಸಿಗೆಯ ಮೇಲೆ ದರ್ಶನಾಳ ದೇಹ ಅಂಗಾತ ಬಿದ್ದಿದೆ ಹಲವು ಸುಕೋಮಲ ಲಾವಣ್ಯ ಸೌಂದರ್ಯ ರಾಶಿಗಳನ್ನೊತ್ತಿರುವ ಆ ಹಾಸಿಗೆ ಈಗ ಇನ್ನಷ್ಟು ಚೆಲುವನ್ನು ತುಂಬಿಕೊಂಡಿದೆ.

ಫ್ರಿಜ್‌ನಲ್ಲಿದ್ದ ಬ್ಯಾಗ್‌ಪೈಪರ್ 1000 ತೆಗೆದುಕೊಂಡು ಎರಡು ಪೆಗ್ ಸುರಿಸಿಕೊಂಡ ಹೀರೋ ಜೊತೆಗೆ ಬಿಸಿಲೇರಿ ಲವಣದ ನೀರು ಮತ್ತು ಐಸ್‌ಕ್ಯೂಬ್‌ಗಳನ್ನು ಹಾಕಿಕೊಂಡು ನಿಧಾನವಾಗಿ ಹೀರಿ, ದರ್ಶನಾಳ ಮೇಲಿದ್ದ ವಸ್ತ್ರಗಳನ್ನು ಸಾವಕಾಶವಾಗಿ ಬೇರ್ಪಡಿಸತೊಡಗಿದ. ರಾತ್ರಿಯ ತಂಪು ಬೆಳಕು ಕೋಣೆಯ ತುಂಬಾ ಹುಣ್ಣಿಮೆಯ ಬೆಳದಿಂಗಳಂತೆ ತುಂಬಿಕೊಂಡಿದೆ. ದರ್ಶನಾಳ ಮೈಮೇಲಿದ್ದ ವಸ್ತ್ರಗಳನ್ನೆಲ್ಲ ಅವಳಿಂದ ಬಲು ದೂರ ಎಂಬಂತೆ ಬಿಸಾಡಿದ.

ಆಕರ್ಷಣೀಯವಾದ, ಕಲೆಗಾರನಿಗೂ ಸಿಗಲಾರದ ವರ್ಣಮಯ ದೇಹ, ತುಂಬು ತೊಡೆಗಳು, ಮಧ್ಯೆ ಕಪ್ಪು ರೋಮರಾಶಿ, ನಿತಂಬಗಳಿಂದ ಬಳ್ಳಿಯಂತೆ ಬಗ್ಗಿ ಜಿಗಿದು ಮತ್ತೆ ಎತ್ತರಕ್ಕೇರಿರುವ ಎತ್ತರದ ಆ ಎದೆಯ ಭಾಗಗಳು. ಕುಡಿದಿರುವ ಮಧ್ಯ ಸಣ್ಣದಾಗಿ ಒಡಲಲ್ಲೊಂದು ಕಿಕ್ ಕೊಟ್ಟು, ತಲೆ ಗಿರ್ರನೆ ಒಂದು ಗಿರಿಕಿ ಹೊಡೆಯಿತು. ಮಂತ್ರಮುಗ್ಧವಾಗಿ ಆ ಚೆಲುವು ರಾಶಿಯನ್ನೇ ನೋಡುತ್ತಾ ನಿಂತುಬಿಟ್ಟ.

ತಾನು ಮರುಕ್ಷಣದಲ್ಲಿಯೇ ನಗ್ನನಾಗಿ ಅವಳ ಪಕ್ಕಕ್ಕೆ ಸೇರಿಕೊಂಡ. ದೀರ್ಘವಾಗಿ ಹೀರುತ್ತಾ ಎರಡು ಕೈಗಳಲ್ಲೂ ತುಂಬಿಕೊಂಡು ಅವಳ ಕೆಂದುಟಿಗಳನ್ನು ಆದಷ್ಟು ದೀರ್ಘವಾಗಿ ಹೀರುತ್ತಾ ಹೀರುತ್ತಾ ಆನಂದಿಸಿದ.

ಮಧ್ಯದಲ್ಲಿ ಆಗಾಗ ಸ್ವಲ್ಪ ಸ್ವಲ್ಪವಾಗಿ ಕುಡಿಯುತ್ತಾ ಅವಳ ಒಂದೊಂದು ಕೋಮಲ ಅಂಗಗಳ ಜೊತೆ ಆಟವಾಡುತ್ತಾ ಆಡುತ್ತಾ ಗೋಡೆಯಲ್ಲಿನ ಗಡಿಯಾರವನ್ನು ಆಗಾಗ ಗಮನಿಸುತ್ತಲೇ ಇದ್ದಾನೆ. ಒಂಬತ್ತು ಗಂಟೆಗೆ ಮತ್ತದೇ ಹೋಟೆಲ್ ಕುರ್ಚಿಗಳಲ್ಲಿ ಕುಳ್ಳಿರಿಸಿಕೊಂಡು ಅವಳಿಗೆ ಪ್ರಜ್ಞೆ ಬಂದಾಗ ಏನೂ ನಡೆದೇ ಇಲ್ಲ ಎನ್ನುವಂತೆ ನಟಿಸಿ ಅವಳನ್ನು ಕಳುಹಿಸುವುದು ಅವನ ಉಪಾಯ.

ಮೃದುವಾದ ಕೋಮಲ ಸ್ತನಗಳನ್ನು ತುಂಬಿಕೊಂಡಿರುವ ಅವನ ಕೈಗಳು ಸಡಿಲಗೊಂಡವು. ಗೋಡೆಯಲ್ಲಿರುವ ಕ್ವಾರ್ಟ್ಸ್ ಗಡಿಯಾರ ತನ್ನ ಹೃದಯದ ಸದ್ದನ್ನು ಹೆಚ್ಚಿಸಿಕೊಂಡು ಚೆಕ್ ಚೆಕ್ ಎಂದು ನಡೆಯುತ್ತಿದೆ.

ಎಷ್ಟೋ ಹೆಣ್ಣುಗಳ ಜೊತೆ ಲೈಂಗಿಕ ಸಂಪರ್ಕ ನಡೆಸಿದ್ದರೂ, ಆ ಹೆಣ್ಣುಗಳು ಬಸಿರಾಗದಂತೆ ನೋಡಿಕೊಂಡಿದ್ದಾನೆ. ನಿಧಾನವಾಗಿ ಯಾವ ರೀತಿಯ ತರಾತುರಿಯೂ ಇಲ್ಲದೆ ಯತಾಪ್ರಕಾರ ಅವಳ ವಸ್ತ್ರಗಳನ್ನು ತೊಡಿಸಿದ.

ಏನೋ ಒಂದು ರೀತಿಯಲ್ಲಿ ಎಲ್ಲಿಯೋ ಆಳದಲ್ಲಿ ಅಂತರಾಳದ ಸ್ಮೃತಿಪಟಲದಲ್ಲಿ ಚಿತ್ರವಿಚಿತ್ರಗಳ ಸಮ್ಮಿಲನದಲ್ಲಿ ಕಲ್ಪನೆಯ ರಂಗೋಲಿ ಮೂಡುತ್ತಿದೆ. ಈಗಲೇ ತಾಯಿಯ ಗರ್ಭದಿಂದ ಹೊರಕ್ಕೆ ಬಂದ ಶಿಶು ಪೃಥ್ವಿಯ ವಾತಾವರಣಕ್ಕೆ ಒಗ್ಗಿಕೊಳ್ಳಲು ಮೊಟ್ಟಮೊದಲಿಗೆ ಪ್ರಯತ್ನ ಪಡುವಂತೆ ದರ್ಶನಾಳ ಕಣ್ಣುಗಳು ತುಡಿಯುತ್ತಿವೆ.

ದರ್ಶನಾಳಿಗೆ ಬಟ್ಟೆಗಳನ್ನು ತೊಡಿಸಿ ಅಂಗಿಗೆ ಬಟನ್‌ಗಳನ್ನು ಹಾಕುತ್ತಿದ್ದಾಗ, ಸಣ್ಣಗೆ ಮುಲುಗುತ್ತಿರುವ ಸದ್ದನ್ನು ಕೇಳಿಸಿಕೊಂಡ ಅವನು ಇನ್ನೊಂದು ಗುಳಿಗೆಯನ್ನು ಕುಡಿಸಲು ತನ್ನ ವಸ್ತ್ರಗಳಲ್ಲಿ ಹುಡುಕುತ್ತಿದ್ದಾನೆ. ಆದರೆ ಜೇಬಿನಲ್ಲಿದ್ದ ಆ ಗುಳಿಗೆಗಳು ಎಲ್ಲೋ ಬಿದ್ದು ಹೋಗಿರುವುದರಿಂದ ತಕ್ಷಣ ಸಿಗದೆ, ಕಪಾಟಿನಲ್ಲಿರುವ ಗುಳಿಗೆಗಳನ್ನು ತೆಗೆದುಕೊಂಡು ಬರುವುದರೊಳಗೆ ದರ್ಶನಾ ಗಾಬರಿಯಿಂದ ಎದ್ದು ಕುಳಿತು ಸುತ್ತಲು ನೋಡುತ್ತಾಳೆ ಅಷ್ಟೇ?

ಹತ್ತಿರ ಬರುತ್ತಿರುವ ಅವನನ್ನು ನೋಡಿದ ದರ್ಶನಾ ಚಿಟ್ಟನೆ ಚೀರಿಕೊಳ್ಳುತ್ತಾಳೆ. ಚಿರತೆಯಂತೆ ಅವಳ ಕಡೆ ಹಾರಿ ಬಾಯನ್ನು ಒಂದು ಕೈಯಲ್ಲಿ ಮುಚ್ಚಿ ಜೇಬಿನಲ್ಲಿದ್ದ ಪಿಸ್ತೂಲನ್ನು ಎದೆಗಿಟ್ಟು ಒಂದು ಮಾತ್ರೆಯನ್ನು ನುಂಗು ಎನ್ನುತ್ತಾ ಬಾಯಲ್ಲಿ ತುರುಕಿ ನೀರು ಕುಡಿಸುತ್ತಾನೆ.

ಚಿರತೆಯಿಂದ ಕತ್ತು ಮುರಿಸಿಕೊಳ್ಳುವ ಜಿಂಕೆಯಂತೆ ಅವನ ಕೈಗಳಲ್ಲಿ ಮತ್ತೊಮ್ಮೆ ಕುಸಿದು ಬೀಳುತ್ತಾಳೆ ದರ್ಶನಾ. ತುಸು ಚಿಂತಾಕ್ರಾಂತನಾದ ಹೀರೋ, ಒಂದು ಘಳಿಗೆ ಯೋಚಿಸಿದ. ಅವಳಿಗೆ ಕುಡಿಸಿದ್ದ ಮಾತ್ರೆ ಸರಿಯಾಗಿ ಕೆಲಸ ಮಾಡದಾಗಿ, ಅವನು ತಿಳಿದಿದ್ದ ಸಮಯಕ್ಕಿಂತ ಮುಂಚೆಯೇ ಪ್ರಜ್ಞೆ ಬಂದುದ್ದಲ್ಲದೆ, ಅವನ ಮನೆ, ಅವನ ಇಷ್ಟು ವರ್ಷಗಳ ಸ್ವರ್ಗದ ಗುಟ್ಟು ಎಲ್ಲವೂ ಎರಡೇ ಕ್ಷಣಗಳಲ್ಲಿ ದರ್ಶನಾಳ ಬೆರಳು ತುದಿಗಳಲ್ಲಿ ನಿಂತುಬಿಟ್ಟವು.

ಒಂದು ಕ್ರೂರ ಯೋಚನೆ ಅವನ ಮಿದುಳಲ್ಲಿ ಮಿಂಚಿ ಮಾಯವಾಯಿತು. ಇಲ್ಲಿಯವರಿಗೂ ಆ ರೀತಿಯ ಗೊಂದಲಕ್ಕೆ ಸಿಕ್ಕದ ಅವನು ಮತ್ತೊಮ್ಮೆ ಆಳವಾಗಿ, ದೀರ್ಘವಾಗಿ ಪ್ರಪಂಚವೇ ಅವನ ವಿರುದ್ಧ ನಿಂತಂತೆ ಚಿಂತಿಸಿದ.

ಸ್ಕಾಟ್‌ಲ್ಯಾಂಡ್ ಯಾರ್ಡ್‌ನ ಜಾಕ್ ದೀ ರಿಪ್ಪರ್‌ನಷ್ಟು ಕ್ರೂರವಾದ ಕಠೋರತೆ ಅವನ ರಕ್ತದಲ್ಲಿ ಇಲ್ಲದೆಯೋ ಅಥವಾ ಆ ಗುಲಾಬಿಯ ನುಣುಪು ಸೌಂದರ್ಯವನ್ನು ಹಿಸುಕಿ ಸಾಯಿಸಲಾರದೆಯೋ ಏನೋ ಅವನ ಮನಸ್ಸು ಇನ್ನೊಂದು ಕೋನದಲ್ಲಿ ಯೋಚಿಸತೊಡಗಿತು.

ಕ್ವಾರ್ಟ್ಸ್ ಗಡಿಯಾರವನ್ನೊಮ್ಮೆ ನೋಡಿ ತನ್ನ ಬಟ್ಟೆಗಳನ್ನು ಬದಲಿಸಿಕೊಂಡು ತಲೆಯ ಮೇಲೊಂದು ಕ್ಯಾಪ್ ಇಟ್ಟುಕೊಂಡು ಹೊರಗೆ ಬಂದು ಸುತ್ತಲೂನೋಡಿದ. ಬೆಳದಿಂಗಳು ವಿದ್ಯುತ್ ದೀಪಗಳ ಜೊತೆ ಸರಸ ಆಡಿಕೊಳ್ಳುತ್ತಿದೆ. ಹಸುರು ಮರಗಳು ರಾತ್ರಿಯ ತಂಪಿನಲ್ಲಿ ಇನ್ನಷ್ಟು ವೇಗವಾಗಿ ಶ್ವಾಸೋಚ್ಛ್ವಾಸ ಮಾಡುತ್ತಿವೆ.

ನಮ್ಮ ಹೀರೊ ಕಾರಿನ ಮೇಲಿದ್ದ ಸಂಖ್ಯೆ ಪ್ಲೇಟನ್ನು ತೆಗೆದು ಇನ್ನೊಂದು ಸಂಖ್ಯೆ ಪ್ಲೇಟನ್ನು ಅಲ್ಲಿ ಸಿಕ್ಕಿಸಿ ಮತ್ತೆ ಮನೆ ಒಳಕ್ಕೆ ನಡೆದು ಮೇಕಪ್ ಕನ್ನಡಿಯ ಮುಂದೆ ನಿಂತು ತನ್ನ ಮುಖಚರ್ಯೆಯನ್ನು ಇನ್ನಷ್ಟು ಬದಲಿಸಿಕೊಂಡು ದರ್ಶನಾಳ ಹತ್ತಿರ ಬಂದು ನಿಂತುಕೊಂಡ.

ಅವಳ ಸೌಂದರ್ಯವನ್ನು ಮತ್ತೊಮ್ಮೆ ಸವಿಯುವ ಬಯಕೆ ಅವನಲ್ಲಿ ಮೂಡಿದರೂ, ಈಗ ಆಗಿರುವ ತಾತ್ಕಾಲಿಕ ಅಡಚಣೆಯನ್ನು ನಿಭಾಯಿಸಿಕೊಳ್ಳುವಂತೆ ಅವನ ಮನ ಪ್ರೇರೇಪಿಸುತ್ತಿದೆ. ಈಗ ಕುಡಿಸಿರುವ ಗುಳಿಗೆ ಇನ್ನೂ ಸುಮಾರು ಎರಡು ಗಂಟೆ ಅವಳಿಗೆ ಪ್ರಜ್ಞೆ ಮೂಡಿಸಲಾರದು. ಈಗಾಗಲೇ ಅವನ ಈ ಲೆಕ್ಕಾಚಾರಗಳನ್ನು ತಲೆಕೆಳಗಾಗಿ ತಾನು ಕುಡಿಸಿದ ಗುಳಿಗೆ ಒಂದನ್ನು ತೆಗೆದುಕೊಂಡು ಪರೀಕ್ಷಿಸಿ ನೋಡಿದ. ಅವನು ಕೊಡಬೇಕಾಗಿರುವ ಗುಳಿಗೆಯನ್ನೇ ಕೊಟ್ಟಿದ್ದಾನೆ. ಆದರೆ ಸತತವಾಗಿ ಎರಡು ಸಲ ಒಂದೊಂದು ಗುಳಿಗೆ ಕೊಟ್ಟಿರುವುದರಿಂದ ಅವಳ ದೇಹದ ಮೇಲೆ ಯಾವ ರೀತಿಯ ಪರಿಣಾಮ ಬೀರುವುದೋ ಎನ್ನುವ ಭಯ ಬೇರೆ. ಒಟ್ಟಿನಲ್ಲಿ ಪ್ರಾಣಕ್ಕೆ ಯಾವ ರೀತಿಯ ತೊಂದರೆಯೂ ಆಗಲಾರದು ಎನ್ನುವ ದೃಢ ನಂಬಿಕೆ ಅವನಿಗೆ ಇದೆ.

ಸಮಯ ತನ್ನ ಪಾಡಿಗೆ ತಾನು ಹಿಂದಕ್ಕೆ ತಿರುಗಿ ನೋಡದೆ ಗುರಿ ಸಲ್ಲದ ಸ್ಥಳಕ್ಕೆ ಪ್ರಯಾಣಿಸುತ್ತಿದೆ. ಹಗುರವಾದ ಸೌಂದರ್ಯರಾಶಿಯನ್ನು ಅಪ್ಪಿಕೊಂಡು ಮೃದುವಾಗಿ ನಡೆಸಿಕೊಂಡು ಬಂದು ಕಾರಿನ ಮುಂದಿನ ಸೀಟಿನಲ್ಲಿ ಕೂರಿಸಿ ಬಾಗಿಲನ್ನು ಮುಚ್ಚಿದ. ಮತ್ತೆ ತನಗೆ ಬೇಕಾಗಿರುವ ವಸ್ತುಗಳನ್ನು ಮತ್ತೊಮ್ಮೆ ನೋಡಿ ಖಚಿತಪಡಿಸಿಕೊಂಡು ಮನೆಗೆ ಬೀಗಹಾಕಿ ಕಾರಿನ ಒಳಕ್ಕೆ ಸೇರಿಕೊಂಡ.

ಅವನ ಆ ಗುಪ್ತ ಚಟುವಟಿಕೆಗಳನ್ನು ದೀಪಗಳು ಮತ್ತು ಸುತ್ತಲಿರುವ ಮರಗಳು ಭಯದಿಂದ ನೋಡುತ್ತಿದೆ.

ಕಾರು ನಿಧಾನವಾಗಿ ರಸ್ತೆಗೆ ಇಳಿದು ಓಡುತ್ತಾ ಬೆಂಗಳೂರು ಅರಮನೆಯ ಹತ್ತಿರಕ್ಕೆ ಬಂದು ನಿಂತಿತು. ಓಡಿ ಬಂದ ಕಾವಲುಗಾರ ಕಾರು ನಿಲ್ಲುವ ಜಾಗ ತೋರಿಸಿ ಪಕ್ಕಕ್ಕೆ ನಿಂತುಕೊಂಡ. ತನ್ನ ಪೂರ್ಣ ಮುಖವನ್ನು ತೋರಿಸದೆ ಕಾರಿನಲ್ಲೇ ಕುಳಿತುಕೊಂಡು ಕಾವಲುಗಾರನ ಕೈಯಲ್ಲಿ ಒಂದು ನೋಟನ್ನು ಇಟ್ಟ. ಕಾವಲುಗಾರ ಹುಲ್ಲಿನ ಮೇಲೆ, ಗಿಡಗಳ ಕೆಳಗೆ ಒಂದು ಜಾಗ ತೋರಿಸಿದ. ಕಾರಿಂದ ಇಳಿದ ಅವನು ಬಾಗಿಲನ್ನು ನಿಧಾನವಾಗಿ ತೆರೆದುಕೊಂಡು ಬೆಳದಿಂಗಲ ಬಾಲೆಯನ್ನು ಆ ಅರೆಕೊರೆ ಕತ್ತಲ ಮಧ್ಯೆ ನಡೆಸಿಕೊಂಡು ಬಂದು ಹುಲ್ಲಿನ ಮೇಲೆ ಕೂರಿಸಿಕೊಂಡ.

ಶಹಜಹ್ಹಾನ್ "ತಾಜ್‌ಮಹಲ್" ಕಟ್ಟಿಸಿ ಯಮುನಾ ನದಿಯ ದಡದಲ್ಲಿ ತೇಲುವ ಬೆಳದಿಂಗಳ ಮೋಡಗಳಲ್ಲಿ ಮಮತಾಜ್‌ಳ ಜೊತೆ ಕುಳಿತುಕೊಂಡು ಎಂದೂ ಆನಂದಿಸಲಿಲ್ಲ. ಆದರೆ ಎಷ್ಟೋ ಗಂಡು ಹೆಣ್ಣುಗಳು ಬೆಳದಿಂಗಳ ರಾತ್ರಿಗಳಲ್ಲಿ ತಾಜ್‌ಮಹಲ್ ಮುಂದೆ ಯಮುನಾ ನದಿಯ ದಡದ ಮೇಲೆ ಕುಳಿತು ಇಂದಿಗೂ ಆನಂದಿಸುತ್ತಾರೆ.

ಈ ೪೫೪ ಎಕರೆಯ ಬೆಂಗಳೂರಿನ ಅರಮನೆಯ ಮೈದಾನದಲ್ಲಿ ಹೀರೋ ಯಾವ ಸಂಕೋಚವೂ ಇಲ್ಲದೆ ಒಂದು ಅದ್ಭುತ ಅನುಭವವನ್ನು ಪುಕ್ಕಟೆಯಾಗಿ ಪಡೆಯುತ್ತಿದ್ದಾನೆ.

ಕಾವಲುಗಾರ ಕಾರಿನ ಹತ್ತಿರ ಹೋಗಿ ಆವನನ್ನೊಮ್ಮೆ ಆಳವಾಗಿ ಪರೀಕ್ಷಿಸುವಂತೆ ನೋಡಿದ. ತಾನು ಅಲ್ಲಿಂದ ಕಾಲು ಕಿತ್ತುಕೊಳ್ಳಬೇಕಾಗಿರುವ ಸಮಯ ಹತ್ತಿರವಾಗಿ ಸುತ್ತಲೂ ಒಮ್ಮೆ ನೋಡಿ ಕಾವಲುಗಾರನನ್ನು ಕರೆದು ಕೈಗೆ ಒಂದು ನೋಟನ್ನು ಕೊಟ್ಟು ಸಿಗರೇಟ್ ಪ್ಯಾಕನ್ನು ತರುವಂತೆ ಹೇಳಿದ.

ಕಾವಲುಗಾರ ಆ ಕಡೆ ಹೋದ, ಅಷ್ಟೇ.

ಹೀರೋ ದರ್ಶನಾಳನ್ನು ಒಂದು ಕಲ್ಲು ಕುರ್ಚಿಯಲ್ಲಿ ಕೂರಿಸಿ ಕಾರನ್ನು ನಿಧಾನವಾಗಿ ಡ್ರೈವ್ ಮಾಡುತ್ತಾ ರಸ್ತೆಗಿಳಿಸಿಬಿಟ್ಟ. ಕಾರಿನ ಸಂಖ್ಯೆ ಪ್ಲೇಟ್ ಯಾವಾಗಲೋ ಬೇರೆಯಾಗಿತ್ತು. ತಲೆಯ ಮೇಲಿನ ಕ್ಯಾಪ್‌ನ್ನು ತೆಗೆದು ಪಕ್ಕದಲ್ಲಿಟ್ಟುಕೊಂಡು ತಲೆಯನ್ನೊಮ್ಮೆ ಸವರಿಕೊಂಡ.

ಸುಮಾರು ಹೊತ್ತಾದ ಮೇಲೆ ಪ್ರಜ್ಞೆ ಬಂದ ದರ್ಶನಾ ಸುತ್ತಲೂ ನೋಡಿ ತಬ್ಬಿಬ್ಬಾಗಿ ಬಿಟ್ಟಳು. ಹತ್ತಿರ ನಿಂತಿರುವ ಕಾವಲುಗಾರ ಏನೂ ಅರ್ಥವಾಗದೆ ಮಿಕಮಿಕನೆ ನೋಡುತ್ತಿದ್ದಾನೆ.

"ಇದು ಯಾವ ಜಾಗ ?" ದರ್ಶನಾಳ ಪ್ರಶ್ನೆಗೆ ಮತ್ತೊಮ್ಮೆ ತಬ್ಬಿಬ್ಬಾದ ಕಾವಲುಗಾರ "ಅರಮನೆ ಬೆಂಗಳೂರು ಅರಮನೆ" ಎಂದ.

"ಹತ್ತಿರದ ಬಸ್ ನಿಲ್ದಾಣ ಎಷ್ಟು ದೂರದಲ್ಲಿದೆ ?"

"ಇಲ್ಲೆ, ಅದೋ ಅಲ್ಲಿ ನೋಡಿ ದೊಡ್ಡ ದೀಪ ಕಾಣಿಸುತ್ತಿದೆಯಲ್ಲಾ ಅದೇ ನಿಲ್ದಾಣ".

"ಅದು ಸರಿ, ನೀವು ಎಲ್ಲಿಗೆ ಹೋಗಬೇಕು ? ಕಾರಿನಲ್ಲಿದ್ದವರು ಯಾರು ? ನಿಮ್ಮ" ಅವನ ಪ್ರಶ್ನೆಗಳನ್ನು ಕೇಳಿಸಿಕೊಳ್ಳದವಳಂತೆ ಆ ದೀಪದ ಕಡೆಯೇ ನೋಡುತ್ತಾ ನಡೆಯತೊಡಗಿದಳು. ಅಷ್ಟರಲ್ಲಿ ಎದುರಿಗೆ ಬರುತ್ತಿದ್ದ ಆಟೋ ನಿಲ್ಲಿಸಿ ತಾನು ಹೋಗಬೇಕಾಗಿರುವ ಸ್ಥಳ ಹೇಳಿದಳು. ಆಟೋ ಬುರ್ರನೆ ಶಬ್ದಮಾಡುತ್ತಾ ಓಡತೊಡಗಿತು. ಅವಳ ಮೈಯೆಲ್ಲಾ ಸಣ್ಣಗೆ ಕಂಪನಗೊಂಡು ಬಿಸಿ ಏರಿದಂತಾಯಿತು. ಎದೆಗೆ ಸುಯ್ಯನೆ ರಾಚುತ್ತಿದ್ದ ತಂಪುಗಾಳಿಗೆ ಅಡ್ಡವಾಗಿ ತನ್ನೆರಡು ಕೈಗಳನ್ನು ಮಡಚಿಕೊಂಡಳು. ಕೈಗೆ ಏನೋ ವಸ್ತು ಸಿಕ್ಕಿದಂತಾಗಿ ಹೊರಕ್ಕೆ ತೆಗೆದು ನೋಡಿದಳು.

ಮಡಿಚಿಟ್ಟಿದ್ದ ಒಂದು ಕಾಗದ ಬಿಚ್ಚಿ ಆಟೋ ಡ್ರೈವರನ್ನು ಲೈಟಾಕುವಂತೆ ಹೇಳಿದಳು. ಡ್ರೈವರ್ ಸ್ವಿಚ್ಚನ್ನು ಒತ್ತಿದ. ಟೈಪ್ ಮಾಡಿದ ಮೂರು ಇಂಗ್ಲೀಷ್ ವಾಕ್ಯಗಳು. 'ಡಿಯರ್ ದರ್ಶನಾ' –

ದಯವಿಟ್ಟು ನನ್ನನ್ನು ಕ್ಷಮಿಸುವುದು.

ನೀನು ಬಸಿರಿಯಾಗುವಂತೆ ನಾನು ನಡೆದುಕೊಂಡಿಲ್ಲ.

ಇದೊಂದು ಕನಸೆಂದುಕೊಂಡು ಮರೆತುಬಿಡುವುದು.

ಕಾಗದವನ್ನು ಚೂರು ಚೂರು ಮಾಡಿ ಹೊರಕ್ಕೆಸೆದಳು. ಡ್ರೈವರ್ ದೀಪದ ಸ್ವಿಚ್ಚನ್ನು ಮತ್ತೊಮ್ಮೆ ಒತ್ತಿದ.



ಭ್ರಮೆಯ ಅಸ್ತಿತ್ವವಿಲ್ಲದೆ ಜಗತ್ತಿನ ಅಸ್ತಿತ್ವವೆ ಇಲ್ಲ.

ನಾವು ಇದೇ ಎಂದು ಭ್ರಮಿಸುವುದೇ ಜಗತ್ತು

ಗಂಡು ಹೆಣ್ಣಿನ ಹಿಂದೆ, ಹೆಣ್ಣು ಗಂಡಿನ ಹಿಂದೆ

ಇರುವುದೇ ಜಗತ್ತು.

೩೩:೫೦ ೨೨:೫೦ರ ಪ್ರಾಚೀಯ ಸಂಖ್ಯೆಗಳು ತುಸು ಸಡಿಲಗೊಂಡು ೩೪:೦೦ ೨೨:೫೦ ೩೪:೦೦ರ ಸಂಖ್ಯೆಗಳಲ್ಲಿ ಸಿಕ್ಕಿಕೊಂಡಿದ್ದಾಳೆ. ಹಗುರವಾದ ವ್ಯಾಯಾಮದ ಜೊತೆಗೆ ಆಗಾಗ ತನ್ನ ಸಂಖ್ಯೆಗಳನ್ನು ಅಳತೆ ಮಾಡಿಕೊಳ್ಳುತ್ತಲೇ ಇರುತ್ತಾಳೆ. ಬೆನ್ನು

ತುಂಬ ಕಸೂತಿಯ ಹೂವುಗಳಿರುವ ತೆಳು ಸ್ಲೀವ್‌ಲೆಸ್ ಕುಪ್ಪಸದ ಜೊತೆಗೆ ಬಂಗಾರಬಣ್ಣದ ಸಣ್ಣ ಜರಿ, ದೊಡ್ಡ ದೊಡ್ಡ ಹೂವುಗಳು ಬಂದಿರುವ ಸೀರೆ ತೊಟ್ಟಿದ್ದಾಳೆ. ಸೀರೆ ಹೊಕ್ಕಳಿಗಿನ್ನ ಕೆಳಗಿದ್ದು ಮಧ್ಯ ಪಚ್ಚನೆಯ ಮೈದಾನ ವಿಶಾಲವಾಗಿ ಹರಡಿಕೊಂಡಿದೆ. ಹಣೆಯಲ್ಲಿ ಸಣ್ಣದಾದ ಕೆಂಪು ಬೊಟ್ಟು, ಕೆನ್ನೆಯ ಮೇಲೆ ಒಂದು ಸಣ್ಣ ಕಪ್ಪು ಚುಕ್ಕೆ ಪವನ್‌ನನ್ನು ರೇಗಿಸುವಂತಿದೆ.

ಶೃಂಗಾರ ಮೇಜಿನ ಮುಂದಿನಿಂದ ಹಂಸದಂತೆ ಬಂದ ಪ್ರಾಚಿ ಪವನ್‌ನ ಮುಂದೆ ನಿಂತುಕೊಂಡಳು. ಈಗಾಗಲೇ ಸ್ನಾನ ಮಾಡಿರುವ ಪವನ್ ಪ್ರಾಚಿಯನ್ನು ದೀರ್ಘವಾಗಿ ಒಮ್ಮೆ ನೋಡಿ ಏನೋ ಬಲಹೀನಗೊಂಡವನಂತೆ ಪ್ರಾಚಿಯ ಸನಿಹಕ್ಕೆ ಬಂದು ಹತ್ತಿರದಿಂದ ಹೃದಯದೊಳಕ್ಕೆ ಇಣಿಕಿ ನೋಡಿದ.

ಅವಳ ಕಣ್ಣುರೆಪ್ಪೆಗಳು ನೀರಿನಲ್ಲಿನ ಮರಿ ಮೀನುಗಳಂತೆ ಓಡಾಡಿದರೆ, ಅವಳ ಚಂಚಲ ಮನ ಬೆಳದಿಂಗಳಾಗಿ ತುಟಿಗಳಿಂದ ಕೆಳಕ್ಕೆ ಜಾರಿತು. ಹಗುರವಾಗಿ ಪ್ರಾಚಿಯನ್ನು ತಬ್ಬಿಕೊಂಡ ಪವನ್ ಕಿವಿಯಲ್ಲಿ ಏನೋ ಹೇಳಿದ. ಪ್ರಾಚಿ ಒಪ್ಪಿಕೊಳ್ಳಲಿಲ್ಲ. ಬೇಕಾದರೆ ನಾಳೆ ಇಬ್ಬರು ಕೂಡಿ ಸ್ನಾನಮಾಡೋಣವೆಂದು ಸಮಾಧಾನ ಪಡಿಸಿದಳು.

ಬೆಳಿಗ್ಗೆಯ ಮೂಡ್ ಔಟ್ ಮಾಡಿಕೊಂಡ ಪವನ್ ಒಲ್ಲದ ಮನಸ್ಸಿನಿಂದ ಬ್ರೀಫ್‌ಕೇಸ್ ತೆಗೆದುಕೊಂಡು ಎಂದಿನಂತೆ ಪ್ರಾಚಿಯಿಂದ ಬೇರ್ಪಟ್ಟು ಕಚೇರಿಯ ಕಾರಿನಲ್ಲಿ ಕುಳಿತುಕೊಂಡ.

ಪವನ್ ತನ್ನ ಜೀವನದ ಮತ್ತೊಂದು ದಿನ, ವಿದ್ಯಾರ್ಥಿ ಪರೀಕ್ಷೆಗೆ ಹೋಗುವಂತೆ ಹೋಗುತ್ತಿದ್ದಾನೆ. ಆದರೆ ಒಂದು ವ್ಯತ್ಯಾಸ, ಈಗ ಪರೀಕ್ಷೆಗೆ ಕಾಲೇಜಿಗೆ ಹೋಗದೆ ಕಾರಿನಲ್ಲಿ ಕಚೇರಿಗೆ ಹೋಗುತ್ತಿದ್ದಾನೆ.

ಬರುವ ವಾರ ಇದೇ ದಿನ ಇದೇ ಸಮಯ ಎಂದಿರುವ ಆ ಮಧುರ ಸ್ವರ ಅವನ ಕಿವಿಗಳಲ್ಲಿ ಜೀವಂತವಾಗಿ ಗುಯ್ ಗುಟ್ಟುತ್ತಲೇ ಇದೆ. ಆ ಮಾತುಗಳನ್ನು ತಿಳಿದುಕೊಂಡಾಗೆಲ್ಲ ಅವನ ಮನಸ್ಸು ಇನ್ನಷ್ಟು ಮತ್ತಷ್ಟು ಉಲ್ಲಾಸದ ಜೊತೆಗೆ ಕುತೂಹಲಗೊಳ್ಳುತ್ತದೆ. ತನ್ನಲ್ಲೇ ತಾನು ಕಲ್ಪನಾ ಊಹೆಯಲ್ಲಿ ವಿಹರಿಸುತ್ತಾನೆ.

ಹೆಂಡತಿ ಎಷ್ಟೇ ಸೌಂದರ್ಯವತಿಯಾದರೂ, ಗಂಡನಿಗೆ ತನ್ನ ಸೌಂದರ್ಯದ ಜೊತೆ ಎಲ್ಲಾ ವಿಧದಲ್ಲೂ ತೃಪ್ತಿಯನ್ನು ಈಡೇರಿಸುವಂತವಳಾದರೂ, ಗಂಡಸರು ಬೇರೆ ಹೆಣ್ಣಿನ ಸೆರಗು ತುಸುವೆ ಜಾರಿದರೂ ಸಾಕು, ಅಲ್ಲೋಲಕಲ್ಲೋಲವಾಗಿ ಬಿಡುತ್ತಾರೆ. ಗಂಡಸಿಗಿರುವ ಒಂದು ದೊಡ್ಡ ಬಲಹೀನವಿದು.

ಪವನ್ ಕೂಡ ಅಷ್ಟೇ ಇನ್ನೊಂದು ರೀತಿಯಲ್ಲಿ ಆ ಸ್ವರದ ಹಿಂದಿನ

ಸೌಂದರ್ಯ ಜ್ಞಾನಕ್ಕೆ ಶಿಕಾರಿಯಾಗಿದ್ದಾನೆ. ತೀವ್ರವಾಗಿ ಆಗಾಗ ಯೋಚಿಸುತ್ತಾನೆ. ಈ ಸ್ವರದ ಹಿಂದಿರುವ ಹೆಣ್ಣಾದರೂ ಯಾರು? ಅವಳ ಉದ್ದೇಶವಾದರೂ ಏನು? ಎಲ್ಲಿಯಾದರೂ ಪ್ರಾಚಿಯೆ ಈ ರೀತಿಯಾಗಿ ತನ್ನನ್ನು ಶೋಧಿಸುತ್ತಿರಬಹುದೆ? ನಾನೇ ಈ ಮಾತನ್ನು ಪ್ರಾಚಿಗೆ ತಿಳಿಸಿಬಿಡಲೇ? ತಿಳಿಸಿದರೆ ಇನ್ನಷ್ಟು ರಂಪವಾಗಿ ದೊಡ್ಡದಾಗಬಹುದು, ಇದರ ಜೊತೆಗೆ ಯಾರೋ ತಲೆಹರಟೆ ಪ್ರಾಚಿಗೆ ಫೋನ್ ಮಾಡುತ್ತಾ ತಲೆ ನೋವಾಗಿದ್ದಾನೆ.

ಇರಲಿ ಅವನನ್ನು ಹಿಡಿಯದೇ ಬಿಡುವುದಿಲ್ಲ. ಇವಳನ್ನಂತೂ ಯಾವ ರೀತಿಯಲ್ಲಾದರೂ ಹಿಡಿಯಲೇಬೇಕು. ಕಾರು ಕಚೇರಿಯ ಕಟ್ಟಡದ ಮುಂದೆ ನಿಂತಿತು.

ಪ್ರಾಚಿ ಪವನ್ ಕಚೇರಿಗೋದ ಮೇಲೆ ಸಮಯ ಕಳೆಯಲು ಕಾರನ್ನು ಪೋರ್ಟಿಕೋದಿಂದ ಹೊರಕ್ಕೆ ಡ್ರೈವ್ ಮಾಡತೊಡಗಿದಳು.

ಪ್ರಾಚಿ ಆಗಾಗ ತನ್ನ ಗೆಳತಿಯರ ಮನೆಗಳಿಗೆ ಭೇಟಿಮಾಡುವುದಲ್ಲದೆ ನಗರದ ಕೆಲವು ಲೇಡಿಸ್ ಕ್ಲಬ್‌ಗಳಿಗೂ ಭೇಟಿಕೊಡುತ್ತಿದ್ದಳು.

ಐಶ್ವರ್ಯ, ಶೃಂಗಾರ, ಶ್ರೇಷ್ಠ ಹೆಂಗಸರು ಮನೋರಂಜನೆಗಾಗಿ ಮತ್ತು ಸಮಯ ಕಳೆಯುವುದಕ್ಕಾಗಿ ಕ್ಲಬ್‌ಗಳು ಹಲವು ಮನೋರಂಜನೆಯ ಸೌಕರ್ಯಗಳನ್ನು ತುಂಬಿಕೊಂಡಿವೆ.

ಪ್ರಾಚಿ ಆಗಾಗ ಟೇಬಲ್ ಟೆನ್ನೀಸ್, ಚೆಸ್ ಆಟಗಳ ಜೊತೆ ಬ್ರಿಜ್ ಕೂಡ ಆಡುತ್ತಾಳೆ. ಪ್ರಾಚಿಯ ಜೊತೆ ಚೆಸ್ ಆಡುವುದೆಂದರೆ ಬೇರೆಯ ಹೆಣ್ಣುಗಳು ಒಂದು ರೀತಿಯಲ್ಲಿ ಗಾಬರಿಯಾಗಿಬಿಡುತ್ತಾರೆ. ಕೇವಲ ಕೆಲವೇ ಕೆಲವು ಚಲನೆಗಳಿಂದ ಚೆಕ್ ಇಟ್ಟುಬಿಡುತ್ತಾಳೆ. ಇನ್ನು ಬ್ರಿಜ್, ಆಡುವಾಗ ಬೇರೆಯವರ ಕೈಯಲ್ಲಿರುವ ಎಲ್ಲಾ ಎಲೆಗಳನ್ನೂ ಹೇಳಿಬಿಡುತ್ತಾಳೆ.

ಇಲ್ಲಿ ಪವನ್ ತನ್ನ ಕಚೇರಿಯಲ್ಲಿ ಕುಳಿತು ಕೆಲವು ಸಹೋದ್ಯೋಗಿ ಅಧಿಕಾರಿಗಳ ಜೊತೆ ಕಚೇರಿಯ ವಿಷಯವಾಗಿ ಮಾತನಾಡುತ್ತಿದ್ದಾನೆ. ಸಮಯ ಹತ್ತಿರವಾಗುತ್ತಾ ಬರುತ್ತಿದೆ. ಗೋಡೆಯಲ್ಲಿರುವ ಗಡಿಯಾರದ ದೊಡ್ಡ ಮುಳ್ಳು ಪೃಥ್ವಿಯ ಸಮಯವನ್ನು ತಾನೇ ಹೊತ್ತುಕೊಂಡಂತೆ ಟಕ್ ಟಕ್ ಎಂದು ಜಗಿಯುತ್ತಿದೆ.

ಪವನ್ ಜಗಿಯುತ್ತಿರುವ ಸಮಯದ ಕಡೆಗೆ ಆಗಾಗ ನೋಡುತ್ತಿದ್ದಾನೆ. ಎದುರಿಗೆ ಕುಳಿತಿರುವ ಅಧಿಕಾರಿಯೊಬ್ಬ ಪವನ್‌ನ ತಳಮಳವನ್ನು ಗಮನಿಸಿ "ಯಾರಾದರೂ ಬರುವವರುಂಟೆ? ಅಥವಾ ಎಲ್ಲಿಯಾದರೂ ಅಪಾಯಿಂಟ್‌ಮೆಂಟ್ ಇದೆಯೆ?" ಕೇಳಿದ.

ವಾಸ್ತವಕ್ಕೆ ಇಳಿದು ಬಂದ ಪವನ್ ತಡವರಿಸಿ "ಯಾರೂ ಇಲ್ಲ" ಎಂದು ತಲೆ ತಿರುಗಿಸಿದ. ಎದುರಿಗಿದ್ದ ಅಧಿಕಾರಿಗಳು "ಆಯಿತು ಮತ್ತೆ ಮಾತನಾಡೋಣ" ಎಂದು ಎದ್ದುನಿಂತು ಕರಚಾಲನ ಮಾಡಿ ಹೊರಕ್ಕೆ ನಡೆದರು.

ಸರಿಯಾಗಿ ಅದೇ ಸಮಯಕ್ಕೆ ಕ್ರೆಡಲ್ ಮೇಲಿದ್ದ ಫೋನ್ ಮೊಳಗಿತು. ಜೊತೆಯಲ್ಲಿಯೇ ಪವನ್‌ನ ಹೃದಯವು ರಕ್ತವನ್ನು ತುಂಬಿಕೊಂಡು ಒಂದೇ ಸಮನೆ ತನ್ನ ವೇಗವನ್ನು ಹೆಚ್ಚಿಸಿಕೊಂಡಿತು.

ಫೋನ್ ರಿಸೀವರ್ ಕೈಗೆ ತೆಗೆದುಕೊಂಡು ಒಂದು ಸಲ 'ಹಲೋ' ಎಂದು ಎರಡನೆ ಸಲ 'ಹಲೋ' ಎನ್ನುವ ಪದವನ್ನು ತುಂಡರಿಸಿದ ಸ್ವರ.

"ಗುಡ್ ಮಾರ್ನಿಂಗ್, ಬಹಳ ಆವೇಶ ಪಡುತ್ತಿದ್ದೀರ" ಜೊತೆಗೆ ಒಂದು ತುಂಟ ನಗು ನಕ್ಕಳು. ಆ ನಗು ಹೆಣ್ಣಿನ ನಿಗೂಢತೆಯನ್ನೆಲ್ಲ ತುಂಬಿಕೊಂಡಂತಿದೆ.

"ಹೇಗೆ ಕಳೆದಿರಿ ಈ ೬೦೪೮೦೦?"

"೬೦೪೮೦೦" ಎಂದು ಉದ್ಗಾರ ತೆಗೆದ ಪವನ್ "ಇದು ನಿಮ್ಮ ಫೋನ್ ಸಂಖ್ಯೆಯೆ" ಎಂದ, ತಿಳಿದು ತಿಳಿದು ತಪ್ಪು ಉತ್ತರ ಹೇಳಿದಂತೆ.

ಗಲಗಲ ನಗು ಗಿರಿಕಂದರಗಳಿಂದ ದುಮ್ಮಿಕ್ಕಿ ಒಂದನ್ನೊಂದು ಬೆರೆತು ಹೋಗುವ ಅಲಕನಂದಾ ಮತ್ತು ಮಂದಾಕಿನಿಯಂತೆ ಹರಿಯಿತು. "೬೦೪೮೦೦ ಒಂದು ವಾರದಲ್ಲಿ ಏನಾಗಬಹುದು? ಒಮ್ಮೆಲೇ ಪವನ್ ಮಿದುಳು ಎಲ್ಲಿಂದ ಎಲ್ಲಿಗೋ ಓಡತೊಡಗಿತು. ಎರಡು ಫೋನ್‌ಗಳ ಮಧ್ಯದಲ್ಲಿರುವ ಅಗೋಚರ ಕೊಂಡಿ ಚೇಳಿನ ಕೊಂಡಿಯಂತೆ ಕುಟುಕುತ್ತಿದೆ.

"ಒಂದು ವಾರ ೭ ದಿನಗಳು ೭ x ೨೪ x ೬೦ x ೬೦ = ೬೦೪೮೦೦" "ಗುಡ್, ವೆರಿಗುಡ್ ಅದೇ ನಿಮ್ಮ ಆತಂಕದ ಕ್ಷಣಗಳ" ಮತ್ತೊಮ್ಮೆ ಕಿಲಕಿಲ ನಗು.

ಪವನ್ ಕೆಲವು ಪ್ರಯೋಗಗಳನ್ನು ಅವಳ ಮೇಲೆ ಪ್ರಯೋಗಿಸಲೇಬೇಕು ಎಂದುಕೊಂಡಿದ್ದಲ್ಲದೆ ಅದನ್ನು ಯಾವ ರೀತಿ ಕಾರ್ಯರೂಪಕ್ಕೆ ಇಳಿಸಬೇಕು ಎಂದುಕೊಳ್ಳುವುದರೊಳಗೆ "ಒಂದೆರಡು ನಿಮಿಷಗಳು ಯಾವ ಷರತ್ತುಗಳೂ ಇಲ್ಲದೆ ಆಡಿಕೊಳ್ಳೋಣ ಐ ಮೀನ್ ಮಾತನಾಡಿಕೊಳ್ಳೋಣ" ಎಂದಳು.

"ಅಂದರೆ? ಅಂದರೆ ಯಾವ ರೀತಿಯ ಆಟ, ಅದೂ ಫೋನ್‌ನಲ್ಲಿ ಅನ್ನುತ್ತೀರಲ್ಲವೆ? ಚಿಂತಿಸಬೇಡಿ, ಕಾಯುವುದರಲ್ಲಿ ಇರುವಷ್ಟು ಸುಖ ಬೇರೆ ಯಾವುದರಲ್ಲೂ ಸಿಗುವುದಿಲ್ಲ. ಪ್ರೀತಿಸಿದ ತಕ್ಷಣ ಮದುವೆ ಮಾಡಿಕೊಳ್ಳುವವರು ಒಂದು ರೀತಿಯಲ್ಲಿ ನಿಜವಾದ ಪ್ರೀತಿಯನ್ನು ಕಳೆದುಕೊಂಡು ಬಿಡುತ್ತಾರೆ. ಮದುವೆಗೆ ಮುಂಚೆ ಇರುವುದೇ ನಿಜವಾದ ಪ್ರೀತಿ ಕ್ಷಮಿಸಿ, ವಿಷಯಕ್ಕೆ ಬರೋಣ"

"ಗ್ರೇಸ್ ಅನ್ನುವ ಇಂಗ್ಲಿಷ್ ಪದಕ್ಕೆ ಎಷ್ಟು ಕನ್ನಡ ಅರ್ಥಗಳನ್ನು ಹೇಳಬಲ್ಲಿರಿ?"

"ಇದು ಆಟವೆ?" "ಎಯ್" ಪವನ್‌ನ ದೇಹ ಕುರ್ಚಿಯಿಂದ ಹಾರಿದಂತಾಯಿತು.

"ನಾನು ಮೊದಲೇ ಹೇಳಿದ್ದೇನೆ, ಒಂದೆರಡು ಕ್ಷಣಗಳು ಯಾವ ಷರತ್ತುಗಳೂ ಇಲ್ಲವೆಂದು."

ಕುರ್ಚಿಯಿಂದಲೇ ಹಿಂದಕ್ಕೆ ಒರಗಿ ಮೆತ್ತಗಾದ ಪವನ್ ಸಣ್ಣದಾಗಿ ನಗುತ್ತಾ 'ಆಯಿತು' ಎಂದ.

"ನಗುತ್ತಿದ್ದೀಯಾ ತಾನೆ?" ಕೇಳಿದಳು. ಒಂದು ಕ್ಷಣ ಸಮಯ ಕೇಳಿದ ಪವನ್ ಗೋದ್ರೆಜ್ ಬೀರುವಿನಿಂದ ನಿಗಂಟನ್ನು ತೆಗೆದು ಎದುರುಗಿಟ್ಟುಕೊಂಡು 'ಗ್ರೇಸ್' ಎಂದು ಪ್ರಾರಂಭಿಸಿದ. ಬೀರುವಿನ ಸದ್ದನ್ನು ಕೇಳಿಸಿಕೊಂಡ ಆಕೆ "ಕೈಯಲ್ಲಿರುವ ನಿಘಂಟನ್ನು ಮುಚ್ಚಿ ಪಕ್ಕದಲ್ಲಿಡಿ" ಎಂದಳು. ಪವನ್ ಅಪರಾಧಿಯಂತೆ ನಿಘಂಟನ್ನು ಮುಚ್ಚಿ ಪಕ್ಕದಲ್ಲಿರಿಸಿದ. "ಈಗೇಳಿ ಗ್ರೇಸ್ ಅನ್ನುವ ಇಂಗ್ಲಿಷ್ ಪದಕ್ಕೆ ಎಷ್ಟು ಕನ್ನಡ ಪದಗಳನ್ನು ಹೇಳಬಲ್ಲಿರಿ?"

ಪವನ್ ಹೇಳುತ್ತಾ ಹೋದ.

"ಶೋಭೆ, ರಮ್ಯತೆ, ಸೊಬಗು, ರಿಯಾಯಿತಿ, ಅನುಗ್ರಹ, ಪ್ರಾರ್ಥನೆ, ಅಲಂಕಾರ, ಶೊಭಾಯಮಾನ, ಗೌರವ, ಮನೋಹರ, ಆಕರ್ಷಕ, ನಯವಿನಯ, ಸಭ್ಯ, ವಿನಯ, ಕೃಪಾಳು?" ಕ್ಷಣದ ಒಂದಂಶ ಪವನ್ ಸ್ತಬ್ದನಾದ.

"ಅಷ್ಟೇನೇ ಇನ್ನಿಲ್ಲವೆ?"

"ಇನ್ನೂ ಕೇಳಿ, ನಾನೇಳಿದ ಎಲ್ಲಾ ಪದಗಳ ಹಿಂದೆ ಮುಂದೆ ಸಾಧ್ಯವಾದ ಒಂದು ಅಕ್ಷರದ ಒತ್ತೊ, ಎತ್ತೋ ಬರೆದುಕೊಂಡರೆ ಇನ್ನಷ್ಟು ಅರ್ಥಗಳು ಬರುತ್ತವೆ."

ತೃಪ್ತಿಯಾದ ಸ್ವರದಲ್ಲಿ "ಆಯಿತು" ಎಂದಳು.

"ಬೆಳಿಗಿನ ಸೂರ್ಯ ಸುಂದರವಾಗಿರುತ್ತಾನೋ? ಅಥವಾ ಸಾಯಂಕಾಲದ ಸೂರ್ಯ ಸುಂದರವಾಗಿರುತ್ತಾನೋ?"

"ಬೆಳಿಗಿನ ಸೂರ್ಯನಿಗಿಂತ ಸಾಯಂಕಾಲದ ಸೂರ್ಯ ಸುಂದರನಾಗಿರುತ್ತಾನೆ. ಆದರೆ ಏಕೆಂದು ಕೇಳಬೇಡಿ ಉತ್ತರ ಬೇಕಾದರೆ ಮೌಂಟ್ ಅಭು, ಡಾರ್ಜಿಲಿಂಗ್‌ನ ಟೈಗರ್ ಬೆಟ್ಟ, ನಾಗಾಲ್ಯಾಂಡಿನ ಸಾರಾಮತಿ, ನಂದಿಬೆಟ್ಟಗಳಿಂದ ಸಾಯಂಕಾಲದ ಸೂರ್ಯನ ನೋಡು" ಪವನ್ ಹೇಳಿದ.

ಸಣ್ಣದಾಗಿ ನಕ್ಕ ಅವಳ ಕಲರವ ಅವನ ಕಿವಿಗಳಿಗೆ ಮುಟ್ಟಿತು.

"ಕಣ್ಣು ರೆಪ್ಪೆಯ ಕೂದಲ ವಯಸ್ಸೆಷ್ಟು?"

"ಯಾರದ್ದು? ಮನೋಲಿಸಾದ್ದೆ?"

"ಅಲ್ಲ ನಿನ್ನದು?"

"ಸುಮಾರು ಮೂವತ್ತು ತಿಂಗಳು" ಪವನ್ ಹೇಳಿದ.

ಅರೆಕ್ಷಣ ಪವನ್‌ನ ತಿಳುವಳಿಕೆಗೆ ಮನಸೋತ ಅವಳ ಮನಸ್ಸು ಅವನನ್ನು ಮೆಚ್ಚಿಕೊಂಡಿತು. ಇಂತಹ ಸಮಯದಲ್ಲಿಯೇ ಏನೋ sexiest, sweetest, funniest, nicest, romantic ಎಂಬ ಪದಗಳು ಹೊರಬೀಳುವುದು.

ಇದ್ದಕ್ಕಿದ್ದಾಗೆ ಪವನ್ ಕೇಳಿದ.

"ಗೋದಿಬಣ್ಣದ ಹೆಣ್ಣುಗಳಿಗೆ ಯಾವ ಬಣ್ಣದ ಲಿಪ್‌ಸ್ಟಿಕ್ ಸರಿಹೊಂದುತ್ತದೆ?"

ಅನಿರೀಕ್ಷಿತವಾದ ಈ ಪ್ರಶ್ನೆಗೆ ತತ್ತರಿಸಿಹೋದ ಆ ಕಡೆಯ ಸ್ವರ ಪ್ರಶ್ನೆ ಕೇಳುವುದಕ್ಕಿಂತ ಉತ್ತರ ಹೇಳುವುದು ಎಷ್ಟು ಕಷ್ಟ ಎಂದು ಲೆಕ್ಕಾಚಾರ ಹಾಕಿಕೊಂಡಿತು. ಕ್ಷಣಗಳು ಮುಳ್ಳುಗಳಂತೆ ದೇಹವನ್ನು ಚುಚ್ಚಿಕೊಳ್ಳತೊಡಗಿದವು.

"ಗೊತ್ತಿಲ್ಲವೆ?" ಪವನ್ ಕೇಳಿದ.

"ಮೌನಂ ಸಮ್ಮತಂ" ಎನ್ನುವಂತೆ ಸ್ವರ ಹೊರಡಲಿಲ್ಲ. ಅವಳಿಗೆ ತಿಳಿದೋ ತಿಳಿಯದೋ ಸುಮ್ಮನಿದ್ದಳು.

"ತಿಳಿಗೆಂಪು, ದಟ್ಟ ಗುಲಾಬಿ ಹಾಲುಕೆನ್ನೆ ಬಣ್ಣದವರಿಗೆ, ಕಡು ಗುಲಾಬಿ, ಕಡುಕಿತ್ತಲೆ, ಕೆಂಪುಬಣ್ಣದವರಿಗೆ, ಕಡುಗೆಂಪು, ಕಡುಗುಲಾಬಿ, ಪ್ರಶ್ನೆ ಉತ್ತರ ಎರಡನ್ನೂ ಅವನೇ ಹೇಳಿಕೊಂಡೋಗುತ್ತಿದ್ದ.

ವಿಷಯವನ್ನು ತನ್ನ ವಶಕ್ಕೆ ತೆಗೆದುಕೊಳ್ಳದಿದ್ದರೆ ಪವನ್ ತನ್ನನ್ನು ಉಳಿಸುವುದಿಲ್ಲ ಎಂದು ಅರಿತುಕೊಂಡ ಅವಳ ಹೃದಯ ತುಟಿಗಳಲ್ಲಿ ಮಿಡಿಯುತ್ತಿತ್ತು.

"ದೇಶವೆಲ್ಲಾ ಒಮ್ಮೆಲೆ ಭಾಗವಹಿಸುವಂತಹ ಆಟ ಯಾವುದು?" ಕೇಳಿದಳು. ಒಂದು ಕ್ಷಣ ಯೋಚಿಸಿದ ಪವನ್ "ಚುನಾವಣೆ / ಲಾಟರಿ" ಎಂದ.

ಮುಂದೆ ಯಾವ ರೀತಿಯಲ್ಲಿ ಅವನನ್ನು ಕೆಣುಕಬೇಕು ಎನ್ನುವ ಆತಂಕ ಅವಳಲ್ಲಿ ತುಂಬಿಕೊಳ್ಳುತ್ತಿತ್ತು.

"ಸಾಕು. ಈಗಾಗಲೆ ಸುಮಾರು ಸಮಯವನ್ನು ಹಾಳು ಮಾಡಿದ್ದೇವೆ" ಎಂದು

ತಡೆ ಹಾಕಿದಳು. ಸುಳಿವು ನೀಡಿದರೆ ಎಲ್ಲಿ ಕಂಡಿಡಿದು ಬಿಡುತ್ತೀನೋ ಎನ್ನುವ ಯೋಚನೆ ಅವಳ ಮನದಲ್ಲಿದೆ.

ಒಂದೆರಡು ಕ್ಷಣ ಏನೂ ಅರ್ಥವಾಗದ ಪವನ್

"ಹಾಗಾದರೆ ಈ ಫೋನೇ ಗತಿಯೆ" ಕೇಳುತ್ತಾನೆ.

"ಮನುಷ್ಯ ನಿರಾಶನಾಗಬಾರದು. ಮನಸ್ಸಿದ್ದರೆ ಮಾರ್ಗವಿರುತ್ತದೆ ಕೇಳಿಲ್ಲವೆ?"

"ಫೋನ್ ಮಾರ್ಗವೆ?"

"ಇಲ್ಲ ಖಂಡಿತ ಸುಳಿವು ನೀಡುತ್ತೇನೆ. ಆದರೆ ನಾನು ಹೇಳುವ ಪ್ರಶ್ನೆಗಳಿಗೆ ಉತ್ತರಿಸಬೇಕಷ್ಟೆ."

"ನಿನ್ನ ಉದ್ದೇಶವಾದರೂ ಏನು?" ಪವನ್ ಕೇಳಿದ.

"ನನಗೆ ಗೊತ್ತಿಲ್ಲ" ದಿಟವಾದ ಉತ್ತರ ಆ ಕಡೆಯಿಂದ.

ಫೋನ್ ತುಂಡರಿಸಿಕೊಳ್ಳುತ್ತದೆ. ಪವನ್ ಹಲೋ... ಹಲೋ... ಎಂದು ಬಟನ್ ಒತ್ತುತ್ತಾನೆ. ಯಾವ ರೀತಿಯ ಚಿಹ್ನೆಗಳನ್ನೂ ಬಿಡದ ಫೋನ ತನ್ನ ಕೊಂಡಿಯನ್ನು ಕತ್ತರಿಸಿಕೊಂಡಿರುತ್ತದೆ.

ಪವನ್ ಅವಳ ಷರತ್ತುಗಳನ್ನು ಉಲ್ಲಂಗಿಸಿ, ಫೋನ್ ಮಾಡುವುದು ಯಾರು? ಎಲ್ಲಿಂದ ಎಂದು ತಿಳಿದುಕೊಳ್ಳಬೇಕೆಂದು ತೀವ್ರವಾಗಿ ಯೋಚಿಸುತ್ತಾನೆ. ಅವಳು ಕಂಡಿತ ಮತ್ತೆ ಮತ್ತೆ ಮಾತನಾಡುತ್ತಾಳೆ. ಟೆಲಿಫೋನ್ ವಿಭಾಗದವರ ಮುಖಾಂತರವಾದರೂ ಜಾಲಿಸಬೇಕೆಂದುಕೊಳ್ಳುತ್ತಾನೆ.

ಅಷ್ಟರಲ್ಲಿ ಮತ್ತೊಮ್ಮೆ ಫೋನ್ ಮೊಳಗುತ್ತದೆ. ಕುರ್ಚಿಯಿಂದ ಮುಗಿಬಿದ್ದ ಪವನ್ ಫೋನ್ ತೆಗೆದುಕೊಂಡು "ಹಲೋ" ಎಂದ.

"ಏನು ಯೋಚಿಸಿದಿರಿ? ಹೇಗಾದರೂ ಇವಳನ್ನು ಪತ್ತೆ ಹಚ್ಚಲೇಬೇಕು, ಅದು ಯಾವ ರೀತಿಯಾದರೂ ಆಗಲಿ ಎಂದುಕೊಂಡಿರಬೇಕಲ್ಲವೆ?" ಪವನ್ ಇನ್ನಷ್ಟು ಶಾಕ್ ಹೊಡೆಸಿಕೊಂಡವನಂತೆ ಬೆರಗಾದ. "ನಾನೇಳುವ ಸುಳಿವುಗಳ ಮುಖಾಂತರವೇ ನನ್ನನ್ನು ತಲುಪಬೇಕು. ಬೇರೆ ಯಾವ ರೀತಿಯಾದರೂ ಪ್ರಯತ್ನಿಸಿದರೆ ನನ್ನಲ್ಲಿಗೆ ತಲುಪಿದ್ದೆಯಾದರೆ ನನ್ನ ಮತ್ತು ನಿನ್ನ ಮಧ್ಯೆ ಯಾವ ರೀತಿಯ ಸಂಬಂಧವೂ... ಸಾರಿ ಸಂಪರ್ಕವೂ ಇರುವುದಿಲ್ಲ" ಎಂದು ಎಚ್ಚರಿಕೆ ನೀಡಿದಳು.

"ಅದು ಸರಿ, ನಿನ್ನ ಸುಳಿವಾದರೂ ಏನು?" ಕೇಳಿದ.

"ಕ್ಷಮಿಸಬೇಕು, ನಾನಿರುವ ಕೋಣೆಯಿಂದ ಅನಿವಾರ್ಯ ಕಾರಣಗಳಿಂದ ಮುಂದಕ್ಕೆ ಮಾತನಾಡಲಾಗಲಿಲ್ಲ" ಆ ವಾಕ್ಯ ಸಣ್ಣದಾಗಿ ಹೇಳಿದಳು.

"ಬರುವ ವಾರ ಇದೇ ಸಮಯ ಇದೇ ದಿನ" ಫೋನ್ ಕಟ್ ಆಯಿತು. ಆದರೆ ಫೋನ್ ರಿಸೀವರ್ ಕ್ರೆಡಲ್ ಮೇಲಿಟ್ಟ ಸದ್ದು ಅವನಿಗೆ ಕೇಳಿಸಲಿಲ್ಲ ಕಿವಿ ಕೊಟ್ಟು ಕೇಳಿದರು.

ಕ್ರೆಡಲ್ ಇಲ್ಲದ ಫೋನ್‌ನಲ್ಲಿ ಮಾತನಾಡುತ್ತಿದ್ದಾಳೆಯೆ? ಅಥವಾ ಕ್ರೆಡಲ್ ನಮ್ಮ ಐ.ಟಿ.ಐ. ಕಾರ್ಖಾನೆಯ ಕ್ರೆಡಲ್ ಅಲ್ಲವೆ? ತನ್ನ ಕೈಯ್ಯಲ್ಲಿದ್ದ ರಿಸೀವರನ್ನು ಕೆಳಗಿಟ್ಟು ಕಣ್ಣುಗಳನ್ನು ಮುಚ್ಚಿಕೊಂಡು ಏನೋ ಯೋಚಿಸತೊಡಗಿದ.

ಮತ್ತೆ ಫೋನ್ ರಿಂಗಾಯಿತು...

ಆಕಾಶದಿಂದ ಕೆಳಕ್ಕೆ ಬಿದ್ದಂತೆ ನೋವು ಅನುಭವಿಸುತ್ತಿದ್ದ ಪವನ್ ಮತ್ತೊಮ್ಮೆ ಭೂಮಿಯಿಂದ ಪಾತಾಳಕ್ಕೆ ಇಳಿದಂತೆ ಭಾಸವಾಗಿ ಫೋನ್ ಕಡೆಗೊಮ್ಮೆ ನೋಡಿದ. ಅದರ ಹೃದಯವನ್ನು ಭೇದಿಸುವಂತೆ ಫೋನ್ ಯಾವುದೋ ಆಘಾತಕ್ಕೆ ಗುರಿಯಾದಂತೆ ಒಂದೇ ಸಮನೆ ಅಬ್ಬರಿಸುತ್ತಿದೆ.

ಆಧುನಿಕ ಪ್ರಪಂಚದ ಸಂಪರ್ಕವನ್ನು ಹಿಡಿಯಲ್ಲಿರಿಸಿಕೊಂಡಿದ್ದ ಆ ಪುಟ್ಟ ಯಂತ್ರದ ಬಗ್ಗೆ ಅರೆಕ್ಷಣ ಅನುಕಂಪ ಮೂಡಿ ಅದರ ತುಟಿಗಳನ್ನು ತನ್ನ ಕಿವಿಯಲ್ಲಿರಿಸಿಕೊಂಡು "ಹಲೋ... ಹಲೋ" ಎಂದ.

"ಹಲೋ... ಪವನ್, ನಾನು ಪ್ರಾಚಿ ಮಾತನಾಡುವುದು, ರಾಯಲ್ ಕ್ಲಬ್‌ನಿಂದ ಆ ಈಡಿಯಟ್ ನಾನು ಇಲ್ಲಿರುವುದು ಹೇಗೆ ಗೊತ್ತಾಯಿತೋ ಏನೋ, ಇಲ್ಲಿಗೂ ಫೋನ್ ಮಾಡಿದ್ದಾನೆ. ನನಗೇಕೋ ಬಹಳ ಭಯವಾಗುತ್ತಿದೆ. ಬಹುಶಃ ಅವನು ನನ್ನನ್ನು ಹಿಮ್ಮೆಟ್ಟಿರಬಹುದು ಎನಿಸುತ್ತಿದೆ, ದಯವಿಟ್ಟು ನೀವು ಇಲ್ಲಿಗೆ ಬನ್ನಿ, ನನಗ್ಯಾಕೋ ಬಹಳ ಭಯಾ ಆಗುತ್ತೆ" ಪ್ರಾಚಿ ಎಡಬಿಡದೆ ಒಂದೇ ಸಮನೆ ಮಾತನಾಡುತ್ತಿದ್ದಾಳೆ.

"ಪ್ರಾಚಿ, ನೀನು ಅಷ್ಟೊಂದು ಭಯ ಬೀಳುವಂತಹ ವಿಷಯವಲ್ಲ, ಶಾಂತವಾಗಿರು ನಾನೀಗಲೇ ಬರುತ್ತೇನೆ. ನಿನ್ನ ಜೊತೆ ಯಾರ್‍ಯಾರಿದ್ದಾರೆ?"

"ಕ್ಲಬ್‌ನಲ್ಲಿ ಬೇಕಾದಷ್ಟು ಲೇಡೀಸ್ ಇದ್ದಾರೆ, ಆದರೆ ನಾನು ಯಾರಿಗೂ ಹೇಳಲಿಲ್ಲ, ಅವನು ಫೋನ್ ಮಾಡಿದ ತಕ್ಷಣ ನಿಮಗೆ ಫೋನ್ ಮಾಡಿದೆ."

"ಆಯಿತು, ನೀನೇನು ಗಾಬರಿಯಾಗಬೇಡ ನಾನೀಗಲೇ ಬರುತ್ತೇನೆ. ನೀನು ಅಲ್ಲೆ ಇರು."

ಪವನ್ ಫೋನ್ ಕೆಳಗಿಟ್ಟು ಕರೆ ಗಂಟೆ ಒತ್ತಿದ. ಸೇವಕ ಬಾಗಿಲನ್ನು ತಳ್ಳಿಕೊಂಡು ಒಳಬಂದ. ತನ್ನ ಖಾಸಗಿ ಕಾರ್ಯದರ್ಶಿಯನ್ನು ಕರೆಯುವಂತೆ ಆದೇಶಿಸಿದ. ರುಚಿ ಬಾಗಿಲು ತಳ್ಳಿಕೊಂಡು ಒಳಬಂದಳು. ಪವನ್ ತನ್ನ ಬ್ರೀಫ್‌ಕೇಸನ್ನು ತೆಗೆದುಕೊಂಡು ಸ್ವಲ್ಪ ಕೆಲಸವಿರುವುದರಿಂದ ತಾನು ಮತ್ತೆ ಬಂದರೆ ಬರುತ್ತೇನೆ ಇಲ್ಲದಿದ್ದರೆ ನಾಳೆ ಬರುತ್ತೇನೆಂದು ತಿಳಿಸಿ ತನ್ನ ಕೋಣೆಯಿಂದ ಹೊರಕ್ಕೆ ನಡೆಯತೊಡಗಿದ.

ಪವನ್ ಉದ್ದುದ್ದವಾದ ಹೆಜ್ಜೆಗಳನ್ನಿಡುತ್ತಾ ಬಂದು ಲಿಫ್ಟ್ ಎದುರಿಗೆ ನಿಂತು ಬಟನ್ ಒತ್ತಿ ಸಿಗ್ನಲ್ ನೋಡಿದ. ಕೆಂಪು ಬಾಣದ ಮುಂದಿನ ಅಂಕೆಗಳು ಆಧುನಿಕ ಪ್ರಪಂಚದ ಸಮಯ ಮಹತ್ವವನ್ನು ಕಿಂಚಿತ್ತೂ ಯೋಚಿಸದೆ ನಿಧಾನವಾಗಿ ಬದಲಾಗುತ್ತಿವೆ. ತನ್ನ ಬಲಕಾಲಿನ ಬೂಟನ್ನೊಮ್ಮೆ ನಿಧಾನವಾಗಿ ನೆಲಕ್ಕಪ್ಪಳಿಸಿದ. ಬೆಂಗಳೂರಿನ ಲಿಫ್ಟ್‌ಗಳು, ಬಿ.ಟಿ.ಎಸ್ ಬಸ್ಸುಗಳಿಗೆ ಸರಿಸಾಟಿಯಾಗಿ ನಿಲ್ಲುತ್ತವೆ, ಸಮಯ ಪಾಲಿಸುವ ವಿಷಯದಲ್ಲಿ. ಲಿಫ್ಟ್ ತಾನಿರುವ ಮಹಡಿಯಲ್ಲಿ ನಿಂತುಕೊಂಡಿತು. ಲಿಫ್ಟ್‌ನ ಬಾಗಿಲು ಸಣ್ಣದಾಗಿ ಶಬ್ದ ಮಾಡುತ್ತಾ ತೆಗೆದುಕೊಂಡಿತು. ಎರಡೇ ಹೆಜ್ಜೆಗಳಲ್ಲಿ ಒಳಕ್ಕೆ ನಡೆದ. ಪವನ್ ಬಟನ್ ಒತ್ತಿ ನಿಂತುಕೊಂಡ.

ಲಿಫ್ಟ್ ನಿಧಾನವಾಗಿ ಪ್ರಾರಂಭವಾಗಿ ವೇಗವನ್ನು ಹೆಚ್ಚಿಸಿಕೊಳ್ಳುತ್ತಾ ಹೋಗಿ ಕೆಳಗಡೆ ನಿಂತುಕೊಂಡಿತು. ಬಾಗಿಲು ತೆಗೆದುಕೊಂಡಿದ್ದೆ ತಡ ಪವನ್ ಲಿಫ್ಟ್‌ನಿಂದ ಹೊರಕ್ಕೆ ಜಿಗಿದು ಕಾರಿನ ಕಡೆ ನೋಡತೊಡಗಿದ. ಆಗ ಅವನಿಗೆ ಹೊಳೆಯಿತು ತಾನು ಕಾರಿನ ಚಾಲಕನಿಗೆ ಹೇಳದೆ ಕೆಳಗಿಳಿದು ಬಂದಿದ್ದು.

ಅದೂ ಒಂದು ರೀತಿಯಲ್ಲಿ ಸರಿಯೇ ಎಂದುಕೊಂಡ ಪವನ್, ನೇರವಾಗಿ ರಸ್ತೆಗೆ ಬಂದು ಆಟೋ ನಿಲ್ಲಿಸಿ ತಾನು ಸೇರಬೇಕಾಗಿರುವ ಸ್ಥಳದ ಹೆಸರೇಳಿದ. ಆಟೋ ಚಾಲಕ ಮೀಟರನ್ನು ಸೊನ್ನೆಗೆ ತಿರುಗಿಸಿ ಓಡಿಸತೊಡಗಿದ. ಪವನ್ ತನ್ನ ಬ್ರೀಫ್‌ಕೇಸನ್ನು ಕಾಲಿನ ಮಧ್ಯೆ ಸಿಕ್ಕಿಸಿಕೊಂಡು ರಸ್ತೆಯನ್ನೇ ತದೇಕಚಿತ್ತನಾಗಿ ನೋಡುತ್ತಿದ್ದ. ಪ್ರಾಚಿಯ ಹಿಂದೆ ಬಿದ್ದಿರುವ ಆ ಆಗಂತಕನ ಜಾಡನ್ನು ಹೇಗಾದರೂ ಮಾಡಿ ಪತ್ತೆ ಮಾಡುವುದರ ಬಗ್ಗೆ ಯೋಚಿಸುತ್ತಿದ್ದಾನೆ.

ಮೊದಮೊದಲು ಯಾರೋ ಹುಚ್ಚನೆಂದು ಅಷ್ಟೇನೂ ತಲೆ ಕೆಡಿಸಕೊಳ್ಳದ ಪವನ್ ಈಗ ಅವನನ್ನು ಮೊದಲೇ ಸೊಂಟ ಮುರಿದಿರಬೇಕೆಂದುಕೊಳ್ಳುತ್ತಾನೆ.

ಬೆಂಗಳೂರಿನ ರಸ್ತೆಗಳು ಎಂದಿನಂತೆ ಜೀವನದ ಸೊಗಸನ್ನು ತುಂಬಿಕೊಂಡು ಹೊಸರುತ್ತಿವೆ. ಆಟೋ ವೃತ್ತಗಳಲ್ಲಿ ಮೂಡುವ ಟ್ರಾಫಿಕ್ ಸಿಗ್ನಲ್‌ಗಳನ್ನು ಅನುಸರಿಸಿಕೊಂಡು ಹೋಗುತ್ತಿದೆ. ಪವನ್ ಕುಳಿತ ಕಡೆಯಲ್ಲಿ ಚಡಪಡಿಸುತ್ತಿದ್ದಾನೆ.

ಆಟೋ ವೇಗವಾಗಿ ಶಬ್ದಮಾಡುತ್ತಾ ತಾನು ನಿಲ್ಲಬೇಕಾದ ಸ್ಥಳದಲ್ಲಿ ನಿಂತುಕೊಳ್ಳುತ್ತದೆ. ಪವನ್ ಬ್ರೀಫ್‌ಕೇಸನ್ನು ಕೈಯಲ್ಲಿಡಿದುಕೊಂಡು ಪರ್ಸ್‌ನಲ್ಲಿದ್ದ ನೋಡುಗಳಲ್ಲಿ ಒಂದನ್ನು ಆಟೋಚಾಲಕನಿಗೆ ಕೊಟ್ಟು ಕ್ಲಬ್ ಒಳಗೆ ನಡೆದೆಬಿಟ್ಟ.

ಆಟೋಚಾಲಕ ನೋಟನ್ನೊಮ್ಮೆ ತಿರುಗಿಸಿ ನೋಡಿ ಪವನ್ ನಡೆದೋಗುವುದನ್ನೇ ಸ್ವಲ್ಪ ಸಮಯ ದಿಟ್ಟಿಸಿ ನೋಡಿದ ಮೇಲೆ ಚಾಲನೆಯಲ್ಲಿ ಇದ್ದ ಆಟೋವನ್ನು ಹಿಂದಕ್ಕೆ ತಿರುಗಿಸಿದ.

ಪುಕ್ಕಗಳು ಮೂಡುತ್ತಿರುವ ಮರಿಹಕ್ಕಿ ಬೀಸುವ ಬಿರುಗಾಳಿ ಮಳೆಯಲ್ಲಿ ದೊಡ್ಡ ಹಕ್ಕಿಗಾಗಿ ಎದುರು ನೋಡುವಂತೆ ಪ್ರಾಚಿ ತನ್ನ ತಳಮಳವನ್ನು ಯಾರಿಗೂ ತೋರಗೊಡದೆ ಒಳಗೊಳಗೆ ಒಬ್ಬಳೇ ಅನುಭವಿಸುತ್ತಿದ್ದಾಳೆ. ಅತಿಥಿಗಳು ಭೇಟಿಕೊಡುವ ಹಾಲಿನೊಳಕ್ಕೆ ಹೊಕ್ಕ ಪವನ್ ಕಾವಲುಗಾರನಿಗೆ ಪ್ರಾಚಿಯ ಹೆಸರನ್ನು ಹೇಳಿ ಕರೆಸಿದ. ಕಾವಲುಗಾರ ಪ್ರಾಚಿಯ ಹತ್ತಿರ ಹೋಗಿ "ತಮಗಾಗಿ ಯಾರೋ ಬಂದಿದ್ದಾರೆ" ಎಂದು ತಿಳಿಸಿದ. ಪ್ರಾಚಿ ಕೂಡ ಇಷ್ಟು ದಿನ ಯಾರೊ ಹುಚ್ಚನೆಂದು ಹೆಚ್ಚಾಗಿ ತಲೆ ಕೆಡಿಸಿಕೊಂಡಿರಲಿಲ್ಲ. ಆದರೆ ಈ ದಿನ ಅವಳು ಮನೆ ಬಿಟ್ಟು ಬೇರೆ ಸ್ಥಳದಲ್ಲಿದ್ದರೂ ಫೋನ್ ಮಾಡಿದ್ದಾನೆಂದರೆ ಅವನೂ ಕೂಡ ತನ್ನ ಭೇಟಿಯಾಡುತ್ತಿದ್ದಾನೆ ಎಂದುಕೊಂಡಳು.

ಪ್ರಾಚಿ ಸುತ್ತಲೂ ಒಮ್ಮೆ ನೋಟ ಬೀರಿ ತನ್ನ ಕೆಲವು ಮುಖ್ಯ ಗೆಳತಿಯರಿಗೆ ತಿಳಿಸಿ, ಅಲ್ಲಿಂದ ಬೀಳ್ಕೊಂಡು ಪವನ್ ಇರುವ ಹಾಲಿನ ಕಡೆಗೆ ಬಂದಳು. ಪ್ರಾಚಿ ಪವನ್ ನೋಡಿದ ತಕ್ಷಣವೇ ಅವನ ಎದೆಯಲ್ಲಿ ಅತ್ಯಂತ ಒಲವು ತುಂಬಿಕೊಂಡು ಒರಗಿಹೋದಳು. ಸುಮಾರು ೩೦ ನಿಮಿಷಗಳಿಂದ ಎದೆ ತುಂಬಾ ತುಂಬಿಕೊಂಡಿದ್ದ ಭಾರವನ್ನೆಲ್ಲಾ ಪ್ರಾಚಿ ಅರೆಕ್ಷಣದಲ್ಲಿ ಅವನ ಎದೆಗೆ ವರ್ಗಾಯಿಸಿ ಮಗುವಿನಂತೆ ಹಗುರವಾಗಿ ತೇಲಿಹೋದಳು.

ಈಗ ಅವಳ ಕೆನ್ನೆಗಳಲ್ಲಿ ಭಯ ಮಾಯವಾಗಿ ನಾಚಿಕೆ ತುಂಬಿಕೊಂಡಿತು. ಇಬ್ಬರೂ ಒಬ್ಬರಿಗೊಬ್ಬರು ಬಹಳ ಸಮೀಪವಾಗಿ ನಡೆಯುತ್ತಾ ಬಂದು ತಮ್ಮ ಕಾರಿನ ಒಳಗೆ ಸೇರಿಕೊಂಡರು.

ಡ್ರೈವ್ ಮಾಡುವ ಆಸನದಲ್ಲಿ ಕುಳಿತುಕೊಂಡ ಪವನ್ ಒಂದೆರಡು ಕ್ಷಣಗಳು ಪ್ರಾಚಿಯ ಮುಖವನ್ನೇ ನಗುತ್ತಾ ನೋಡಿ ಅವಳಲ್ಲಿ ತುಂಬಿಕೊಂಡಿರುವ ಭಯವನ್ನು ಸಂಪೂರ್ಣವಾಗಿ ತೆಗೆದುಹಾಕಲಾರದೆಹೋದರು ಸ್ವಲ್ಪವಾದರೂ ಹತೋಟಿ ಯಲ್ಲಿಡುವಂತೆ ಅವಳನ್ನು ರಮಿಸಿ ಹಗುರವಾಗಿಸಿದ.

ಪ್ರಾಚಿ "ನಾವು ನೇರವಾಗಿ ಮೊದಲು ಪೊಲೀಸ್ ಠಾಣೆಗೆ ಹೋಗಿ ದೂರು

ಕೊಡೋಣ" ಪವನ್ ಹೇಳಿದ. "ಪೊಲೀಸ್ ಠಾಣೆಗಿನ್ನ ಮೊದಲು ದೂರವಾಣಿ ವಿಭಾಗಕ್ಕೋಗಿ ಅವನನ್ನು ಫೋನ್ ಮುಖಾಂತರವೇ ಹೇಗಾದರೂ ಮಾಡಿ ಹಿಡಿಯುವುದೇ ಒಳ್ಳೆಯದೆನಿಸುತ್ತದೆ. ಪೊಲೀಸಿಗೆ ತಿಳಿಸಿದರೆ ಅವನು ಇನ್ನಷ್ಟು ಜಾಗರೂಕನಾದರೂ ಆಗಬಹುದು" ಪ್ರಾಚಿ ಹೇಳಿದಳು.

"ನಾವು ಅವನ ಬಗ್ಗೆ ಸರಿಯಾದ ಸ್ಟೆಪ್ಸ್ ತೆಗೆದುಕೊಳ್ಳದೆ, ಪೊಲೀಸರಿಗೂ ತಿಳಿಸದೆ ಇದ್ದುದ್ದೆ ಅವನಿಗೆ ಇನ್ನಷ್ಟು ಧೈರ್ಯ ಬಂದಿದೆ. ಪೊಲೀಸರಿಗೂ ತಿಳಿಸೋಣ. ನನ್ನ ಗೆಳೆಯನೊಬ್ಬ ಪೊಲೀಸ್ ಅಧಿಕಾರಿಯಾಗಿದ್ದಾನೆ, ಜೊತೆಗೆ ದೂರವಾಣಿಯಲ್ಲಿ ದೂರು ನೀಡಿ ಅವನನ್ನು ಪತ್ತೆಹಚ್ಚೋಣ" ಪವನ್ ಹೇಳಿದ.

"ಅದೂ ಒಂದು ರೀತಿಯಲ್ಲಿ ಸರಿಯೇ. ಯಾವುದಕ್ಕೂ ಇನ್ನೊಮ್ಮೆ ಸರಿಯಾಗಿ ಯೋಚಿಸುವುದೇ ಒಳ್ಳೆಯದು"

"ಇನ್ನೂ ಯೋಚಿಸುವುದೆಂದರೆ ನಾವು ಮಾಡಿದ ತಪ್ಪನ್ನೇ ಮತ್ತೆ ಮತ್ತೆ ಮಾಡಿದಂತಾಗುತ್ತದೆ" ಪವನ್ ಒಂದು ನಿರ್ದಿಷ್ಟ ಗುರಿಗೆ ಬಂದಂತೆ ಪ್ರಾಚಿಯ ಮಾತನ್ನು ತುಂಡರಿಸಿ ಹೇಳಿದ.

"ಹಾಗಾದರೆ ಈಗ ಎಲ್ಲಿಗೆ ಹೋಗೋಣ" ಪ್ರಾಚಿ ಪ್ರಶ್ನಿಸಿದಳು. ಈಗ ಸದ್ಯಕ್ಕೆ ಮನೆಗೋಗಿ, ಆಮೇಲೆ ಪೊಲೀಸ್ ಠಾಣೆಗೆ ಹೊಗೋಣ." ಕಾರು ನಿಧಾನವಾಗಿ ಮನೆಯ ಮುಂದೆ ನಿಂತುಕೊಂಡಿತು.

ಪ್ರಾಚಿ ಮತ್ತು ಪವನ್ ಹಗುರವಾಗಿ ಊಟ ಮುಗಿಸಿದ ಮೇಲೆ ಸ್ವಲ್ಪ ಸಮಯ ವಿಶ್ರಾಂತಿ ತೆಗೆದುಕೊಂಡರು.



ಪ್ರಾಚಿ ಮತ್ತು ಪವನ್ ಪೊಲೀಸ್ ಅಧಿಕಾರಿ ಮತ್ತು ಗೆಳೆಯನಾದ ತರುಣ್‌ಕುಮಾರ್ ಮುಂದೆ ಕುಳಿತಿದ್ದಾರೆ, ಅಲ್ಲಿಯೇ ಪಕ್ಕದಲ್ಲಿ ನಿಂತಿರುವ ಕಾನ್ಸ್‌ಟೇಬಲ್ ಒಬ್ಬ (ಎಫ್.ಐ.ಆರ್) ದೂರನ್ನು ವಿವರವಾಗಿ ಬರೆದುಕೊಳ್ಳುತ್ತಿದ್ದಾನೆ. ಪೊಲೀಸ್ ಪ್ರಶ್ನೆಗಳಿಗೆ ಉತ್ತರಗಳನ್ನು ವಿವರವಾಗಿ ನೀಡುತ್ತಿರುವ ಪ್ರಾಚಿ ತನಗೆ ಮೊದಲಿಂದ – ಈ ದಿನದವರೆಗೂ ಫೋನ್‌ನಲ್ಲಿ ಬಂದಿರುವ ಪ್ರತಿಯೊಂದು ಪದವನ್ನೂ ಜ್ಞಾಪಿಸಿಕೊಳ್ಳುತ್ತಾ ಹೇಳುತ್ತಿದ್ದಾಳೆ.

"ನಿಮಗೆ ಯಾರ ಮೇಲಾದರೂ ಶಂಕೆ ಇದೆಯಾ?" ಅಧಿಕಾರಿಯ ಪ್ರಶ್ನೆಗೆ ಇಬ್ಬರೂ ಒಂದೆರಡು ಕ್ಷಣ ಯೋಚಿಸಿದ ಮೇಲೆ, "ಹಾಗೆ ಯಾರ ಮೇಲೆಯೂ ನಮಗೆ ಸಂದೇಹವಿಲ್ಲ" ಎನ್ನುತ್ತಾನೆ ಪವನ್.

"ಮಿಸೆಸ್ ಪವನ್ ನಿಮಗೆ"

"ನಿಧಾನವಾಗಿ ಯೋಚಿಸಿ ಹೇಳಿ. ನಮ್ಮ ಪ್ರಯತ್ನಕ್ಕಿಂತ ನಿಮ್ಮ ಸಹಕಾರ ಬಹಳ ಮುಖ್ಯ"

ಪ್ರಾಚಿ; ಮತ್ತೊಮ್ಮೆ ಗಾಢವಾಗಿ ನೆನಪಿನ ಆಳಕ್ಕೆ ಇಳಿದು ಶೋಧಿಸುತ್ತಾಳೆ. ಆದರೆ ಯಾರ ಮೇಲೆಯೂ ಅವಳಿಗೆ ಸಂದೇಹ ಬರದೆ "ಯಾರೂ ಇಲ್ಲ" ಎಂದು ತಲೆ ಅಲ್ಲಾಡಿಸಿದಳು.

"ಆಯಿತು, ಮಿಸ್ಟರ್ ಪವನ್ ಅಂಡ್ ಮಿಸೆಸ್ ಪವನ್ ನೀವು ಇನ್ನ ಹೋಗಬಹುದು, ನಾವು ನಮ್ಮ ಪ್ರಯತ್ನ ಮಾಡುತ್ತೇವೆ" ಅಧಿಕಾರಿ ಹೇಳಿದ. ಪವನ್ ಮತ್ತು ಪ್ರಾಚಿ ಎದ್ದು ನಿಂತುಕೊಂಡರು. ಪವನ್ ಮತ್ತೊಮ್ಮೆ ಈ ದೂರಿನ ಬಗ್ಗೆ ಹೆಚ್ಚು ಗಮನ ಕೊಡುವಂತೆ ತಿಳಿಸಿ ಕರಚಾಲಕನ ಮಾಡಿದ. ಇಬ್ಬರೂ ಕಾರಿನ ಕಡೆ ನಡೆಯತೊಡಗಿದಳು.

ಕಾರು ನೇರವಾಗಿ ದೂರವಾಣಿಯ ಮುಖ್ಯ ಎಂಜಿನೀಯರ್ ಕಚೇರಿಯ ಮುಂದೆ ನಿಂತುಕೊಂಡಿತು. ಭೇಟಿಯ ಕಾರ್ಡ್‌ಕೊಟ್ಟು ಎರಡು ನಿಮಿಷಗಳಲ್ಲಿ ಒಳಕ್ಕೆ ಹೋಗಲು ಅನುಮತಿ ಪಡೆದ ಪವನ್ ಮತ್ತು ಪ್ರಾಚಿ ಇಬ್ಬರು ಜೊತೆಯಾಗಿ ಒಳಕ್ಕೆ ನಡೆದರು.

ಮಧ್ಯ ವಯಸ್ಸಿನ ಮುಖ್ಯ ಎಂಜಿನೀಯರ್ ಎದ್ದು ಕರಚಾಲನೆ ಮಾಡಿ ಇಬ್ಬರನ್ನು ಬರಮಾಡಿಕೊಂಡು ಕುಳಿತುಕೊಳ್ಳಲು ಕುರ್ಚಿ ತೋರಿಸಿದರು. ಕಣ್ಣುಗಳಲ್ಲೆ ದೂರವಾಣಿಯ ಅಂತರಾಳವನ್ನು ತುಂಬಿಕೊಂಡಿರುವ ಸಮಚತುಷ್ಕೋಣದಾಕಾರದ ಕನ್ನಡಕ ಧರಿಸಿರುವ ಈ ಇಂಜಿನೀಯರೊಮ್ಮೆ ಪ್ರಾಚಿಯ ಅಂದಕ್ಕೆ ಹತ್ತು ವರ್ಷಗಳ ಹಿಂದಕ್ಕೋಗಿ ಇಣಿಕಿ ನೋಡಿದ.

ಪವನ್ ನೇರವಾಗಿಯೇ ವಿಷಯಕ್ಕೆ ಇಳಿದ.

ಸುಮಾರು ಹೊತ್ತು ಮಾತುಕತೆಗಳು ನಡೆದ ಈಗ ಹೇಳಿದ್ದನ್ನೇ ವಿವರವಾಗಿ ಬರೆಯುವಂತೆ ಎರಡು ಬಿಳಿ ಕಾಗದಗಳನ್ನು ಪವನ್‌ಗೆ ಕೊಟ್ಟು ಫೋನ್ ಸಂಖ್ಯೆ, ವಿಳಾಸ ಎಲ್ಲವನ್ನೂ ಬರೆಯುವಂತೆ ತಿಳಿಸಿದ. ಪವನ್ ಬಿಳಿ ಕಾಗದಗಳ ಮೇಲೆ ಅಕ್ಷರಗಳ ಸಾಲುಗಳನ್ನು ಸರಾಗವಾಗಿ ತುಂಬುತ್ತಾ ಹೋದ.

ಈಗಾಗಲೇ ಮುಖ್ಯ ಎಂಜಿನೀಯರ್ ಆದೇಶದಂತೆ ಇವರ ಫೋನ್ ಇರುವ ವಿಭಾಗದ ಎಂಜಿನೀಯರ್ ಕೂಡ ಎಲ್ಲಾ ವಿವರಗಳನ್ನೂ ಕೇಳಿಸಿಕೊಳ್ಳುತ್ತಿದ್ದಾನೆ. ಪ್ರಾಚಿ ಅಂದಿನ ಇಂಗ್ಲಿಷ್ ದಿನಪತ್ರಿಕೆ ತೆಗೆದುಕೊಂಡು ಕಣ್ಣಾಯಿಸುತ್ತಿದ್ದಾಳೆ.

ಮುಖ್ಯ ಎಂಜಿನೀಯರ್ ಮತ್ತು ವಿಭಾಗದ ಸಹಾಯಕ ಎಂಜಿನೀಯರ್ ಇಬ್ಬರು ಮಾತನಾಡಿದ ಮೇಲೆ ಒಂದು ನಿರ್ದಿಷ್ಟ ಘಟ್ಟಕ್ಕೆ ತಲುಪತ್ತಾರೆ.

ಪವನ್ ದೂರನ್ನು ಪ್ರಾಚಿಯ ಹೆಸರಿನಲ್ಲೇ ಬರೆದು ತಾನೂ ಸಹ ಸಹಿ ಹಾಕುತ್ತಾನೆ, ಕಾರಣ ಫೋನ್ ಪವನ್‌ನ ಹೆಸರಲ್ಲಿ ಇರುವುದರಿಂದ.

"ನಾಳೆ ಬೆಳಿಗ್ಗೆಯೇ ಮತ್ತೊಂದು ಹೊಸ ಫೋನ್ ತಂದು ನಿಮ್ಮ ಮನೆಯಲ್ಲಿ ಜೋಡಿಸಿರುತ್ತಾರೆ. ಆ ಆಗಂತಕ ಮತ್ತೆ ಫೋನ್ ಮಾಡಿದ ತಕ್ಷಣ, ಅಥವಾ ಮಾತನಾಡುತ್ತಿರುವಾಗ ಹೊಸ ಫೋನ್‌ನ ಮುಕಾಂತರ ನೀವು ನಮಗೆ ಫೋನ್ ಮಾಡುವುದು."

ನಾವು ಸಹ ನಿಮ್ಮ ಫೋನ್‌ಗೆ ಬರುವ ಕರೆಯನ್ನು ನಿಮ್ಮ ದೂರವಾಣಿಯ ಕಂಟ್ರೋಲ್ ಕೋಣೆಯಲ್ಲಿ ಪತ್ತೆ ಹಚ್ಚುತ್ತೇವೆ. ಸಾಧ್ಯವಾದರೆ ನೀವು ಒಂದು ಸೂಕ್ಷ್ಮ ಟೇಪ್‌ರೆಕಾರ್ಡರಿನಿಂದ ಟೇಪ್ ಮಾಡಿಕೊಳ್ಳುವುದು, ಬೇಕಾದರೆ ಆಟೋಮ್ಯಾಟಿಕ್ ಟೇಪ್‌ರೆಕಾರ್ಡರ್ ಕಮ್ ಫೋನ್ ಜೋಡಿಸುತ್ತೇವೆ" ಎಂಜಿನೀಯರ್ ಹೇಳುತ್ತಾ ಹೋಗುತ್ತಿದ್ದ.

ಪವನ್ ಮರೆತೇಹೋಗಿದ್ದ, ತಮ್ಮ ಆಧುನಿಕ ಹಾಂಕ್‌ಕಾಂಗ್ ಫೋನ್ ರಿಸೀವರ್ ಬಗ್ಗೆ ಹೇಳಿದ. "ಹಾಗಾದರೆ ಇನ್ನೂ ಒಳ್ಳೆಯದೆ, ನೀವು ಇಷ್ಟೊತ್ತು ಆ ವಿಷಯ ಹೇಳಲೇ ಇಲ್ಲವಲ್ಲ" ಎಂಜನೀಯರ್ ಹೇಳಿದ. "ಹೌದು, ನಾನು ಮರೆತುಹೋಗಿದ್ದೆ" ಪವನ್ ಉತ್ತರಿಸಿದ.

"ಇನ್ನೊಂದು ಮುಖ್ಯ ವಿಷಯ ನೀವು ಏನೇ ವಿಷಯ ತಿಳಿಯಬಯಸಿದರೂ ಸಂಖ್ಯೆ ಬರೆದು, ಈ ಸಂಖ್ಯೆ ನಿಮ್ಮಿಬ್ಬರಿಗೆ ಮಾತ್ರ ತಿಳಿದಿರಲಿ" ಎಂಜಿನೀಯರ್ ಹೇಳಿದ. ಆ ಸಂಖ್ಯೆ ಇರುವ ಕಾಗದವನ್ನು ಪವನ್ ಮಡಿಚಿ ತನ್ನ ಬ್ರೀಫ್‌ಕೇಸ್‌ನಲ್ಲಿಟ್ಟುಕೊಂಡ.

"ಬಹುಶಃ ನಾವು ಇಲ್ಲಿಗೆ ನಮ್ಮ ಮಾತುಗಳನ್ನ ಮುಗಿಸಬಹುದೆಂದು ಕೊಳ್ಳುತ್ತೇನೆ" ಮುಖ್ಯ ಇಂಜಿನೀಯರ್ ಹೇಳಿದ. ಪವನ್ ಎದ್ದು ನಿಂತು ಕರಚಾಲನೆ ಮಾಡಿದ. ಮುಖ್ಯ ಎಂಜಿನೀಯರ್ ಮತ್ತೊಮ್ಮೆ ಎದ್ದುನಿಂತು ಇಬ್ಬರನ್ನೂ ಬೀಳ್ಕೊಟ್ಟ.

ಪ್ರಾಚಿ ಮತ್ತು ಪವನ್ ಮತ್ತೊಮ್ಮೆ ಕಾರಿನಲ್ಲಿ ಬಹಳ ಸನಿಹದಲ್ಲಿ ಕುಳಿತಿದ್ದಾರೆ. ಕಾರು ಸರಾಗವಾಗಿ ಪವನ್ ಕೈಗಳಲ್ಲಿ ಚಲಿಸುತ್ತಿದೆ.

"ಪ್ರಾಚಿ ಇಷ್ಟಕ್ಕೂ ಈ ದಿನ ಫೋನ್‌ನಲ್ಲಿ ಏನು ಮಾತನಾಡಿದ?"

ಪವನ್ ಕೇಳಿದ. ಪ್ರಾಚಿಯ ಎದೆಯ ಮೇಲೆ ಪವನ್‌ನ ಎಡತೊಳು ತನ್ನ

ಭಾರದ ಜೊತೆ ಇನ್ನೊಂದು ಉದ್ದೇಶವನ್ನೊತ್ತಿ ಸ್ಪರ್ಶಿಸುತ್ತಿದೆ. ಪ್ರಾಚಿಗೆ ಕೋಪ ವಿಪರೀತವಾಗಿ, ಒಂದು ಕೆಟ್ಟ ಪದ ಉಪಯೋಗಿಸಿದಳು. ಪ್ರಾಚಿಯ ಬಾಯಲ್ಲಿ ಎಂದೂ ಆ ರೀತಿಯ ಪದ ಹೊರಟಿರಲಿಲ್ಲ. ಪವನ್ ಕೂಡ ಸ್ವಲ್ಪ ಆಶ್ಚರ್ಯದಿಂದ ಅವಳ ಕಡೆ ನೋಡಿದ.

“ನೀನು ನನ್ನ ಜೊತೆ ಒಂದು ದಿನ ಕಳೆದರೆ ಸಾಕು. ನನ್ನ ಜೀವನದಲ್ಲಿ ಮತ್ತೇನೂ ಬೇಕಿಲ್ಲ, ಮತ್ತೆ ನಾನೆಂದು ನಿನ್ನನ್ನು ಜ್ಞಾಪಿಸಿಕೊಳ್ಳುವುದಿಲ್ಲ. ಇನ್ನೂ ಏನೇನೋ ಬೊಗಳಿದ” ಎಂದಳು.



"Lovers never die they will be burried always alive"

ಹಲವು ವರ್ಷಗಳ ಅನುಭವದಂತೆ ಡಿಸೆಂಬರ್ ೧೪ ರಿಂದ ೨೪ರ ಮಧ್ಯದ ಕಾಲ ಎಲ್ಲಾ ರೀತಿಯಲ್ಲೂ ಬಹಳ ಸೌಮ್ಯ ಮತ್ತು ಪ್ರಶಾಂತ ಎನ್ನಲಾಗಿದೆ.

ಪ್ರಿಯ ಪ್ರಿಯತಮೆಯರು ಸಮಯ ಸಮಯಕ್ಕೆ ದೂರವಾಗಿ ಮತ್ತೆ ಬೆರೆತರೆ ಸಂತೋಷ ಹೊಮ್ಮುತ್ತದೆ. ಇನ್ನೂ ಆಗಾಗ ಸಣ್ಣದಾಗಿ ಜಗಳವಾಡಿ ಒಂದಾದಾಗ ಇನ್ನಷ್ಟು ಸಂತೋಷ ವೃದ್ಧಿಸುತ್ತದಂತೆ.

ವಿನೋದ್ ಪ್ರತಿಯೊಂದು ಕ್ಷಣವು ಒಂದು ಯುಗದಂತೆ ಶಾಲಿನಿಯ ಅನುಪಸ್ಥಿತಿಯಲ್ಲಿ ನರಳುತ್ತಿದ್ದಾನೆ. ಶಾಲಿನಿಯ ಕೆಲವು ಮೊನಚಾದ ಮಾತುಗಳು ಅವನನ್ನು ರೊಚ್ಚಿಗೇಳಿಸಿ ತಾನೊಬ್ಬ ಗಂಡಸು ಎನ್ನುವಂತೆ ಎಚ್ಚರಿಸುತ್ತಿವೆ.

ವಿನೋದ್ ತನ್ನ ಮನಸ್ಸನ್ನು ಒಂದು ಕಡೆ ಕೇಂದ್ರೀಕರಿಸಲಾಗದೆ, ಹಗಲು ರಾತ್ರಿಯೆನ್ನದೆ ಒಂದು ರೀತಿಯಲ್ಲಿ 'ಷೇಕ್ಸ್‌ಪಿಯರ್‌ನ ಲೇಡಿ ಮ್ಯಕ್‌ಬಥ್‌ನಂತೆ' ಚಡಪಡಿಸುತ್ತ ಒಂದೊಂದು ಕ್ಷಣದಲ್ಲೂ ಒಂದೊಂದು ಗಟ್ಟದಲ್ಲಿರುತ್ತಾನೆ. ಆದರೂ ಯಾವುದೇ ಮುಂದುವರೆದ ಯೋಚನೆಯಾದರೂ 'ಬಿ' ದರ್ಜೆಯ ಕನ್ನಡ ಸಿನಿಮಾಗಳ 'ಸಿ' ತರಗತಿಯ ನಾಯಕನ ಯೋಚನೆಗಳಿಗಿಂತ ಮುಂದಕ್ಕೆ ಅವನ ಯೋಚನೆ ಹೋಗಲಿಲ್ಲ.

ಮತ್ತೊಂದು ಬೆಳಿಗಿನ ಬೆಂಗಳೂರು ಸೂರ್ಯನ ಕಣ್ಣಲ್ಲಿ ಸ್ವಚ್ಛವಾಗಿ ಕಂಗೊಳಿಸುತ್ತಿದೆ. ಬೆಳಿಗ್ಗೆ ಎದ್ದ ವಿನೋದ್ ಯಾರಿಗಾಗಿಯೋ ಪುಕ್ಕಟೆಯಾಗಿ ಕೆಲಸಮಾಡಿದಂತೆ ತನ್ನ ದಿನನಿತ್ಯದ ಕೆಲಸಗಳನ್ನು ಎರಾಬಿರಿ ಮಾಡಿ ಮುಗಿಸಿ ತಾನು ಹೋಗಬೇಕಾಗಿರುವ ಸಮಯಕ್ಕಿಂತ ಬಹಳ ಮುಂಚೆಯೇ ತಯಾರಾಗಿ ಸಮಯವನ್ನು ತನ್ನ ಹೆಗಲ ಮೇಲೆ ಹೊತ್ತುಕೊಂಡಂತೆ ಬುಸುಗುಡುತ್ತಿದ್ದಾನೆ.

ಅದೇ ಬಡಾವಣೆಯ ಮತ್ತೊಂದು ಬೀದಿಯಲ್ಲಿ ಶಾಲಿನಿ ಯಾವ ರೀತಿಯ ಗಡಿಬಿಡಿಯೂ ಇಲ್ಲದೆ ಎಂದಿನಂತೆ ತನ್ನ ಬೆಳಿಗಿನ ಕೆಲಸಗಳನ್ನು ಚೊಕ್ಕಟವಾಗಿ ಮಾಡಿಕೊಳ್ಳುತ್ತಿದ್ದಾಳೆ. ಟು ಇನ್ ಒನ್ ಸ್ಪಿರಿಯೋದಲ್ಲಿ ಇತ್ತೀಚಿನ ಕನ್ನಡ ಹಾಡುಗಳು ಜುಂ ಜುಂ ಎನ್ನುವ ವಿಶೇಷ ಸಂಗೀತದ ಜೊತೆಗೆ ಹೊನಲುತ್ತಿವೆ. ಬೆಳಗು ಮಾಮೂಲಿಯಾಗಿಯೇ ಅವಳಲ್ಲಿ ಒಂದು ರೀತಿಯ ಸಡಗರ ಮೂಡಿಸಿದೆ.

ಖುಷಿ ಸಂತೋಷ ಶಾಂತ ಎನ್ನುವ ಪದಗಳ ಬಗ್ಗೆ ಎಲ್ಲರೂ ಮಾತನಾಡುತ್ತಾರೆ. ಆದರೆ ದಿನನಿತ್ಯದ ಸಣ್ಣ ಸಣ್ಣ ವಿಷಯಗಳಲ್ಲಿ ಭಿನ್ನಾಭಿಪ್ರಾಯಗಳನ್ನು ತುಂಬಿಕೊಳ್ಳುತ್ತ ತಮ್ಮ ಅಮೂಲ್ಯವಾದ ಜೀವನದ ಶಾಂತತೆಯನ್ನು ಹಾಳು ಮಾಡಿಕೊಳ್ಳುತ್ತಾರೆ.

ಜೀವನವನ್ನು ಅಮೂಲ್ಯವಾಗಿ ದೃಢಿಸಿಕೊಳ್ಳುವುದೇ ಅಲ್ಲದೆ ಸುತ್ತಲಿನ ಜನರಲ್ಲೂ ಲವಲವಿಕೆಯನ್ನು ತುಂಬಿಸುವವರು ಕೆಲವರುಂಟು. ಶಾಲಿನಿ ಕೂಡ ಅಷ್ಟೇ ಸುತ್ತಲಿನ ವಾತಾವರಣವನ್ನು ಲವಲವಿಕೆಯಿಂದ ಸಜ್ಜುಗೊಳಿಸಿಬಿಡುತ್ತಾಳೆ.

ಎಂದಿನಂತೆ ತಾನು ಹೋಗಬೇಕಾಗಿರುವ ಸಮಯಕ್ಕೆ ಹಗುರವಾಗಿ ಸಿಂಗರಿಸಿಕೊಂಡು ವ್ಯಾನಿಟಿ ಚೀಲದಲ್ಲಿ ಎರಡು ಪುಸ್ತಕಗಳ ಜೊತೆಗೆ ಕ್ಯಾರಿಯರ್ ತುಂಬಿಕೊಂಡು ಹೊರಗಡೆ ನಡೆದಳು.

ವಿನೋದ್ ಈಗಾಗಲೇ ಬಲೆ ಬೀಸೆ ಬೇಟೆಗೆ ನಿಂತಂತೆ ಒಂದು ಅಡ್ಡರಸ್ತೆಯ ಮೂಲೆಯಲ್ಲಿ ನಿಂತು ಎದೆಯ ತುಂಬಾ ಕುತೂಹಲವನ್ನು ತುಂಬಿಕೊಂಡು ನೇತಾಡುತ್ತಿದ್ದಾನೆ. ಈ ದಿನ ಏನೇ ಆಗಲಿ ಒಂದು ಕೈ ನೋಡೇ ಬಿಡುವ ಎನ್ನುವ ದೃಢ ಸಂಕಲ್ಪ ಅವನಲ್ಲಿ ಹೊಮ್ಮುತ್ತಿದೆ. ಅಡ್ಡ ರಸ್ತೆಯಿಂದ ತಿರುಗಿಕೊಳ್ಳುವ ಪ್ರತಿಯೊಂದು ಹೆಣ್ಣಿನ ಉಡುಪಿನಲ್ಲೂ ಶಾಲಿನಿಯನ್ನು ಕಾಣುವ ವಿನೋದ್ ಸಮಯದ ಗಡಿ ದಾಟಿದಂತೆ ಇನ್ನಷ್ಟು ತವಕಗೊಂಡಿದ್ದಾನೆ.

'ಶಾಲಿನಿ' ಎಷ್ಟೊಂದು ಸೊಗಸಾದ ಹೆಸರು. ವಿನೋದ್ ಆ ಹೆಸರಲ್ಲಿನ ಸುಂದರತೆಯನ್ನು ಅವಲ ಸೌಂದರ್ಯದಲ್ಲಿ ಬೆರೆಸಿ ಇನ್ನೇನೋ ಒಂದು ಅದ್ಭುತ ಪ್ರೀತಿಯನ್ನು ಸೃಷ್ಟಿಸಿಕೊಳ್ಳುತ್ತಾನೆ.

ಶಾಲಿನಿ ಅಡ್ಡರಸ್ತೆಯ ವೃತ್ತವನ್ನು ಸುತ್ತಿಕೊಂಡು ಬಣ್ಣದ ಚಿಟ್ಟೆಯಂತೆ ನಡೆದು ಬರುತ್ತಿದ್ದಾಳೆ. ವಿನೋದ್ ಕಣ್ಣು ಪಟಲಗಳ ಮೇಲೆ ಬಿದ್ದ ಶಾಲಿನಿ ಚಿತ್ರ ಆಪ್ಟಿಕ್ ತಂತುವಿನ ಮುಖಾಂತರ ಮೆದುಳಿಗೆ ಮುಟ್ಟಿತು. ವಿನೋದ್ ಈಗಾಗಲೇ ಮಾತನಾಡಿಸಿರುವುದರಿಂದ ಧೈರ್ಯವಾಗಿ ಅಡ್ಡರಸ್ತೆಯಲ್ಲಿ ನಡೆದು ಶಾಲಿನಿಯನ್ನು ಮಾತನಾಡಿಸಿದ.

ಎಂದಿನಂತೆ ಇನ್ನಷ್ಟು ಸೊಗಸಾಗಿ ಬೆಳಗಿನ ಲವಲವಿಕೆ ತುಂಬಿಕೊಂಡಿರುವ

ಶಾಲಿನಿ ಮುಂಜಾವಿನ ಚೇತೋಹಾರಿ ಬಿಸಿಲಿಗೆ ಹೂವು ಅರಳಿದಂತೆ ಒಮ್ಮೆ ನಕ್ಕಳು. ವಿನೋದ್‌ಗೆ ಮೈಯೆಲ್ಲಾ ವಿದ್ಯುತ್ ಸಂಚಲನವಾಯಿತು.

"ಬ್ಯಾಂಕಿಗೆ ಹೋಗುತ್ತಿದ್ದೀರಲ್ಲವೆ?" ಪ್ರಶ್ನಿಸಿದ. ಶಾಲಿನಿ "ಇಲ್ಲ" ಎಂದಳು. ವಿನೋದ್ ಮತ್ತೆ ಕುತೂಹಲವಾಗಿ ಕೇಳಿದ.

ಪಕ್ಕದಲ್ಲಿ ನಡೆಯುತ್ತಿರುವ ಶಾಲಿನಿ ಇನ್ನಷ್ಟು ಸೊಗಸನ್ನು ಮುಖದಲ್ಲಿ ಬೆಳಗಿಸಿಕೊಂಡಳು.

ಇಪ್ಪತ್ತೆರಡರ ಗಡಿಯಲ್ಲಿರುವ ಶಾಲಿನಿ ತನ್ನ ದೇಹವನ್ನು ಸರಿಯಾಗಿ ಅಂಕಿಗಳಲ್ಲಿ ಇಟ್ಟುಕೊಂಡಿದ್ದಾಳೆ. ಈ ಅಂಕಿಗಳನ್ನು ಮುಚ್ಚಿಕೊಂಡಿರುವ ನವೀನ ಉಡುಪಿನ ಜೊತೆಗೆ ಕೊರಳಿನಲ್ಲಿ ಕೆಂಪು ರೂಬಿ ಕಲ್ಲುಗಳ ಮಾಲೆ. ಚಿನ್ನದ ಸಣ್ಣದಾದ ಕಿವಿ ಉಂಗುರಗಳು, 'ಮೆಡಿಕ್ಯೂರ್' ಮಾಡಿಸಿಕೊಂಡಿರುವ ಬೆರಳುಗಳು. ತನ್ನ ಪ್ರಶ್ನೆಗೆ ಇನ್ನೂ ಉತ್ತರ ಸಿಗದ ವಿನೋದ್ ಪಕ್ಕದಲ್ಲೇ ಪ್ರಶ್ನೆಯಾಗಿ ನಡೆಯುತ್ತಿದ್ದಾನೆ.

ಶಾಲಿನಿಯ ಎಡಗಡೆ ನಡೆಯುತ್ತಿದ್ದ ವಿನೋದ್ ಮುಂದಕ್ಕೆ ಎರಡೆಜ್ಜೆ ಇಟ್ಟು ಬಲಗಡೆಗೆ ಬಂದು "ನಿಮಗೊಂದು ಮಾತೇಳಲೆ" ಎಂದ.

"ಏನು... ಏನೇಳುತ್ತೀರ? ನೀವು ಬಹಳ ಸೊಗಸಾಗಿದ್ದೀರಿ ಅನ್ನುತ್ತೀರ." ಅರೆಕ್ಷಣ ಬೆರಗಾದ ವಿನೋದ್ ನಿಜ ಒಪ್ಪಿಕೊಳ್ಳದೆ "ಈ ದಿನ ಬ್ಯಾಂಕ್‌ಗೆ ಹೋಗುವುದಿಲ್ಲವೆ?"

"ಇಲ್ಲ" ಮತ್ತೆ ಶಾಲಿನಿ ನಕ್ಕಳು.

ಅವನಿಗೆ ಬೇಕಾಗಿರುವ ಉತ್ತರ ಈಗಲೂ ಶಾಲಿನಿಯಲ್ಲಿ ಸಿಗದೆ ಮತ್ತೊಮ್ಮೆ ಪ್ರಶ್ನೆಯಾಗಿಯೇ ನಡೆಯತೊಡಗಿದ.

ನಿಂತಿರುವ ಬಸ್ಸಿನೊಳಕ್ಕೆ ನೇರವಾಗಿ ಹತ್ತಿಕೊಂಡ ಶಾಲಿನಿ ಒಂದು ಆಸನದಲ್ಲಿ ಕುಳಿತುಕೊಂಡಳು. ಹಿಂದೆಯೇ ಹತ್ತಿಬಂದ ವಿನೋದ ಪಕ್ಕದಲ್ಲಿ ಕುಳಿತುಕೊಳ್ಳದೆ ಅರೆಕ್ಷಣ ತಡವರಿಸಿದ. ಶಾಲಿನಿ ಪಕ್ಕದಲ್ಲಿ ಕುಳಿತುಕೊಳ್ಳುವಂತೆ ಆದೇಶಿಸಿದಳು. ವಿನೋದ್ ಮಧ್ಯದಲ್ಲಿ ಸುಮಾರು ಆರು ಸೆ.ಮೀ.ಗಳಷ್ಟು ಅಂತರ ಬಿಟ್ಟು ಕುಳಿತುಕೊಂಡ.

"ಆಫೀಸಿಗೆ ಹೋಗಲಿಲ್ಲವೆ?" ಶಾಲಿನಿ ಕೇಳಿದಳು.

"ಹೋಗಬೇಕು" ನೇರವಾಗಿ ಉತ್ತರಿಸಿದ ಮೇಲೆ ಕೇಳಬಾರದಿತ್ತು ಎಂದುಕೊಂಡ. ಬಸ್ಸು ಬೆಂಗಳೂರಿನ ರಸ್ತೆಗಳ ಮೇಲೆ ಚಲಿಸುತ್ತಿತ್ತು. ತನ್ನ ಮತ್ತು ಶಾಲಿನಿಯ ನಡುವಿನ ಅಂತರದ ಬಗ್ಗೆ ಬಹಳ ಜಾಗರೂಕನಾಗಿ ಗಮನಿಸುತ್ತಿರುವ

ವಿನೋದ್ ಬಸ್ಸು ಆ ಕಡೆ ಈ ಕಡೆ ತಿರುಗಿಕೊಂಡಾಗ ಮೂಡುವ ಅಂತರವನ್ನು ಬೆನ್ನು ಮತ್ತು ಕಾಲುಗಳಲ್ಲಿ ಒತ್ತಿ ತಡೆದು ನಿಲ್ಲಿಸಿ ಶಾಲಿನಿಯನ್ನು ಸೋಕದಂತೆ ಎಚ್ಚರವಹಿಸುತ್ತಿದ್ದಾನೆ. ಶಾಲಿನಿ ಯಾವ ರೀತಿಯ ಗೊಡವೆಯೂ ಇಲ್ಲದೆ ಕಿಟಕಿಯ ಪಕ್ಕದಲ್ಲಿ ಕುಳಿತಿದ್ದಾಳೆ.

ಒಂದು ನಿಲ್ದಾಣದಲ್ಲಿ ಶಾಲಿನಿ ಇಳಿದುಬಂದಾಗ ವಿನೋದ್ ಕೂಡ ಹಿಂದೆಯೇ ಇಳಿದು ಬಂದ. "ಮತ್ತೆ ನೋಡೋಣ" ಎಂದ ಶಾಲಿನಿ ಗಾಳಿಯಲ್ಲಿ ಕೈಬೀಸಿ ನಡೆದಳು. ಹಿಂದೆಯೇ ಉದ್ದುದ್ದ ಹೆಜ್ಜೆಗಳಾಕಿ ಅಂಗಲಾಚಿಕೊಳ್ಳುತ್ತ ಬಂದ ವಿನೊದ್ "ಹೋಗಲಿ, ಈ ದಿನವಾದರೂ ನನ್ನ ಜೊತೆ ಕಾಫಿ ಕುಡಿಯಿರಿ" ಎಂದ.

ಶಾಲಿನಿ ಅವನ ಹಂಬಲದ ಆಹ್ವಾನಕ್ಕೆ ಇಲ್ಲವೆನ್ನದೆ "ನಡೆಯಿರಿ" ಎಂದಳು. ವಿನೋದ್ ತನ್ನ ಹಲವು ವರ್ಷಗಳ ತಪಸ್ಸು ಪಲಿಸಿದಂತೆ ಒಂದು ಒಳ್ಳೆ ಹೋಟೆಲಿನ ಫ್ಯಾಮಿಲಿ ಕೋಣೆಯೊಳಕ್ಕೆ ಕರೆದುಕೊಂಡುಹೋದ.

ಶಾಲಿನಿ ಮೊದಲೇ ಹೇಳಿದ್ದಳು. ನಾನು ಮಾತ್ರ ಏನೂ ತಿನ್ನುವುದಿಲ್ಲ. ಒಂದು ಕಾಫಿ ಅಷ್ಟೇ ಎಂದು "ಯಾರೂ ಗೆಳತಿಯರಿಲ್ಲವೆ?"

"ಇದ್ದಿದ್ದರೆ...?" ಮುಂದಿನ ಪದಗಳನ್ನು ನುಂಗಿಕೊಂಡ ಕಾಫಿ ಜೊತೆಗೆ, ಶಾಲಿನಿ ನಕ್ಕಳು. ಪೆದ್ದಗುಂಡ ರಾಜನ ಮಗಳನ್ನ ಕೊನೆಗೂ ನಗಿಸಿದಂತೆ ತೃಪ್ತಿಪಡೆದ.

"ಹೌದು, ನೀವೀಗ ಬ್ಯಾಂಕ್‌ಗೆ ಹೋಗುವುದಿಲ್ಲ ಎಂದಿರಲ್ಲ, ಎಲ್ಲಿಗೆ ಹೊರಟಿದ್ದೀರೆಂದು ತಿಳಿದುಕೊಳ್ಳಬಹುದೆ?"

"ನಾನು ಬ್ಯಾಂಕಿಗೇನೆ ಹೋಗುತ್ತಿದ್ದೇನೆ"

"ಮತ್ತೆ ಕೇಳಿದಾಗ ಇಲ್ಲ ಅಂದರಲ್ಲ"

"ನೀವು ಎಲ್ಲಿಗಾದರೂ ಕರೆಯಬಹುದೆಂದು ಹಾಗೆ ಹೇಳಿದೆ, ಆದರೆ ನೀವು ಕಚೇರಿಗೆ ಹೋಗುತ್ತಿದ್ದೇನೆ ಅಂದಿರಲ್ಲ" ಮತ್ತೆ ಮುಸಿ ಮುಸಿ ನಕ್ಕಳು.

ತಲೆಯನ್ನು ಕರೆದುಕೊಳ್ಳುವುದಕ್ಕಿಂತ ಮುಂಚೆಯೇ ತಲೆ ಕೂದಲು ನಿಂತುಕೊಂಡಿವೆ ಎನಿಸಿತು ಅವನಿಗೆ.

ಮತ್ತೆ ಧೈರ್ಯಮಾಡಿ "ಹಾಗಾದರೆ ಎಲ್ಲಿಗಾದರೂ ನಡೆಯಿರು."

"ಎಲ್ಲಿಗೆ?" ಶಾಲಿನಿ ತುಸು ಗಡುಸಾಗಿ ಕೇಳಿದಳು.

ವಿನೋದ್ ಒಂದು ಕ್ಷಣ ಭೂಮಿಗೆ ಇಳಿದಂತೆ ಮುದುಡಿಕೊಂಡ, ಮತ್ತೆ ಚೇತರಿಸಿಕೊಂಡು ತನ್ನ ಎಲ್ಲಾ ಸಂದೇಹಗಳನ್ನೂ ಒಂದೇ ಪ್ರಶ್ನೆಯಲ್ಲೇ ಕಂಡುಕೊಂಡವನಂತೆ.

"ನಿಮಗ್ಯಾರಾದರೂ ಗೆಳೆಯರಿದ್ದಾರೆಯೇ?"

"ಅಂದರೆ ಬಾಯ್‌ಫ್ರೆಂಡ್ಸ್. ಇದ್ದರು, ಇದ್ದಾರೆ ಕೂಡ, ಎಲ್ಲರದು ಉದ್ದೇಶ ಮಾತ್ರ ಒಂದೆ.

ತನಗೇನು ಅರ್ಥವಾಗದೆ ಪಿಳಿಪಿಳಿಯಾಗಿ ನೋಡಿದ.

ಮನೆ, ಪ್ಲಾಟು, ಮದುವೆ, ಕಾರು ಒಂದು ಲಕ್ಷ ಎರಡು ಲಕ್ಷ, ವಗೈರಾ ವಗೆರಾ ಕೇಳುತ್ತಾರೆ ಅವರೆಲ್ಲಾ ನೋಡಿಕೊಳ್ಳುವುದಾದರು ಏನು?

"ಕ್ಷಮಿಸಿ, ಅದೆಲ್ಲಾ ಬಿಡಿ. ಬ್ಯಾಂಕ್‌ಗೆ ಸಮಯವಾಗಿದೆ ಮತ್ತೆ ಸಿಗೋಣ" ಶಾಲಿನಿ ಎದ್ದು ನಡೆದೇಬಿಟ್ಟಳು.

"ಮತ್ತೆ ಯಾವಾಗ ಸಿಗುತ್ತೀರಾ?"

"ಏತಕ್ಕೆ? ನಮ್ಮ ಮನೆಗೆ ಬನ್ನಿ ಸಾಯಂಕಾಲ" ನಮ್ಮ ಮನೆಗೆ ಎನ್ನುವ ಮಾತು ಕೇಳಿದ ಕೂಡಲೆ ವಿನೋದ್ ಬಿಳಿಚಿಕೊಂಡ.

"ನಮ್ಮ ತಂದೆ ಊರಿನಲ್ಲಿಲ್ಲ"

"ನಿಮ್ಮಣ್ಣ"

"ನಮ್ಮಣ್ಣ ದಿಲ್ಲಿಗೋಗಿದ್ದಾರೆ."

"ಹಾಗಾದರೆ ಮನೆಯಲ್ಲಿ ಒಬ್ಬರೇ ಇದ್ದೀರ."

"ಹೌದು ಅದಕ್ಕೆ ಅಲ್ಲವೇ ನಿಮ್ಮನ್ನು ಕರೆಯುತ್ತಿರುವುದು" ಶಾಲಿನಿ ಮತ್ತೊಮ್ಮೆ ನಗುತ್ತಾ ರಸ್ತೆಗೆ ಇಳಿದುಬಿಟ್ಟಳು.

ಹೃದಯದ ವೇಗ ಹೆಚ್ಚಿಸಿಕೊಂಡ ವಿನೋದ್ ಬಿಲ್‌ಕೊಟ್ಟು ಹಿಂದೆಯೇ ಅಷ್ಟು ದೂರ ಓಡಿ ಹೋಗಿ ನೋಡಿದ. ಶಾಲಿನಿ ಕಾಣಲಿಲ್ಲ. 'ಸಾಯಂಕಾಲ' ಎನ್ನುವ ಪದ ಅವನಲ್ಲಿ ಉಲ್ಲಾಸದ ಜೊತೆಗೆ ಕುತೂಹಲ ಮತ್ತು ಒಂದು ರೀತಿಯ ಕಂಪನವನ್ನು ಮೂಡಿಸಿತು.

ಹೆಣ್ಣಿನ ಒಳಗಿರುವ ನಿಗೂಢವನ್ನು ಗುರುತಿಸಿ ತಟ್ಟಿ ಎಬ್ಬಿಸಿದರೆ ಸಾಕು ಹೆಣ್ಣು ತನಗೆ ತಾನೆ ತನ್ನ ಸರ್ವಸ್ವವನ್ನೂ ಕೊಟ್ಟುಬಿಡುತ್ತಾಳೆ. ಅದೊಂದು ಕಲೆ. ಹೃದಯ-ತುಟಿಗಳು ಒಂದಾದರೆ ಪ್ರೀತಿ ಸಂಪೂರ್ಣವಾಗುತ್ತದೆ.



ತ್ರಿಸ್ಟಾರ್ ಹೋಟಲಿನಲ್ಲಿ ಹಗುರವಾಗಿ ಊಟ ಮಾಡಿ ಬಂದಿರುವ ಇಬ್ಬರು ಸೊಗಸಾದ ಹಾಸಿಗೆ ಮೇಲೆ ಕುಳಿತು ಆಂಗ್ಲಭಾಷೆಯಲ್ಲಿ ಮಾತನಾಡಿಕೊಳ್ಳುತ್ತಿದ್ದಾರೆ.

"ನನ್ನನ್ನು ಮೊದಲು ನೋಡಿದಾಗ ನಿನಗೇನನಿಸಿತು?"

"ದಿನಾ ದೇಶೀಯ ಮದ್ಯ ಕುಡಿಯುತ್ತಿರುವವನಿಗೆ ಒಳ್ಳೆ ವಿದೇಶಿಯ ಮದ್ಯ ನೋಡಿದಂತಾಯಿತು."

"ನಿನಗೊಂದು ವಿಷಯ ಗೊತ್ತೆ?"

"ಏನು?"

"ಒಳ್ಳೆ ಸುಂದರವಾದ ಹೆಣ್ಣುಗಳನ್ನು ನೋಡುತ್ತಿದ್ದಿರೂ ಸಾಕು... ದೈವಿಕ ಆರೋಗ್ಯ ವೃದ್ಧಿಗೊಳ್ಳುತ್ತದೆ. ಆಸೆ ಪೂರ್ತಿಕೆಯಾಗುತ್ತದೆ ಕೂಡ"

"ಹೌದೆ? ಈ ರೀತಿಯ ಲಾಭ ಗಂಡಸರಿಗೂ ಉಂಟೆ?" ಜೋರಾಗಿ ನಕ್ಕಳು.

ಅವಳ ಕೆನ್ನೆಗಳು ಗುಳಿ ತೋಡಿಕೊಂಡವು. ತುಸು ಉಬ್ಬಿಕೊಂಡಿರುವ ದಪ್ಪದಾದ ತುಟಿಗಳು ಎರಡಾದ ಬಿಲ್ಲಿನಂತೆ ಹೊಡೆದುಕೊಂಡಿದ್ದರೆ ಕೆಳ ತುಟಿ ಇನ್ನಷ್ಟು ಆಸೆಯಿಂದ ಹೊರಕ್ಕೆ ಉಬ್ಬಿನಿಂತಿದೆ. ಕೇಸರಿ ಕಪೋಲಗಳ ಮೇಲಿನ ಎಲುಬುಗಳು ತುಸುವೆ ಎದ್ದು ಕಾಣುತ್ತಿದ್ದು ಕಪ್ಪು ಕೂದಲು ಮುಖವನ್ನು ಎರಡು ಕಡೆಯೂ ಬೊಗಸೆಯಲ್ಲಿ ಅಪ್ಪಿಕೊಂಡಂತಿವೆ.

ಒಂದು ಚೆಲುವಾದ ಚೀನಿ ದೇಶದ ಬೊಂಬೆಯಂತಿರುವ ಹೆಣ್ಣು ಇಂಡೋಮಂಗೋಲಾಯ್ಡ್ ಲಕ್ಷಣಗಳುಳ್ಳ ಈಶಾನ್ಯ ಬಾರತದ ಒಂದು ಸುಂದರಿ. ಓದುವುದಕ್ಕೆಂದು ಉತ್ತರ ಈಶಾನ್ಯದಿಂದ ಬೆಂಗಳೂರಿಗೆ ಬಂದು ಹೇಗೋ ನಮ್ಮ ಹೀರೋಗೆ ಷಿಕಾರಿಯಾಗಿದ್ದಾಳೆ.

"ನೀನು ಬಹಳ ಚೆಲುವಾಗಿದ್ದೀಯಾ. ಆದರೆ?" ನಿಲ್ಲಿಸಿದ.

"ಆದರೆ" ಪ್ರಶ್ನಿಸಿದಳು.

"ನಿನ್ನ ನೋಟ ಸೊಗಸಾಗಿದೆ. ಆದರೆ?"

"ಆದರೆ" ಮತ್ತೆ ಪ್ರಶ್ನಿಸಿದಳು.

"ತಗ್ಗಾಗಿದೆ" ನಕ್ಕಳು.

"ಐರೋಪ್ಯ ಹೆಣ್ಣಿಗಿಂತ ಇಂಡೋಮಂಗೋಲಾಯ್ಡ್ ಹೆಣ್ಣಿಗೆ ಸೊಂಟ (ಬಟಕ್ಸ್) ಕೆಳಕ್ಕಿರುತ್ತದೆ." ಅವಳೇಳಿದಳು. "ಒಳ್ಳೆಯದೇ ಆಯ್ತು." ಅವನೆಂದ. ಇಬ್ಬರೂ ಜೋರಾಗಿ ನಕ್ಕರು.

"BEAULINA Beaulina ನಿನ್ನ ಹೆಸರು ಕೇಳಿದಾಗಿನಿಂದ ಕೊನೆಯ LINA ಪದಗಳ ಬದಲಿಗೆ ಏನೇನೋ ಸೇರಿಸುತ್ತಿದ್ದೇನೆ, ಪೂರ್ತಿ ಹೆಸರನ್ನು ಸೌಂದರ್ಯವಾಗಿ

ಮಾರ್ಪಡಿಸುವುದಕ್ಕಾಗಿ ಆದರೆ ಆಗುತ್ತಿಲ್ಲ. ಕೊನೆಯದಾಗಿ ಒಂದೇ ಉತ್ತರ ಹೊಳೆಯುತ್ತದೆ."

"ಏನು" ಕುತೂಹಲದಿಂದ ಕೇಳಿದಳು.

"Beautiful" ಎಂದ.

ಅವಳ ನಗು ಅವಳನ್ನೇ ಕರಗಿಸುವಂತಿತ್ತು.

ಈಗಾಗಲೇ ಅಪರೂಪ ರಾತ್ರಿ ತನ್ನ ಮೊದಲ ಭಾಗವನ್ನು ಕಳೆದುಕೊಳ್ಳುತ್ತ ಹೋಗುತ್ತಿರುವುದರಿಂದ ಇದ್ದಕ್ಕಿದ್ದಂತೆ ಎಚ್ಚೆತ್ತವನಂತೆ ನಮ್ಮ ಹೀರೋ ನಿಜವಾದ ಸೌಂದರ್ಯವನ್ನು ಸವಿಯಲು ರಾತ್ರಿಯನ್ನು ಕರಗಿಸಲು ಒಳಗೊಳಗೆ ಹುರುಪುಗೊಳ್ಳುತ್ತಾ ಅಣಿಯಾದ.

ತಮ್ಮ ನಿಜವಾದ ಆಸೆ ಆಕಾಂಕ್ಷೆಗಳನ್ನು ಒಬ್ಬರಿಗೊಬ್ಬರು ಈಗಾಗಲೇ ಹೇಳಿಕೊಂಡಿದ್ದು, ಹೀರೋ ತನ್ನ ನಿಜ ಸ್ವರೂಪವನ್ನು ಅವಳಿಗೆ ಹೇಳದಿದ್ದ ಕಾರಣ ಹೆಚ್ಚಿಗೆ ಮರುಳುಗೊಳಿಸುವಂತಹ ಸಂಗತಿಗಳೇನು ಅವಳಿಗೆ ತೋರಿಸಿಲ್ಲ.

ಒಟ್ಟಿನಲ್ಲಿ ಅಷ್ಟೊಂದು ಸರಳವಾಗಿ ತನ್ನ ಬಲೆಯಲ್ಲಿ ಬಿದ್ದಿದ್ದಕ್ಕೆ ಅವನೇ ತುಸು ಆಶ್ಚರ್ಯಗೊಂಡಿದ್ದಾನೆ. ಅವಳು ಅಷ್ಟೇ ಅವನ ಬಗ್ಗೆ ಹೆಚ್ಚಿಗೆ ತಿಳಿದುಕೊಳ್ಳುವ ಅವಶ್ಯಕತೆ ಕೂಡ ಇಲ್ಲವೆನ್ನುವಂತೆ ಅವನಲ್ಲಿ ಬೆರೆತು ಹೋಗಿದ್ದಾಳೆ.

"ನನ್ನಲ್ಲಿ ನೀನು ಮೆಚ್ಚಿಕೊಂಡ ವಿಶಿಷ್ಟವಾದರೂ ಏನು" ಎನ್ನುವ ಪ್ರಶ್ನೆಗೆ "ನನಗೂ ಕೂಡ ಗೊತ್ತಿಲ್ಲ" ಎಂದು ಮುಗುಳು ನಕ್ಕಳು.

ಮುಖವನ್ನು ಹತ್ತಿರಕ್ಕೆ ತಂದು ಒಂದು ದೀರ್ಘವಾದ ಚುಂಬನ ಕೊಟ್ಟ. ಅವಳ ದಪ್ಪವಾದ ತೇವವಾದ ತುಟಿಗಳು ಅವನಿಗೊಂದು ಹೊಸದಾದ ಅನುಭವ ನೀಡಿದವು.

ಅವಳೂ ಅಷ್ಟೆ ತನ್ನ ಕೈಗಳಲ್ಲಿ ಅವನನ್ನು ಸುತ್ತಿಕೊಂಡು ಇನ್ನಷ್ಟು ಉದ್ರೇಕಿಸಿದಳು.

"ನಿನಗೆ ಯಾರಾದರೂ ಗೆಳೆಯರಿದ್ದಾರೆಯೇ?"

"ಇಬ್ಬರು-ಮೂವರು ಇದ್ದಾರೆ, ಇಲ್ಲಲ್ಲ, ಕೋಹಿಮಾದಲ್ಲಿ"

"ಅವರಲ್ಲಿ ಮದುವೆ ಮಾಡಿಕೊಳ್ಳುವುದು ಯಾರನ್ನ?"

"ಗೊತ್ತಿಲ್ಲ."

"ಮದುವೆ ಆಗುವವರೆಗೆ ಏನೂ ತೊಂದರೆ ಇಲ್ಲ. ಯಾರ ಜೊತೆಯಲ್ಲಾದರೂ

ಇರಬಹುದು. ಮದುವೆಯಾದ ಮೇಲೆ ಬೇರೊಬ್ಬರ ಜೊತೆ ಇರುವುದಿಲ್ಲ." ನೇರವಾಗಿ ಹೇಳಿದಳು.

ನಮ್ಮ ಹೀರೋ ಸ್ವಲ್ಪ ನೀರಿಳಿಸಿಕೊಂಡವನಂತೆ ಅವಳನ್ನೇ ನೋಡಿದ. ಆದರೆ ಅವಳ ಮುಖದಲ್ಲಿ ಯಾವ ರೀತಿಯ ಮಾರ್ಪಾಡು ಇರಲಿಲ್ಲ.

ಎರಡು ಬೋರೋಸಿಲ್ ಗ್ಲಾಸುಗಳಲ್ಲಿ ಎರಡೆರಡು ಪೆಗ್ ಬ್ರಾಂದಿ ಸುರಿಸಿ ಒಂದನ್ನು ಬ್ಯೂಲೀನಾ ಕೈಗೆ ಕೊಟ್ಟು ತಾನೊಂದನ್ನು ತೆಗೆದುಕೊಂಡು 'ಚೀಯರ್ಸ್' ಎಂದ.

"ನಾನು ಅಕ್ಕಿ ಬೀರನ್ನು ಬಹಳ ಮೆಚ್ಚುತ್ತೇನೆ. ಆದರೆ ಇಲ್ಲಿ ಮಾಡಲಾಗುವುದಿಲ್ಲ ನಾನಿರುವ ಹಾಸ್ಟಲ್‌ನಲ್ಲಿ ಏನೂ ಸಿಗುವುದಿಲ್ಲ."

"ಬಹಳ ದಿನಗಳಾದ ಮೇಲೆ ಡ್ರಿಂಕ್ಸ್ ತೆಗೆದುಕೊಳ್ಳುತ್ತಿದ್ದೇನೆ"

"ಆಯಿತು, ಇನ್ನು ಮೇಲೆ ದಿನಾಗಲೂ ತೆಗೆದುಕೊಳ್ಳುವೆಯಂತೆ." ಇಬ್ಬರೂ ನಕ್ಕರು.

ನಮ್ಮ ಹೀರೋ ದಕ್ಷಿಣ ಬಾರತದ ಸಾಂಕೇತಿಕ ಹೆಸರೊಂದನ್ನು ತನಗೆ ತಾನೇ ಇಟ್ಟುಕೊಂಡಿದ್ದಾನೆ. ಅದೇ ಹೆಸರನ್ನು ಕರೆದಳು, ಬ್ಯೂಲೀನಾ.

ಎರಡು ಪೆಗ್ ಈಗಾಗಲೇ ಏರಿಸಿರುವ ಹೀರೋ ತನ್ನ ಎಷ್ಟೋ ಹೆಸರುಗಳಲ್ಲಿ ಇದು ಒಂದು ಹೆಸರೆನ್ನುವುದನ್ನು ಅರೆ ಕ್ಷಣ ಮರೆತ. ಮತ್ತೆ ತುಸು ಜೋರಾಗಿ 'ಮಿಸ್ಟರ್ ರಮೇಶ್' ಎಂದಳು.

"ಓ... ಸಾರಿ" ಎಂದು ಏನೋ ಜ್ಞಾಪಿಸಿಕೊಂಡವನಂತೆ ಅವಳ ಕಡೆಗೆ ನೋಡಿದ. "ನನಗೆ ಇನ್ನಷ್ಟು ಬೇಕೆಂದು ಗ್ಲಾಸು ನೀಡಿದಳು.

ರಮೇಶ್ ಈಗ ಇನ್ನಷ್ಟು ಬ್ರಾಂದಿಯನ್ನು ಗ್ಲಾಸಿಗೆ ಸುರಿಸ ಜೊತೆಗೆ ಬಿಸಿಲೇರಿ ಲವಣದ ನೀರನ್ನು ಸೇರಿಸಿ ಕೈಗೆ ಕೊಟ್ಟ. ಒಂದು ಗುಟುಕು ಬಾಯಿಗೆ ಸುರಿದುಕೊಂಡಳು.

ಎದೆಯ ಹಿಂದೆ ಕರಕರನೆ ಇಳಿದುಹೋಯಿತು. ಬ್ರಾಂದಿ, ಬಿಸಿಲೇರಿ, ಕಾರ ಎಲ್ಲವೂ ಸೇರಿ ಮೈಯಲ್ಲಿ ಒಂದು ರೀತಿಯ ಬಿಸಿಯನ್ನು ಏರಿಸಿದುವು.

ರಮೇಶ್ ಹೆಸರಿನ ಈ ದಿನದ ಹೀರೋ ಮೆತ್ತಗೆ ಬ್ಯೂಲೀನಾಳನ್ನು ತನ್ನ ವಶಕ್ಕೆ ತೆಗೆದುಕೊಂಡು ಮತ್ತೊಮ್ಮೆ ಮಾದಕವಾದ ದೀರ್ಘಚುಂಬನ ನೀಡಿ, ಅಪ್ಪಿಗೆಯ ಜೊತೆ ಬಿಸಿ ಏರಿಸಿ ಉದ್ರೇಕಗೊಳಿಸಿ ಬ್ಯಾಗಿ ಟಾಪನ್ನು ತೆಗೆದು ಟಾಪ್‌ಲೆಸ್

ಮಾಡಿಬಿಟ್ಟ. ಟ್ವಿನ್‌ರೋಸ್ ಚಿಹ್ನೆಯ ಬ್ರಾಗಳು ಶೇ.೭೦ ಭಾಗದ ಎದೆಗಳನ್ನು ಮುಚ್ಚಿಕೊಂಡಿವೆ.

ಅದೊಂದು ಅದ್ಭುತ ಮೈಕಾಂತಿ ಅವಳ ದೇಹದಿಂದ ಚಿಮುತ್ತಿದೆ. ಮಂಗೋಲಾಯ್ಡ್ ಹೆಣ್ಣುಗಳು ಇಷ್ಟೊಂದು ರೂಪರಾಶಿಯರೆ? ಎಂದುಕೊಂಡ. ಬ್ಯೂಲೀನಾ ಮಾದಕವಾಗಿ ಹೆಣ್ಣಿಗಿರುವ ಸಹಜ ನಾಚಿಕೆಯನ್ನು ಸಣ್ಣಕಣ್ಣುಗಳಲ್ಲಿ ತುಂಬಿಕೊಂಡಿದ್ದಾಳೆ.

ಇಬ್ಬರೂ ಬೆಳಕು ಕತ್ತಲ ಮಧ್ಯೆ ಕರಗುತ್ತಿದ್ದಾರೆ.

ಮೊದಮೊದಲು ಪ್ರೀತಿ ಶುರುವಾದಾಗ, ಮಾತುಗಳು ಸಹಜವಾಗಿ ಹೊರ ಬೀಳುವುದಿಲ್ಲ. ಆದರೆ ಇಬ್ಬರೂ ಆ ಗಡಿ ದಾಟಿರುವುದರಿಂದ ಸಣ್ಣ ಪುಟ್ಟ ಪ್ರಶ್ನೆಗಳ ಜೊತೆ ಒಬ್ಬರಿಗೊಬ್ಬರು ಏಕವಚನದಲ್ಲಿ ಮಾದಕವಾದ ರೀತಿಯಲ್ಲಿ ಮಾತನಾಡಿಕೊಳ್ಳುತ್ತಿದ್ದಾರೆ.

"ನೀನು ನನ್ನನ್ನು ಮೊದಲು ನೋಡಿದಾಗ ಏನೆಂದುಕೊಂಡೆ?" ಕೇಳಿದ.

"ನನ್ನ ಶೀಲ ಹೋದರೂ ಚಿಂತೆಯಿಲ್ಲ, ನಿನ್ನ ಕೈಗಳಲ್ಲಿ ಕೂಸಾಗಬೇಕೆಂದುಕೊಂಡೆ." ಬ್ಯೂಲೀನಾ ಹೇಳಿದಳು.

ಹಾಗೆ ಎಷ್ಟೋ ಮಾತನಾಡಿದರು. ಆದರೆ ಆ ಮಾತುಗಳಿಗೆ ಅರ್ಥವಿಲ್ಲ.

"ಈ ರಾತ್ರಿ ನಮ್ಮಿಬ್ಬರ ಜೀವನದಲ್ಲಿ ಅತ್ಯಂತ ಶ್ರೇಷ್ಠ ರಾತ್ರಿಯಾಗಬೇಕು?"
"ಆಗಲಿ, ಹಾಗೆ ವರ್ತಿಸೋಣ." ಹೇಳಿದಳು.

ಇಬ್ಬರ ದೇಹಗಳು ಈಗ ಪೂರ್ಣ ನಗ್ನವಾಗಿದ್ದವು. ಅವಳ ತುಟಿಗಳು ಈಗಾಗಲೇ ಕೆಂಪಾಗಿ ದಳಗಳಂತೆ ಅರಳಿಕೊಂಡಿದ್ದವು.

ಜುಮ್ಮನೆ ತಲೆ ತಿರುಗಿ ಚಂಚಲಗೊಂಡಿರುವ ಬ್ಯೂಲೀನಾ ಕೂಡಾ ತನ್ನ ಹೃದಯದ ಒಳಹೊಕ್ಕಿ ಅನ್ವೇಷಿಸುತ್ತಿರುವ ಕೋರಿಕೆಯ ಜೊತೆಗೆ ಓಲಾಡುತ್ತಾ ರಾತ್ರಿಯನ್ನು ಸುಮಧುರವಾಗಿಸಿಕೊಳ್ಳುತ್ತಿದ್ದಾಳೆ.

ಅವನ ಬಿಸಿ ಅಪ್ಪುಗೆ ಅವಳನ್ನು ಒಮ್ಮೆಲೆ ನಿದ್ದೆಯಿಂದ ಎಚ್ಚರಿಸಿದಂತಾಗಿ ಅವಳ ಹೃದಯ ಜೋರಾಗಿ ಹೊಡೆದುಕೊಂಡಿತು. ನಂತರ ಮೈ ಕಂಪಿಸಿ ಹೊಕ್ಕಳು ತಣ್ಣಗಾಗತೊಡಗಿತು.

ಸ್ಪರ್ಶಕ್ಕೊಂದು ಅದ್ಭುತವಾದ ಶಕ್ತಿ ಇರುತ್ತದೆ. ಅದು ಒಂದು ಸಣ್ಣ ಅಣು

ಇನ್ನೊಂದನ್ನು ಸ್ಪರ್ಶಿಸಬಹುದು, ಸೂರ್ಯ ಚಂದ್ರನನ್ನು ಚಿಟ್ಟೆ ಪರಾಗವನ್ನು ನದಿ ಸಮುದ್ರವನ್ನು, ಹೂವಿನ ದಳಗಳನ್ನು ಮಂಜಿನ ಹನಿಗಳು ಸ್ಪರ್ಶಿಸಬಹುದು. ಹೀಗೆ ಹೆಣ್ಣು ಗಂಡನ್ನು.

ಈಗ ಅಣು ಅಣುಗಳಲ್ಲಿನ ವಿದ್ಯುತ್ ಒಡೆದುಕೊಂಡು ಚೇತೋಹಾರಿ ಬೆಳಕು ಹೊರಹೊಮ್ಮಿತು.



ಸಾಯಂಕಾಲ ಎಂದರೆ ಸರಿಯಾದ ಸಮಯ ಎಷ್ಟು? ಬೆಳಿಗ್ಗೆ, ಮಧ್ಯಾಹ್ನ, ಸಾಯಂಕಾಲ ಮತ್ತು ರಾತ್ರಿ ಇವೆಲ್ಲ ಸರಿಯಾಗಿ ಯಾವ ಯಾವ ಸಮಯಕ್ಕೆ ಪ್ರಾರಂಭವಾಗಿ ಯಾವ ಯಾವ ಸಮಯಕ್ಕೆ ಕೊನೆಗೊಳ್ಳುತ್ತವೆ ಎಂಬುದರ ಬಗ್ಗೆ ಸುಮಾರು ಹೊತ್ತು ಯೋಚಿಸಿದ ವಿನೋದ್ ಸಾಯಂಕಾಲಕ್ಕಿಂತ ಮೊದಲೇ ಯಾವಾಗಲೋ ಮನೆಬಿಟ್ಟು ಕಾಲುಗಳು ನಡೆದೋದ ಕಡೆಯೆಲ್ಲಾ ನಡೆದಾಡಿ, ಕಣ್ಣುಗಳು ಅಪೇಕ್ಷಿಸಿದ ಕಡೆಯೆಲ್ಲಾ ಓಡಾಡಿ, ಮನಸ್ಸು ಬಂದ ಕಡೆಯೆಲ್ಲಾ ಸುತ್ತಾಡಿ ಕೊನೆಗೆ ಸಾಯಂಕಾಲಕ್ಕೊಂದು ಸಮಯ ತಾನೇ ಗೊತ್ತುಪಡಿಸಿಕೊಂಡು ಆರು ಗಂಟೆಗೆ ಎರಡು ನಿಮಿಷ ಇರುವಾಗ ಕೈ ಗಡಿಯಾರ ನೋಡಿಕೊಂಡು ಶಾಲಿನಿ ಮನೆಗಿಂತ ಸುಮಾರು ನೂರು ಮೀಟರು ದೂರದಲ್ಲಿ ನಡೆಯುತ್ತಿದ್ದಾನೆ.

ಗೇಟ್ ತೆಗೆದುಕೊಂಡು ಒಳಗಡೆಗೆ ಹೆಜ್ಜೆಯಾಕಿದ ವಿನೋದ್‌ನ ಆಗಮನವನ್ನು ಗೇಟ್ 'ಕಿರ್ರ್' ಎಂದು ಶಬ್ದ ಮಾಡುವುದರ ಜೊತೆಗೆ ಮನೆಯ ಒಳಗಿರುವವರನ್ನು ಎಚ್ಚರಿಸಿತು.

ಬಾಗಿಲಲ್ಲೇ ಕಾಣಿಸಿಕೊಂಡ ಶಾಲಿನಿ ಒಂದು ಮಾದಕ ನಗು ಬೀರಿ ಮನೆಯೊಳಕ್ಕೆ ಆಹ್ವಾನಿಸಿದಳು. ವಿನೋದ್‌ನ ಉತ್ಸಾಹ ಇನ್ನಷ್ಟು ಇಮ್ಮಡಿಯಾಗಿ ಒಳಬಂದ. ಅಷ್ಟೇ...?

ತಲೆಯ ಮೇಲೆ ಯಾರೊ ಫಟೀರನೆ ಹೊಡೆದಂತಹ ಅನುಭವವಾಯಿತು. ಎದುರಿಗೆ ಒಬ್ಬ ದಡೂತಿ ಆಸಾಮಿ ಕುಳಿತಿದ್ದಾನೆ. ಸಣ್ಣ ಕ್ರಾಪು, ಉರಿಮೀಸೆ, ಒರಟಾದ ಕುದುರೆ ಮುಖದಂತಹ ಕಬ್ಬಿಣಮುಖ, ಒಟ್ಟಿನಲ್ಲಿ ಪೊಲೀಸ್ ವಿಭಾಗವೋ ಅಥವಾ ಜೈಲಿಗೆ ಸೇರಿದ ಪ್ರಾಣಿಯೋ ಇರಬೇಕು.

ವಿನೋದ್ ಯಾವುದೊ ದೊಡ್ಡ ಡ್ರ್ಯಾಗನ್ ಎದುರಿಗೆ ಪ್ರಾಣದ ಬಗ್ಗೆ ಆಸೆಬಿಟ್ಟು ನಡೆದು ಬರುವಂತೆ ನಡೆದು ಬಂದ.

"ಇವರು ಮಿ. ವಿನೋದ್ ಇಲ್ಲೇ ಪಕ್ಕದಲ್ಲಿದ್ದಾರೆ" ಶಾಲಿನಿ ಪರಿಚಯಿಸಿದಳು. ಮಿ. ಕುದುರೆಮುಖ ತುಸು ಅನುಮಾನದಿಂದಲೇ ಮೈಯನ್ನು ತುಸು ಸಡಿಲಿಸಿ ಎದ್ದೇಳದೆ ಕೈ ಚಾಚಿತು. ವಿನೋದ್ ಇನ್ನಷ್ಟು ಹತ್ತಿರ ಬಂದು ಕರಚಾಲನೆ ಮಾಡಿದ. ವಿನೋದ್ ಕೈಯನ್ನು ತುಸು ಜೋರಾಗಿ ಒತ್ತಿದ ಮಿ. ಕುದುರೆ ಮುಖ.

"ನಿಮಗೆ ವಿಲ್ ಪವರ್ ಐ ಮೀನ್, ಸಂಕಲ್ಪ ಬಹಳ ಕಮ್ಮಿ ಮಿಸ್ಟರ್. ಏನೇಳಿದೆ ನಿನ್ನ ಹೆಸರು..." ಎಂದ. ವಿನೋದ್ "ನನ್ನೆಸರು ಬಿಸಿರಟ್ಟೆ ಅಂತ. ಬಿ.ಎಸ್.ಎಫ್. ಅಂದರೆ ಗೊತ್ತೆ? ಈ ದೇಶದ ಗಡಿಯನ್ನು ಕಾಯುವ ಬಾರ್ಡರ್ ಸೆಕ್ಯೂರಿಟಿ ಫೋರ್ಸ್‌ನ ಎಕ್ಸ್ ಅಧಿಕಾರಿ, ಮೂವತ್ತೆರಡು ವರ್ಷಗಳ ಸೇವೆಯಲ್ಲಿ ಕಾಶ್ಮೀರದಿಂದ ಕಾನ್ಯಾಕುಮಾರಿ, ಕಟಕ್‌ನಿಂದ ಅಟಕ್ ವರೆಗೂ ನೋಡಿದ್ದೇನೆ.

"ಅಂಕಲ್ ನೀವು ಮಾತನಾಡ್ತಾ ಇರಿ, ನಾನು ಕಾಫಿ ಮಾಡುತ್ತೇನೆ" ಎಂದು ಶಾಲಿನಿ ಒಳಕ್ಕೋದಳು.

"ಈ ಕನ್ನಡದವರು ಅಂದರೆ ನನಗೆ ಸ್ವಲ್ಪವೂ ಹಿಡಿಸುವುದಿಲ್ಲ, ಕರ್ನಾಟಕ ಬಿಟ್ಟು ಹೊರಗೆ ಹೋಗುವುದೇ ಇಲ್ಲ, ಈ ದೇಶದ ಯಾವುದೇ ಮೂಲೆಗೋಗಿ ಕನ್ನಡ ಪುಸ್ತಕಗಳು, ಕನ್ನಡದ ಜನ ಬಿಟ್ಟು ಎಲ್ಲರೂ ಸಿಗುತ್ತಾರೆ. ಎಲ್ಲಾ ನೋಡಬೇಕು, ಎಲ್ಲಾ ಅನುಭವಿಸಬೇಕು" ಮತ್ತೆ,

"ಹೌದು, ನೀವು ಬ್ಯಾಚುಲರೋ ಅಥವಾ ಮ್ಯಾರೀಡೋ?"

"ಬ್ಯಾಚುಲರ್" ವಿನೋದ್ ಮೆಲ್ಲಗೆ ಹೇಳಿದ.

"ಕೈಯಲ್ಲಿ ಏನಾದರೂ ಕೆಲಸ ಇದೆಯೋ ಇಲ್ಲವೋ?" ಹೇಳಿದ.

"ಮತ್ತೆ ಮದುವೆ ಯಾಕಾಗಬಾರದು?"

"ಮದುವೆ ಆಗುವುದಾದರೆ ಆದಷ್ಟು ಬೇಗ ಮದುವೆಯಾಗಬೇಕು. ಮೂವತ್ತು ದಾಟಿದ ಮೇಲೆ ಮದುವೆ ಆಗುವುದೂ ಒಂದೇ ಸುಮ್ಮನೆ ಇರುವುದೂ ಒಂದೇ. ಇನ್ನೂ ಈ ಕಾಲದ ವಿದ್ಯಾವಂತರು ಮಾಡಿಕೊಂಡಂತೆ ಮೂವತ್ತೈದು ವರ್ಷಗಳಾದ ಮೇಲೆ ಮದುವೆಯಾದರೆ ಅದು ಮದುವೇನೆ ಅಲ್ಲ? ಆದರೆ ಮಕ್ಕಳು ಮಾತ್ರ ಒಂದು, ಇಲ್ಲ ಎರಡು, ನಮ್ಮ ದೇಶಕ್ಕೆ ಒಂದೇ ಜಾಸ್ತಿ" ಕೆಲವು ಕ್ಷಣಗಳು ಸುಮ್ಮನಿದ್ದ ಕುದುರೆಮುಖ ಮತ್ತೆ,

"ಈ ದೇಶಕ್ಕೆ ಏನಾಗುತ್ತೊ ಏನೋ? ಪಕ್ಕದ ಚೈನಾ ದೇಶದವರನ್ನಾದರೂ ನೋಡಿ ಕಲಿತುಕೊಳ್ಳಬಾರದೆ? ಪೃಥ್ವಿಯ ಶೇಕಡ ೧೫ರಷ್ಟು ಜನಸಂಖ್ಯೆ ನಮ್ಮಲ್ಲೇ

ಇದೆ. ನೀನು ಮಿಲಿಟರಿಗ್ಯಾಕೆ ಸೇರಬಾರದಿತ್ತು?" ವಿನೋದ್ ಸುಮ್ಮನೆ ಪಿಳಿಪಿಳಿ ನೋಡಿ "ಈಗ ನನ್ನನ್ನ ಯಾರೂ ಸೇರಿಸಿಕೊಳ್ಳುವುದಿಲ್ಲ." ಹೇಳಿದ.

"ಹೊರಗಿನ ಪ್ರಪಂಚ ನೋಡಬೇಕು, ಅದಕ್ಕೆ ನಮ್ಮಂತಹ ದಿಪಾರ್ಟ್‌ಮೆಂಟ್‌ಗಳಲ್ಲಿ ಕೆಲಸ ಮಾಡಬೇಕು. ಅರುಣಾಚಲ ಪ್ರದೇಶದ ಕಡಿದಾದ ಬೆಟ್ಟಗಳು... ಹಿಮಾಲಯದ ಕರಾಕೋರಂ ಬರ್ಫ್ ಪರ್ವತಗಳು... ರಾಜಸ್ಥಾನದ ಮರಳುಗಾಡುಗಳು..." ಹೀಗೆ ಒಂದೇ ಸಮನೆ ಬೋಲ್ಟ್ ಬಿಚ್ಚಿಕೊಂಡವನಂತೆ ಹೇಳುತ್ತಾ ಹೋಗುತ್ತಿದ್ದ. ವಿನೋದ್ ಕೂಡ ಅಷ್ಟೇ ಆಶ್ಚರ್ಯವಾಗಿ ಶ್ರದ್ಧೆಯಿಟ್ಟು ಕೇಳುವವನಂತೆ ನಟಿಸುತ್ತಿದ್ದರೂ, ಒಳಗೊಳಗೇ ತನ್ನ ದುರಾದೃಷ್ಟಕ್ಕೆ ತಾನೇ ಛೀಮಾರಿ ಹಾಕಿಕೊಳ್ಳುತ್ತಿದ್ದ.

ಶಾಲಿನಿ ಮಾತ್ರ ಎಲ್ಲವನ್ನೂ ಕೇಳಿಸಿಕೊಳ್ಳುತ್ತಾ ಒಳಗೊಳಗೆ ನಗುತ್ತಿದ್ದಳು. ವಿನೋದ್‌ಗೆ ಕ್ಷಣಗಳು ಗಂಟೆಗಳಾದಂತೆ ತೋರಿದರೂ, ಉಸಿರುಬಿಡದೆ ತಲೆ ಅಲ್ಲಾಡಿಸುತ್ತಾ ಕುಳಿತಿದ್ದಾನೆ.

ಶಾಲಿನಿ ಕಾಫಿ ಜೊತೆಗೆ ಒಂದಷ್ಟು ಬಿಸ್ಕಟ್‌ಗಳನ್ನು ತಟ್ಟೆಯಲ್ಲಿ ತಂದು ಎದುರಿಗೆ ಇಟ್ಟಳು. ಒಂದು ಕಪ್ಪನ್ನು ವಿನೋದ್‌ಗೆ ನೀಡಿ ಇನ್ನೊಂದನ್ನು ತಾನು ತೆಗೆದುಕೊಂಡ ಬಿಸಿರಟ್ಟೆ, ಶಾಲಿನಿಯನ್ನು ಕುಳಿತುಕೊಳ್ಳುವಂತೆ ಹೇಳಿದ.

ಶಾಲಿನಿ ಒಂದು ನಿಮಿಷ ಎಂದೇಳಿ ಒಳಕ್ಕೋಡಿದಳು.

ಬಿಸಿರಟ್ಟೆ ಮತ್ತು ಶುರುವಾದ ಬಿಸಿ ಕಾಫಿ ಕುಡಿದ ವಿನೋದ್‌ಗೆ ಮೈಯೆಲ್ಲಾ ಬಿಸಿ ಏರಿದಂತಾಯಿತು.

"ರಾಮ ರಾಮ" ಈ ಗ್ರಹಚಾರದಿಂದ ಬಿಡಿಸಪ್ಪ ದೇವ್ರೆ ಎಂದು ಒಳಗೊಳಗೆ ದೇವರಿಗೆ ಅರಿಕೆ ಹೊತ್ತುಕೊಂಡ ವಿನೋದ್ ಒಂದಷ್ಟು ಕಾಫಿ ಕುಡಿಯುವುದರಲ್ಲಿ ಮಗ್ನನಾದಂತೆ ನಟಿಸಿ ಬಿಸಿರಟ್ಟೆಯ ಮಾತುಗಳಲ್ಲಿ ಉದಾಸೀನತೆಯನ್ನು ತೋರಿಸತೊಡಗಿದ. ಅಷ್ಟರಲ್ಲಿ ಶಾಲಿನಿ ಎದುರಿಗೆ ಬಂದು ಕುಳಿತುಕೊಂಡಳು. ಬಿಸಿರಟ್ಟೆ ಮಾತ್ರ ನಿರಾಳವಾಗಿ ಹೇಳುತ್ತಾ ಹೋಗುತ್ತಿದ್ದ.

ಶಾಲಿನಿಯನ್ನು ಅರೆಕಣ್ಣುಗಳಲ್ಲಿ ವಿನೋದ್ ಗಮನಿಸಿದಾಗ ಶಾಲಿನಿ ಒಳಗೊಳಗೇ ನಗುತ್ತಿದ್ದಳು. ಕಾಫಿ ಮುಗಿಸಿ ಕಪ್ಪನ್ನು ತಟ್ಟೆಯಲ್ಲಿಟ್ಟಳು. "ಕ್ಷಮಿಸಿ ಸಾರ್. ನನಗೆ ಸ್ವಲ್ಪ ತುರ್ತು ಕೆಲಸವಿದೆ" ಎಂದೇಳಿ ಎದ್ದುನಿಂತ.

"ಓ... ಹೋಗಿ ಹೋಗಿ, ಈಗಿನ ಕೆಲಸ ಈಗಲೇ ಮಾಡಬೇಕು, ಪ್ರತಿಯೊಂದು ಕೆಲಸವನ್ನೂ ಆಯಾ ಸಮಯದಲ್ಲಿ ಮಾಡಿ ಮುಗಿಸಬೇಕು" ಬಿಸಿರಟ್ಟೆ ಹೇಳಿದನು.

ವಿನೋದ್ ಎದ್ದು ಹೊರಗಡೆಗೆ ನಡೆದ. ಅಷ್ಟರಲ್ಲಿ ಶಾಲಿನಿ ಒಂದು ಕ್ಯಾಸೆಟ್ ಕೊಟ್ಟು "ಇದನ್ನು ಬೇಕೆಂದರಲ್ಲ ತೆಗೆದುಕೊಳ್ಳಿ" ಎಂದಳು.

"ಕ್ಯಾಸೆಟ್" ಅವನ ಮಾತನ್ನು ತುಂಡರಿಸಿ "ಅದೇ ನೀವು ನಿನ್ನೆ ಕೇಳಿದರಲ್ಲ ಹಾಡುಗಳನ್ನು ಕೇಳಿ ನಾಡಿದ್ದು ತಂದು ಕೊಡಿ" ಎಂದಳು.

ಏನೂ ಅರ್ಥವಾಗದ ವಿನೋದ್ ಕ್ಯಾಸೆಟ್ ತೆಗೆದುಕೊಂಡು ಶಾಲಿನಿಯನ್ನು ಪ್ರಶ್ನಾರ್ಥಕವಾಗಿ ನೋಡುತ್ತಾ 'ಕಿರ್ರ್' ಬಾಗಿಲು ತೆಗೆದುಕೊಂಡು ಹೊರಕ್ಕೆ ನಡೆದ.



ದೀಪ ಸೂರ್ಯನ ಒಂದಂಶ

ಪ್ರೀತಿ ಮನುಷ್ಯನ ಇನ್ನೊಂದಂಶ

ಪವನ್ ಫೋನ್ ಎದುರಿಗೆ ಕುಳಿತು, ಕೊನೆಯ ನಿಮಿಷದ ಕ್ಷಣಗಳನ್ನು ಕಳೆಯುತ್ತಾ ಹೋಗುತ್ತಿದ್ದಾನೆ. ಗಡಿಯಾರದ ದೊಡ್ಡ ಮುಳ್ಳು ಟಿಕ ಟಿಕ್ ಎನ್ನುತ್ತಾ ಕಾಲವೆನ್ನುವ ಬಿಂದುವಿನ ಸುತ್ತ ಗಸ್ತಿ ಹೊಡೆಯುತ್ತಿದೆ. ಮುಳ್ಳು ೩,೨,೧ ಕ್ಷಣಗಳನ್ನು ಹತ್ತಿರದಲ್ಲಿರುವಾಗ ಫೋನ್ ಧ್ವನಿಸಿತು.

ಪವನ್ ರಿಸೀವರ್ ಕೈಗೆ ತೆಗೆದುಕೊಂಡು

"ಹಲೋ" ಎನ್ನುವಷ್ಟರಲ್ಲಿ "ಗುಡ್ ಮಾರ್ನಿಂಗ್ ನೀವೆಲ್ಲಿ ಮರೆತುಬಿಟ್ಟಿದ್ದೀರೋ ಎನಿಸಿತು"

"ಒಬ್ಬರೇ ಇದ್ದೀರಾ?"

ಆ ಮಾತು ಹೃದಯ ತುಟಿಗಳಲ್ಲಿ ತುಡಿಯುವಂತಿತ್ತು.

"ಹೌದು. ಹೇಳಿದ."

"ಹೇಗಿದ್ದೀರಿ"

"ಕೆಟ್ಟದಾಗಿ ಬಹಳ ಕೆಟ್ಟದಾಗಿ"

"ನೀವೊಂದು ಕೆಲಸ ಮಾಡಿದರೆ ಹತ್ತಿರವಾಗುತ್ತೇನೆ."

"ಹೇಗೆ?"

"ನಿನ್ನ ಪ್ರಶ್ನೆಗೆ ಉತ್ತರಿಸಬೇಕೆ?"

"ಇಲ್ಲ"

"ಮತ್ತೆ?"

"ಈ ಕಡೆ ತಂತಿಯಿಂದ ನನ್ನನ್ನ ಸುತ್ತಿಕೊಳ್ಳುತ್ತೇನೆ. ಆ ಕಡೆಯಿಂದ ತಂತಿಯನ್ನು ಎಳೆಯುತ್ತಾ ಹೋಗು."

"ತಮಾಷೆ ಸಾಕು"

"ನನ್ನನ್ನು ಹತ್ತಿರದಿಂದ ನೋಡಿದ ಮೇಲೆ ನಿನಗೆ ಇಷ್ಟವಾಗದೆ ಹೋಗಬಹುದು. ಚುಂಬಿಸುವ ತುಟಿಗಳು ನನಗೆ ಇಲ್ಲದಿರಬಹುದು."

"ಅಂದರೆ ನೀನು ನನ್ನನ್ನು ಪ್ರೀತಿಸುತ್ತಿದ್ದೀಯ ತಾನೆ ಎನ್ನುತ್ತೀರ"

"ಗೊತ್ತಿಲ್ಲ"

"ಆದರೆ ನೀನು ಮಾತ್ರ ಹ್ಯಾಂಡ್‌ಸಮ್ ಆಗಿದ್ದೀಯ ಎನ್ನುವುದು ಮಾತ್ರ ಗೊತ್ತು." ಪವನ್ ಆ ಮಾತಿಗೆ ಒಂದಷ್ಟು ಪ್ರತಿಷ್ಠೆ ತುಂಬಿಕೊಂಡವನಂತೆ "ನನ್ನ ರೂಪವೇ ಹಾಗೆ" ಎಂದುಕೊಂಡ ಮನಸ್ಸಿನಲ್ಲೆ.

"ಹ್ಯಾಂಡ್‌ಸಮ್ ಎಂದ ತಕ್ಷಣ ಮುಖವನ್ನು ಕನ್ನಡಿಯಲ್ಲಿ ನೋಡಿಕೊಳ್ಳಬೇಕೆಂದು ಆಸೆಯಾಯಿತೆ?" ಕೇಳಿದಳು. ಪವನ್ ಒಮ್ಮೆ ಹಿತವಾಗಿ ನಕ್ಕ.

"ನನಗೊಂದೇ ಗೊಂದಲವಾಗಿದೆ"

"ಯಾತಕ್ಕಾಗಿ?"

"ನೀನು ನನ್ನಿಂದೆ ಬಿದ್ದಿರುವುದರ ಬಗ್ಗೆ"

"ನಾನಾಗಲೇ ಹೇಳಿದ್ದೇನೆ, ನಿಮ್ಮಿಂದೆ ಬಿದ್ದಿರುವುದು ಯಾತಕ್ಕೆಂದು ನನಗೇಯೇ ಗೊತ್ತಿಲ್ಲ."

"ನಿನಗೆ ನನ್ನ ಬಗ್ಗೆ ಒಲವು ಇಲ್ಲದಿದ್ದಲ್ಲಿ ಹೇಳಿಬಿಡು, ಮತ್ತೆ ಯಾವಾಗಲೂ ಫೋನ್ ಮಾಡುವುದಿಲ್ಲ."

"ನೀನು ಒಳ್ಳೆ ಸೆಂಟಿಮೆಂಟಲ್ ಕೂಡ ಸೇರಿಸಿಕೊಳ್ಳುತ್ತೀಯಾ?"

"ಭಾರತೀಯ ಹೆಣ್ಣೆಂದರೆ ಇಷ್ಟೂ ಸೆಂಟಿಮೆಂಟಲ್ ಇಲ್ಲದಿರುತ್ತದೆಯೆ?"

"ಇರಬೇಕು. ಆದರೆ ಸೆಂಟಿಮೆಂಟಲ್ ಜೊತೆ ಕೋಪವೂ ಸೇರಿಸಿಕೊಳ್ಳಬೇಡ"

"ಆಯಿತು." ಇಬ್ಬರೂ ಹಿತವಾಗಿ ನಕ್ಕರು

"ಒಂದು ಸಣ್ಣ ಪ್ರಶ್ನೆ"

"ಪ್ರಶ್ನೆ" ಈ ಕಡೆಯಿಂದ ಹೌಹಾರಿದ ಸ್ವರ "ಪ್ರಶ್ನೆ ಮಾತ್ರ ಕೇಳುತ್ತಲೆ

ಬರುತ್ತಿದ್ದೀಯ, ಆದರೆ"

"ಆದರೆ? ಏನು ಲಾಭ ಎನ್ನುತ್ತೀಯ? ಒಂದು ದಿನ ಸಿಗುತ್ತದೆ."

"ತುಟಿಗಳಿಗೂ ಮತ್ತು ಮಿಕ್ಕ ಅಂಗಗಳಿಗೂ ಇರುವ ವ್ಯತ್ಯಾಸವೇನು?"

"ತುಟಿ ನೇರವಾಗಿ ಪ್ರದರ್ಶನಗೊಂಡಿರುವ ಒಂದು ಸೆಕ್ಸುಯಲ್ ಅಂಗ."

"ಅದು ನಾನು ಕೇಳುವ ವ್ಯತ್ಯಾಸವಲ್ಲ" ಪವನ್‌ನ ಮಿದುಳು ಒಮ್ಮೆ ಓಡಿತು, ಅಷ್ಟೆ. "ತುಟಿಗಳಿಗೆ ರಂಧ್ರವಿರುವುದಿಲ್ಲ. ಅಂದರೆ ಬೆವರು ಹೊಮ್ಮುವುದಿಲ್ಲ" ಹೇಳಿದ.

"ಗುಡ್"

"ಒಂದು ಲೆಕ್ಕ ಹೇಳುತ್ತೇನೆ, ಆ ಲೆಕ್ಕವನ್ನು ನೀನು ಬಿಡಿಸಿಬಿಟ್ಟರೆ ನನ್ನ ಹೆಸರಿನ್ನು ಹೆಚ್ಚೂ ಕಮ್ಮಿ ಪೂರ್ತಿ ಕೊಡುತ್ತೇನೆ"

"ಆಮೇಲೆ ನೀವು ಹಿಡಿದಿರುವ ತಂತಿಯನ್ನು ಅಲ್ಲೇ ಬಿಟ್ಟು ನೇರವಾಗಿ ನನ್ನ ಹತ್ತಿರ ಬರಬಹುದು" ಈ ಪದ ಪವನ್‌ಗೆ ಎಷ್ಟೋ ಹತ್ತಿರವಾದಂತಿತ್ತು. ಬರಿ ಹೆಸರೇಳಿಬಿಟ್ಟರೆ ನೀನಿರುವ ಸ್ಥಳ ನನಗೇಗೆ ಗೊತ್ತಾಗಬೇಕು, ನಿನ್ನ ಹೆಸರಿರುವ ಹುಡುಗಿಯರು ಬೆಂಗಳೂರಿನಲ್ಲಿ ಸಾವಿರಾರಿರಬಹುದು. ಒಳಗೆಯೆ ನುಂಗಿಕೊಂಡ ಪವನ್ ಹುಡುಗಿಯರು ಸಾವಿರಾರಿದ್ದರೂ. ನಿನಗೊಂದು ಪ್ರತ್ಯೇಕ ಸ್ಟೇಟಸ್ ಇದೆ ಎಂದುಕೊಂಡು,

"ಇದರಲ್ಲೇನೂ ಗೋಲ್‌ಮಾಲ್ ನಡೆಯಬಾರದು."

"ಖಂಡಿತ ಇಲ್ಲ, ನನ್ನ ಮೇಲೆ ಭರವಸೆ ಇಡು."

"ಇಟ್ಟಿದ್ದೇನೆ. ಬರೆದುಕೊಳ್ಳಿ... ಒಬ್ಬ ಶ್ರೀಮಂತನಿಗೆ ೮೧ ಹಸುಗಳಿದ್ದವು, ಅವು ೧ ರಿಂದ ೮೧ ಲೀಟರ್ ಹಾಲು ಕೊಡುವ ಹಸುಗಳಾಗಿದ್ದು, ಅವನಿಗೆ ೯ ಜನ ಮಕ್ಕಳೂ ಸಹ ಇದ್ದರು. ಆ ಶ್ರೀಮಂತ ಸಾಯುವಾಗ ತನ್ನೆಲ್ಲಾ ಮಕ್ಕಳನ್ನೂ ಕರೆದು ೮೧ ಹಸುಗಳನ್ನು ಸಮವಾಗಿ ಹಂಚಿಕೊಳ್ಳುವುದಲ್ಲದೆ ಹಾಲು ಕೂಡ ಸಮವಾಗಿ ಇರುವಂತೆ ನೋಡಿಕೊಳ್ಳಿ ಎಂದೇಳಿ ಸಾವನ್ನಪ್ಪುತ್ತಾನೆ.

ಈ ಪ್ರಶ್ನೆ ಕೇಳುತ್ತಾ ಹೋದಂತೆ ಅವನಿಗೆ ಎಲ್ಲೋ ಯಾರೋ ಕೆಣಕಿದಂತಾಯಿತು. ಮಿಸ್ ರುಚಿಯನ್ನು ಸಂದರ್ಶನದಲ್ಲಿ ಕೇಳಿದ ಪ್ರಶ್ನೆಯನ್ನು ಜ್ಞಾಪಿಸಿಕೊಳ್ಳುತ್ತಾನೆ...

"ಹಾಗಾದರೆ ಒಬ್ಬೊಬ್ಬರಿಗೆ ಎಷ್ಟೆಷ್ಟು ಲೀಟರ್ ಹಾಲು ಸಿಗುತ್ತದೆ?" ಅವನ ತಲೆ ಒಮ್ಮೆಲೆ ಕ್ಯಾಲ್‌ಕ್ಯುಲೇಟರ್‌ನಂತೆ ಕೆಲಸ ಮಾಡುತ್ತಾ ಗಿರ್ರನೆ ಸುತ್ತುಕೊಂಡಿತು. ಅಷ್ಟರಲ್ಲಿ

ಬಾಗಿಲು ತಳ್ಳಿಕೊಂಡು ಒಳಬಂದ ರುಚಿ, ಪವನ್‌ನ ರೂಪ ನೋಡಿ 'ಕ್ಷಮಿಸಿ' ಎಂದವಳೇ ಒಂದು ಫೈಲ್ ತೆಗೆದುಕೊಂಡು ಹಿಂದಕ್ಕೆ ಬಂದಳು. ಬಾಗಿಲು ನಿಧಾನವಾಗಿ ಮುಚ್ಚಿಕೊಂಡಿತು.

"ಸರಿಯಾಗಿ 20 ನಿಮಿಷ ಸಮಯ ಕೊಡುತ್ತೇನೆ. ಬೇಕಾದರೆ ಒಂದು ಹಾಸ್ಯ ಕೂಡ ಕೇಳಿ, ಈ ಹಾಸ್ಯದ ಸಮಯ ೨೦ ನಿಮಿಷಗಳಿಂದ ಹೊರಕ್ಕಿರಲಿ"

"ನಾನೊಮ್ಮೆ ಸಣ್ಣವಳಿದ್ದಾಗ ರಾಷ್ಟ್ರೀಯ ಹೆದ್ದಾರಿಯಲ್ಲಿ ನಡೆಯುತ್ತಾ ಹೋಗುತ್ತಿದ್ದೆ. ಎರಡು ಕಡೆ ಉದ್ದುದ್ದವಾದ ಮರಗಳು. ಒಂದು ಕೋತಿ ರಸ್ತೆಯ ಎಡಗಡೆ ಮರದಿಂದ ಬಲಗಡೆ ಇರುವ ಮರಕ್ಕೆ ಜಿಗಿಯಿತು. ಮತ್ತೆ ಬಲಗಡೆ ಮರಕ್ಕೆ ತಲುಪುವುದಿಲ್ಲವೆಂದು ತಿಳಿದ ಮೇಲೆ, ಮತ್ತೆ ಎಡಗಡೆ ಮರಕ್ಕೆ ವಾಪಸ್ ಹೋಗಿಬಿಟ್ಟಿತು". ಪವನ್ ವಿದ್ಯುತ್ ಶಾಕ್ ಹೊಡಿಸಿಕೊಂಡವನಂತೆ ನಗುತ್ತಿದ್ದ. ಫೋನ್ ಕಟ್ಟಾಯಿತು.

೯ ಮಕ್ಕಳು, ೮೧ ಹಸುಗಳು.

೯x೯=೮೧, ಇನ್ನು ಹಾಲು ೧ ರಿಂದ ೮೧ ರವರಿವಿಗೂ ಜೋಡಿಸಿದ ೩೩೨೧ ಬಂತು ೩೩೨೧ನ್ನು ೯ ರಲ್ಲಿ ಭಾಗಿಸಿದ. ೩೬೯ ಬಂತು. ಅಂದರೆ ಒಬ್ಬೊಬ್ಬರಿಗೆ ೯ ಹಸುಗಳು ಜೊತೆಗೆ ೩೬೯ ಲೀಟರ್ ಹಾಲು ಸಿಗುತ್ತದೆ.

ಆದರೆ ದೊಡ್ಡ ಪ್ರಶ್ನೆ ಇನ್ನೂ ಉಳಿದಿದೆ. ೧ ರಿಂದ ೮೧ ಲೀಟರ್ ಹಾಲು ಕರೆಯುವ ಹಸುಗಳಲ್ಲಿ ೯ ಜನಕ್ಕೆ ೯ ಹಸುಗಳು. ಆ ೯ ಹಸುಗಳಲ್ಲಿ ಒಬ್ಬೊಬ್ಬರಿಗೆ ಎಷ್ಟೆಷ್ಟು ಲೀಟರ್ ಕರೆಯುವ ಹಸುಗಳಾಗಬೇಕು? ಮತ್ತಷ್ಟು ಲೆಕ್ಕಾಚಾರ. ಆದರೆ ಅವನ ಯೋಚನೆ ೨೦ ನಿಮಿಷಗಳಲ್ಲಿ ಕೊನೆಗೊಳ್ಳುವಂತೆ ಕಾಣಲಿಲ್ಲ.

೯x೯=೮೧ ಮನೆಗಳು ಮಾಡಿದ. ೮೧ ಮನೆಗಳಲ್ಲೂ ೮೧ ಸಂಖ್ಯೆಗಳನ್ನು ತುಂಬುತ್ತಾ ಹೋದ. ಎಲ್ಲಾ ಕಡೆಯಿಂದಲು ೩೬೯ ಬರುವಂತೆ ಜೋಡಿಸಿ ನೋಡಿದ. ಆದರೆ ಲೆಕ್ಕ ಬರಲಿಲ್ಲ. ತಲೆ ಕ್ಯಾಲ್‌ಕ್ಯುಲೇಟರ್ ಆದರೆ ಮಾತ್ರ ಸಾಲದು, ಒಂದಷ್ಟು ಕಂಪ್ಯೂಟರ್ ಕೂಡ ಆಗಬೇಕೆಂದುಕೊಂಡ. ಕೈ ಗಡಿಯಾರ, ಗೋಡೆ ಗಡಿಯಾರ, ಎರಡನ್ನೂ ನೋಡಿದ. ಇನ್ನು ಕೇವಲ ೧೦ ನಿಮಿಷ ೨೭ ಸೆಕೆಂಡುಗಳು ಮಾತ್ರ ಉಳಿದಿದೆ.

ಫೋನ್ ರಿಸೀವರ್ ತೆಗೆದುಕೊಂಡು ಗೊತ್ತಿರುವ ಬ್ರೈನ್‌ಬ್ಯಾಂಕ್‌ಗೆ ಫೋನ್ ಮಾಡಿದ, ಅಷ್ಟೆ ಇನ್ನು ೫ ನಿಮಿಷ ೧೦ ಸೆಕೆಂಡುಗಳಿರುವಾಗಲೇ ಉತ್ತರ ಅವನ ಮುಂದೆ ಬಿದ್ದಿತ್ತು.

| | | | | | | | | |
|---|---|---|---|---|---|---|---|---|
| 51 | 46 | 53 | 6 | 1 | 8 | 69 | 64 | 71 |
| 52 | 50 | 48 | 7 | 5 | 3 | 70 | 68 | 66 |
| 47 | 54 | 43 | 2 | 9 | 4 | 65 | 72 | 67 |
| 60 | 55 | 62 | 42 | 37 | 44 | 24 | 19 | 26 |
| 61 | 59 | 57 | 43 | 41 | 39 | 25 | 23 | 21 |
| 56 | 63 | 58 | 38 | 45 | 40 | 20 | 27 | 22 |
| 15 | 10 | 17 | 78 | 73 | 80 | 33 | 28 | 35 |
| 16 | 14 | 12 | 79 | 77 | 75 | 34 | 32 | 30 |
| 11 | 18 | 13 | 74 | 81 | 76 | 29 | 36 | 31 |

ಮೂರು ನಾಲ್ಕು ತಿಂಗಳು ಮಗು ತನಗೆ ಮೊದಲು ಸಿಕ್ಕಿದ ಬೊಂಬೆಯ ಜೊತೆ ಪ್ರಪಂಚವನ್ನೆಲ್ಲಾ ಮರೆತು ಆಡಿಕೊಳ್ಳುತ್ತಿರುವಂತೆ ಪವನ್ ಆ ಚೌಕಗಳಲ್ಲಿರುವ ಸಂಖ್ಯೆಗಳ ಜೊತೆ ಆಡಿಕೊಳ್ಳುತ್ತಿದ್ದಾನೆ. ಹೇಗೆ ಕೂಡಿದರು ೩೬೯ ಬರುತ್ತದೆ.

ಪಾರಿವಾಳ ಒಂದು ಆಕಾಶದಲ್ಲಿ ತೇಲಾಡಿದಂತೆ ಪೂರ್ಣ ರಿಲ್ಯಾಕ್ಸ್ ಆಗಿ, ಗಂಟೆ ಬಾರಿಸಿ ಕಾಫಿ ತರುವಂತೆ ಹೇಳಿದ. ಫೋನ್ ಮೊಳಗಿತು. ಗಡಿಯಾರ ನೋಡುತ್ತ ರಿಸೀವರ್ ತೆಗೆದುಕೊಂಡು "ಹಲೋ ಹಲೋ" ಎಂದ.

"ಉತ್ತರ ಬಿಡಿಸಿ ಐದು ನಿಮಿಷಗಳಾಯಿತು."

"ಐದು ನಿಮಿಷಗಳಾಯಿತೆ?" ಆ ಕಡೆಯ ಸ್ವರ ಒಮ್ಮೆಲೆ ಸೆಳೆತಗೊಂಡಿತು.

"ಹೌದು ಐದು ನಿಮಿಷಗಳಾಯಿತು."

ಭಾಣಭಟ್ಟ, ಭಾಸ್ಕರ, ರಾಮಾನುಜಂ ಹೆಸರುಗಳು ಅವಳಿಗೆ ಜ್ಞಾಪಕಕ್ಕೆ ಬಂದವು.

"ಅಂದರೆ ನೀವ್ಯಾರ ಸಹಾಯವು ತೆಗೆದುಕೊಳ್ಳಲಿಲ್ಲವೆ?"

"ಸಹಾಯ ತೆಗೆದುಕೊಂಡಿದ್ದೇನೆ."

"ಯಾರ ಸಹಾಯ?"

"ಕಂಪ್ಯೂಟರ್ ಸಹಾಯ"

"ಕಂಪ್ಯೂಟರ್" ಹಲ್ಲು ಕಡಿದುಕೊಂಡಳು.

"ನೀವು ಯಾರ ಸಹಾಯವನ್ನೂ ತೆಗೆದುಕೊಳ್ಳಬೇಡಿ ಎಂದು ಹೇಳಲಿಲ್ಲವಲ್ಲ"

"ಹೌದು ನೀವೇ ಗೆದ್ದಿರಿ. ಶುಭಾಶಯಗಳು"

"ಸುಸ್ವಾಗತ, ಏನೂ ನಿಬಂಧನೆಗಳನ್ನು ಇಡದಿದ್ದಕ್ಕೆ"

"ನನ್ನ ಹೆಸರು ಕನ್ನಡದಲ್ಲಿ ಮೂರಕ್ಷರಗಳು ಬಂದರೆ ಇಂಗ್ಲಿಷಿನಲ್ಲಿ ಆರಕ್ಷರಗಳು ಬರುತ್ತವೆ. ಅಷ್ಟೇ ಅಲ್ಲ, ಇಂಗ್ಲಿಷಿನಲ್ಲಿರುವ ಮಧ್ಯದ ಮೂರು ಅಕ್ಷರಗಳಲ್ಲಿ ಬೆಂಗಳೂರಿನಲ್ಲಿರುವ ಒಂದು ದೊಡ್ಡ ಕಾರ್ಖಾನೆ ಕೂಡ ಸೇರಿದೆ. ಇದೇ ಸಮಯ, ಇದೇ ದಿನ, ಗುಡ್‌ಬೈಯ..."

ತುಸುವೆ ಅಜಾಗರೂಕತೆಯಿಂದ ತನ್ನ ಹೆಸರಿನ ಕ್ಲೂ ಕೊಡಬೇಕಾಯಿತಲ್ಲ. ಬಾರಿ ಬುದ್ಧಿವಂತ ನನ್ನ ಹೆಸರನ್ನು, ನನ್ನ ನೆಲೆಯನ್ನೂ ಗುರುತಿಸಿಬಿಡುತ್ತಾನೆ. ರಿಸೀವರನ್ನೊಮ್ಮೆ ದಿಟ್ಟಿಸಿ ನೋಡಿ ಕ್ರೆಡಲ್ ಮೇಲೆ ಇಟ್ಟುಬಿಟ್ಟಳು.

ಪವನ್‌ಗೆ ಈಗ ಎಲ್ಲಿಲ್ಲದ ಸಿಟ್ಟು ಬಂದಿತ್ತು. ಹೆಸರನ್ನು ಹೇಳುತ್ತೇನೆ ಎಂದೇಳಿ ಮತ್ತೆ ಅದಕ್ಕೊಂದು ಲೆಕ್ಕ ಕೊಟ್ಟಿದ್ದಕ್ಕೆ. ಲೆಕ್ಕ... ಲೆಕ್ಕ... ಲೆಕ್ಕ...? ತಾನು ಓದುತ್ತಿರುವಾಗಲು ಇಷ್ಟೊಂದು ತಲೆ ಕೆಡಿಸಿಕೊಂಡಿರಲಿಲ್ಲ. ಪವನ್ ಮತ್ತೊಮ್ಮೆ ಕನ್ನಡ ಮತ್ತು ಇಂಗ್ಲಿಷ್ ಅಕ್ಷರಗಳಲ್ಲಿ ಬೆಂಗಳೂರಿನಲ್ಲಿರುವ ಹೆಸರುಗಳನ್ನೆಲ್ಲಾ ಸೇರಿಸುತ್ತಾ ಹೋಗುತ್ತಿದ್ದಾನೆ. ಕಮಲ KAMALA ರಾಗಿಣಿ RAGINI ವಿಮಲ VIMALA ರಮಲ RAMALA ಕಾಂತಿ KANTHI ಗೀತಾ GEETHA ಭವನಾ BAVANA ಮೊನಿಕ MONICA ಶ್ವೇತಾ SWETHA ನಯನ NAYANA ಚಂಪಾ CHAMPA ಕಾವ್ಯ KAVYA ದಿವ್ಯ DIVYA ರಸಿಕ RASIKA ಶೀಲಾ SHEELA ಕಾಂಚಾ KANCHA ಸೀತಾ SEETHA ರಂಭಾ RAMBHA ಮೇನಕ MENAKA ದೀಪಾ DEEPA ಆರತಿ ARATHI ಕಾವೇರಿ KAVERI ಪದ್ಮಾ PADMA ಭಾಗ್ಯ BHAGYA ದೇವಿಕ DEVIKA ...ಹೀಗೆ

ನೂರಾರು ಹೆಸರುಗಳು ಕಾಗದದ ಮೇಲೆ ಹರಡಿಕೊಳ್ಳುತ್ತಾ ಹೋಗುತ್ತಿವೆ. ಆದರೆ ಇದ್ದಕ್ಕಿದ್ದಂತೆ ಪವನ್ ಕೈಯಲ್ಲಿರುವ ಪೆನ್ ಹಾಗೆ ನಿಂತುಬಿಟ್ಟಿತು. ಬೆಂಗಳೂರಿನಲ್ಲಿ ಒಂದೇ ಹೆಸರಿರುವ ನೂರಾರು ಹೆಣ್ಣುಗಳಿರಬಹುದು, ಬರೀ ಹೆಸರನ್ನು ತಿಳಿದುಕೊಂಡು ಹಿಡಿಯುವುದಾದರು ಹೇಗೆ?

ಇನ್ನೇನಾದರೂ ಜಾಲ ಬೀಸಲೇಬೇಕು. ಹಾಗೇನಾದರೂ ಕುಟಿಲದಿಂದ

ಅವಳಿರುವ ಸ್ಥಳ ತಲುಪಿದರೆ ಕಂಡಿತ ನನ್ನನ್ನು ಮೆಚ್ಚಿಕೊಳ್ಳಲಾರಳು. ಮತ್ತೆ ಈ ಹೆಸರುಗಳ ಮುಖಾಂತರ ಸಾಧಿಸುವುದೇನೂ ಇಲ್ಲ?



ಮಧ್ಯಾಹ್ನ ಒಂದು ಆಶ್ಚರ್ಯಕರ ಭೇಟಿ ನೀಡಿ ಪ್ರಾಚಿಯನ್ನು ಚಕಿತಗೊಳಿಸಬೇಕೆನ್ನುವ ಉದ್ದೇಶದಿಂದ ಪವನ್ ತನ್ನ ಕಾರ್ಯದರ್ಶಿಗೆ ತಿಳಿಸಿ ಕೆಳಗಿಳಿದು ಕಾರಿನ ಹತ್ತರ ಬಂದ.

ಪ್ರಾಚಿ ಸೌಂದರ್ಯದ ಬಗ್ಗೆ ಒಂದು ಪುಸ್ತಕವನ್ನು ತೆಗೆದುಕೊಂಡು ಓದುತ್ತಿದ್ದಾಳೆ. ಪವನ್ ಕಾರನ್ನು ಸುಮಾರು ೫೦ ಮೀಟರುಗಳಷ್ಟು ದೂರದಲ್ಲೇ ನಿಲ್ಲಿಸಿ, ಡ್ರೈವರ್‌ಗೆ ಹಿಂದಕ್ಕೋಗುವಂತೆ ತಿಳಿಸುತ್ತಾನೆ. ಏನೂ ಅರ್ಥವಾಗದ ಡ್ರೈವರ್ ಕಾರನ್ನು ಹಿಂದಕ್ಕೆ ತಿರುಗಿಸಿಕೊಳ್ಳುತ್ತಾನೆ. ಪವನ್ ನಿಧಾನವಾಗಿ ಮನೆಯೊಳಕ್ಕೆ ನಡೆದು ಬರುತ್ತಾನೆ. ಪ್ರಾಚಿ ಇರುವ ಕೋಣೆಯ ಬಾಗಿಲು ನಿಧಾನವಾಗಿ ಶಬ್ದಮಾಡುತ್ತಾ ತೆಗೆದುಕೊಳ್ಳುತ್ತದೆ. ಆದರೆ ಪ್ರಾಚಿ, ಸೇವಕ ಏನೋ ತೆಗೆದುಕೊಳ್ಳಲು ಬಂದಿರಬಹುದೆಂದು ಪುಸ್ತಕವನ್ನೇ ಓದುತ್ತಿದ್ದಾಳೆ. ಹತ್ತಿರ ಬಂದ ಪವನ್ ಪಕ್ಕದಲ್ಲಿ ನಿಂತುಕೊಂಡು ಅರೆಕ್ಷಣ ಪ್ರಾಚಿಯನ್ನು ದೃಷ್ಟಿಸಿದ ಮೇಲೆ ವೇಗವಾಗಿ ಬಗ್ಗಿ ಚುಂಬಿಸಿದ.

ಕುರ್ಚಿಯಿಂದಲೆ ಚೀರಿ ಕುಪ್ಪಳಿಸಿ ಹಾರಿ ಬಿದ್ದ ಪ್ರಾಚಿ, ಓ ಎಂದು ಒಮ್ಮೆಲೆ ಕಂಪಿಸತೊಡಗಿದಳು. ಪವನ್ ಮತ್ತೊಮ್ಮೆ ಆಲಂಗಿಸಿಕೊಂಡ. ಕೋಪಗೊಂಡ ಪ್ರಾಚಿ ಅವನ ಎದೆಯಲ್ಲಿ ಮುಖವನ್ನಿಟ್ಟುಕೊಂಡು ಶ್ವಾಸೋಚ್ಛಾಸದ ಜೊತೆಗೆ ಸಾಮಾನ್ಯ ಸ್ಥಿತಿಗೆ ಬರಲು ಪ್ರಯತ್ನಿಸುತ್ತಿದ್ದಳು.

ಸರಿಯಾಗಿ ಅದೇ ಸಮಯಕ್ಕೆ ಫೋನ್ ಬಾರಿಸಿತು. ಪವನ್‌ನ ಆಲಿಂಗನ ನಿಧಾನವಾಗಿ ಸಡಿಲಗೊಂಡಿತು. ಇಬ್ಬರೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಪ್ರಾಚಿ ರಿಸೀವರ್ ತೆಗೆದುಕೊಂಡು ಹಲೋ ಎನ್ನುವಷ್ಟರಲ್ಲಿ ಆ ಕಡೆಯಿಂದ "ಹಲೋ ಮೈ ಡಿಯರ್ ಡಾರ್ಲಿಂಗ್ ಹೇಗಿದ್ದೀಯಾ? ನನ್ನ ಬಗ್ಗೆ ಏನಾದರೂ ಕನಿಕರ ಉಂಟಾಯಿತೆ ನಿನ್ನ ಹೃದಯದಲ್ಲಿ" ಪ್ರಾಚಿ ಕೈಸನ್ನೆಯಿಂದಲೇ ತಿಳಿದುಕೊಂಡ ಪವನ್ ಮತ್ತೊಂದು ಫೋನ್‌ನಲ್ಲಿ ತನಗೆ ಕೊಟ್ಟಿರುವ ರಹಸ್ಯ ಕೋಡ್ ಸಂಖ್ಯೆಗೆ ರಿಂಗ್‌ಮಾಡಿದ. ಪ್ರಾಚಿ ಒಂದು ಬಟನ್ ಒತ್ತಿದ ತಕ್ಷಣ ಫೋನ್‌ನಲ್ಲಿ ಬರುತ್ತಿರುವ ಮಾತುಗಳು ಸದ್ದಿಲ್ಲದೆ ರೆಕಾರ್ಡ್ ಆಗುತ್ತಿವೆ. ಪ್ರಾಚಿ ಅವನಿಗೆ ಒಂದಷ್ಟು ಉತ್ತೇಜನ ನೀಡುವಂತೆ ಮಾತುಗಳಲ್ಲಿ ಎಳೆಯುತ್ತಿದ್ದಾಳೆ.

ಅಲ್ಲಿ ಕಂಟ್ರೋಲ್ ಕೋಣೆಯಲ್ಲಿ ಟೆಲಿಫೋನ್ ಮೀಟರುಗಳಿರುವ ರ್‍ಯಾಕ್‌ಗಳಲ್ಲಿ ಒಂದೊಂದಾಗಿ ಹುಡುಕುತ್ತಾ ಹೋಗುತ್ತಿರುವ ಒಬ್ಬ ಸಹಾಯಕ ಟೆಲಿಫೋನ್ ಎಂಜಿನೀಯರ್ ಶಬ್ದ ಬರುತ್ತಿರುವ ಒಂದು ರ್‍ಯಾಕನ್ನು ವೆಡ್ಜ್‌ಮಾಡಿ ಅದರಲ್ಲಿರುವ ೫೦೦ ಟೆಲಿಫೋನ್ ಮೀಟರುಗಳನ್ನು ಸ್ಕ್ರೀನ್ ಮಾಡುತ್ತಾ ಹೋಗುತ್ತಿದ್ದಾನೆ.

ಕೆಳಗಿನಿಂದ ೧,೨,೩... ೨೦೦ ಮೀಟರ್‌ಗಳನ್ನು ಕೇವಲ ಒಂದೂವರೆ ನಿಮಿಷದಲ್ಲಿ ಸ್ಕ್ರೀನ್ ಮಾಡಿದ ಮೇಲೆ ಮತ್ತೆ ಮೇಲಿನಿಂದ ಅಷ್ಟೇ ವೇಗದಲ್ಲಿ ೧,೨,೩... ೧೫೦ ಮೀಟರ್‌ಗಳನ್ನು ಸ್ಕ್ರೀನ್ ಮಾಡಿ ಮುಗಿಸಿದಾಗ ಪೋನ್ ಕಾಲ್ ಕಡಿದುಕೊಳ್ಳುತ್ತದೆ.

ಅಲ್ಲಿಗೆ ಪ್ರಾಚಿ ಸಾಮಾನ್ಯವಾಗಿ ಬೈಯ್ದುಕೊಳ್ಳುತ್ತಾ ರಿಸೀವರನ್ನು ಕ್ರೆಡಲ್ ಮೇಲೆ ಕುಕ್ಕುತ್ತಿದ್ದರ ಬದಲಿಗೆ ಇಂದು ಬೇಕೆಂತಲೇ ಕೋಪವಿಲ್ಲದೆ ಮಾತನಾಡಿದ ಗುಮಾನಿಯಿಂದಲೋ ಏನೋ ಆಗಂತಕ ಪೋನ್ ಇಟ್ಟುಬಿಟ್ಟಿರಬೇಕು.

ಅಂದರೆ ಇನ್ನೂ ೧೫೦ ಮೀಟರ್‌ಗಳನ್ನು ಸ್ಕ್ರೀನ್ ಆಗದೆ ಉಳಿದುಕೊಳ್ಳುತ್ತವೆ. ಅವುಗಳಲ್ಲಿ ಯಾವುದೋ ಒಂದು ಫೋನ್ ಬರುತ್ತದೆ. ಸಹಾಯಕ ಎಂಜಿನೀಯರ್ ಕೈ ಕೈ ಹಿಸುಕಿಕೊಂಡ. ಪ್ರಾಚಿ ಮತ್ತು ಪವನ್ ರೆಕಾರ್ಡ್ ಆದ ಸ್ವರವನ್ನು ಮತ್ತೊಂದರಲ್ಲಿ ರೀರೆಕಾರ್ಡ್ ಮಾಡಿಕೊಂಡು ಒಂದನ್ನು ತಮ್ಮಲ್ಲೇ ಉಳಿಸಿಕೊಂಡು ಇನ್ನೊಂದನ್ನು ಪೊಲೀಸ್ ಅಧಿಕಾರಿ ತರುಣ್‌ಕುಮಾರ್‌ಗೆ ಮುಟ್ಟಿಸಿದರು. ಪೊಲೀಸ್ ಅಧಿಕಾರಿ ಆ ಕ್ಯಾಸೆಟ್ಟನ್ನು ಕಂಟ್ರೋಲ್ ಕೋಣೆಗೆ ಮುಟ್ಟಿಸಿದ. ಕಂಟ್ರೋಲ್ ಕೋಣೆಯಿಂದ ತಪಾಸಣೆ ಪ್ರಾರಂಭವಾಯಿತು.



ಬೆಳಗು ಬ್ರಹ್ಮನ ಸೃಷ್ಟಿಯಾದರೆ, ಮಧ್ಯಾಹ್ನ ಶಿವನ ದೃಷ್ಟಿಯಂತೆ, ಸಾಯಂಕಾಲ ವಿಷ್ಣುವಿನ ಬಣ್ಣಗಳಲ್ಲಿ ಬೆಂಗಳೂರು ಹೆಣ್ಣಿನಂತೆ ಸಿಂಗರಿಸಿಕೊಂಡಿದೆ. ಹುಣ್ಣಿಮೆ ಚಂದ್ರನ ನೋಡಿದ ಸಾಗರದಂತೆ ಜನರ ಚಟುವಟಿಕೆಗಳಿಂದ ನಗರ ತುಂಬಿ ತುಳುಕಾಡುತ್ತಿದೆ. ಸಾಯಂಕಾಲ ನಿಧಾನವಾಗಿ ರಾತ್ರಿಯ ಕಡೆಗೆ ನಡೆಯುತ್ತಾ ಹೋಗುತ್ತಿದೆ.

ಜನರು ವಿದ್ಯುತ್ ದೀಪಗಳ ಸುತ್ತಮುತ್ತ ತಮ್ಮ ತಮ್ಮ ಅಭಿರುಚಿಗೆ ತಕ್ಕಂತೆ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುತ್ತಿದ್ದಾರೆ. ಸಿನಿಮಾ ಹಾಲುಗಳು. ಹೋಟೆಲುಗಳು, ಕ್ಲಬ್‌ಗಳು, ಕ್ಯಾಬರೆಗಳು ತುಂಬಿಕೊಳ್ಳುತ್ತಾ ಹೋಗುತ್ತಿವೆ.

ಸದ್ಯದ ನಮ್ಮ ಹೀರೋ ಅಲಿಯಾಸ್ ಚಿರಂಜೀವಿ. ಉದಯ್-ಗೌರವ್-ರಮೇಶ್ ತನ್ನ ಉದ್ದಕಾರನ್ನು ಮನೆಯಿಂದ ಹೊರಕ್ಕೆ ಬಿಟ್ಟು ಓಡಿಸುತ್ತಿದ್ದಾನೆ. ಮಟ್ಟವಾದ ಕ್ರಾಪ್ ಮಾಡಿಸಿ, ಕಣ್ಣುಗಳಿಗೆ ೧೦ ಸಾವಿರ ರೂಗಳ ಬೆಲೆಬಾಳುವ ವಿದೇಶಿ ಚಿನ್ನದ ಫ್ರೇಮ್ ಇರುವ ಫೋಟೋಕ್ರೋಮ್ ಚೆಸ್ಮಾ ತೊಡಗಿಕೊಂಡಿದ್ದಾನೆ. ತೆಳುವಾದ ವಿಂಡ್‌ಸ್ಪೆಟರ್‌ನಲ್ಲಿ ಒಳ್ಳೆ ಸೇನಾಧಿಕಾರಿಯಂತೆ ಕಾಣಿಸುತ್ತಿದ್ದಾನೆ. ಪಕ್ಕದಲ್ಲೇ ಅವನ ಸಭ್ಯತೆ ಮತ್ತು ಗೌರವಕ್ಕೆ ಮೆತ್ತಿಕೊಂಡಂತೆ ಇಂಡೋಮಂಗೋಲಾಯ್ಡ್ ಸುಂದರ ಹೆಣ್ಣು ಕುಳಿತಿದ್ದಾಳೆ. ಕಾರು ನಿಧಾನವಾಗಿ ಬೆಂಗಳೂರಿನ ಒಂದು ಮುಖ್ಯ ರಸ್ತೆಯಲ್ಲಿ ಓಡುತ್ತಾ ಬಂದು ಕ್ಲಬ್ ಇರುವ ಕಟ್ಟಡದ ಮುಂದೆ ನಿಂತುಕೊಂಡಿತು.

ಹೀರೋ ಬಹಳ ಆಳವಾದ ಪರಿಣಾಮ ಬೀರುವಂತೆ ನೋಟದಲ್ಲೊಮ್ಮೆ ಅವಳ ಕಡೆಗೆ ನೋಡಿದ. ಆಳವಾದ ನೋಟದ ಆಕರ್ಷಣೆಗೆ ಅಯಸ್ಕಾಂತದಂತೆ ಸೆಳೆತಗೊಂಡ ಅವಳ ಮನ ಹರಿದಾಡಿತು ಎಳೆಯ ನದಿಯಂತೆ.

ಅವಳ ಎದೆಗಳ ಮೇಲೆ ಬಿದ್ದ ಅವನ ಎಡಕೈ ನಿಧಾನವಾಗಿ ಬಾಗಿಲನ್ನು ತೆರೆಯಿತು. ಉಣ್ಣೆಯ ಬ್ಯಾಗಿ ಸ್ಕರ್ಟ್‌ನೊಳಗಿದ್ದ ಅವಳ ಎದೆಗಳ ಮೇಲೆ ಅವನ ಕೈ ಬಿದ್ದ ತಕ್ಷಣ ರಾತ್ರಿಯೆಲ್ಲಾ ಚಳಿಗೆ ನಡುಗುತ್ತಿದ್ದ ಬೆಟ್ಟಗಳ ಮೇಲೆ ಸೂರ್ಯನ ಬೆಳಕು ಬಿದ್ದಂತಾಗಿ ಬಾಗಿಲನ್ನು ಪೂರ್ತಿ ತೆರೆದುಕೊಡದೆ ಅವಳ ಕೈಗಳು ಅವನ ಕೈಯನ್ನು ಹಾಗೆ ತನ್ನ ಎದೆಗಳ ಮೇಲೆ ಇರಿಸಿಕೊಂಡಿತು.

ಅರೆಕ್ಷಣ ಬೆರಗಾದ ಹೀರೋ ಬಾಗಿಲನ್ನು ಮತ್ತೊಮ್ಮೆ ಪೂರ್ತಿ ಮುಚ್ಚಿದ. ಸೂರ್ಯನ ಬಿಸಿಲಲ್ಲಿ ಒಳಗಿನ ವಿಷಯಗಳನ್ನು ತೋರಗೊಡದೆ ಆ ಕಾರಿನ ದರ್ಪಣಗಳು ವಿದ್ಯುತ್ ದೀಪಗಳ ಬೆಳಕಿಗೆ ನಾಚಿಕೆಗೊಂಡು ಕಣ್ಣು ಕಣ್ಣು ಬಿಡುತ್ತಿದ್ದವು. ಅರೆಕ್ಷಣ ಯೋಚನೆಯಲ್ಲಿ ಬಿದ್ದ ಹೀರೋ ಮೃದುವಾಗಿ ಅವಳನ್ನು ತಬ್ಬಿಕೊಂಡು ಚುಂಬಿಸಿದ. ಅವಳ ಆಸೆಯನ್ನು ಒತ್ತಿಡಲಾಗದೆ.

ಅವಳ ಮನ ಆ ಕ್ಷಣಗಳನ್ನು ಪೋಲು ಮಾಡಿಕೊಳ್ಳಲು ಇಷ್ಟಪಡದೆ ತವಕಿಸುತ್ತಿದ್ದರೂ, ರಸ್ತೆಯಲ್ಲಿದ್ದೇವೆ ಎನ್ನುವ ಜ್ಞಾನದಿಂದ ಒಳಗೆದ್ದ ಭಾವನೆಗಳನ್ನು ಸದ್ಯಕ್ಕೆ ಅಡಗಿಸಿಕೊಂಡಳು. ಕಾರಿನ ಎರಡು ಬಾಗಿಲುಗಳು ನಿಧಾನವಾಗಿ ಏಕಕಾಲಕ್ಕೆ ತೆರೆದುಕೊಂಡವು. ಇಬ್ಬರೂ ಇಳಿದು ಒಬ್ಬರಿಗೊಬ್ಬರು ಒತ್ತಿಕೊಂಡು ಕ್ಲಬ್ ಒಳಕ್ಕೆ ನಡೆಯತೊಡಗಿದರು. ಎರಡು ಬಾಗಿಲುಗಳನ್ನು ದಾಟಿ ನಡೆದ ಮೇಲೆ ಮತ್ತೊಂದು ಬಾಗಿಲು ದಾಟಿ, ಅಲ್ಲಿ ಒಂದು ಸುಸಜ್ಜಿತ ಕೋಣೆಯಲ್ಲಿ ಮೇಜಿನ ಮುಂದೆ ಕುಳಿತುಕೊಂಡರು.

ವಿಧವಿಧ ಅಲಂಕಾರದ ಪಾರದರ್ಶಕ ಗಾಜಿನ ಒಳಗಿರುವ ಬಣ್ಣಬಣ್ಣದ

ದೀಪಗಳು ಗೊಡೆಗಳ ಮೇಲೆ ಮತ್ತು ರೂಫ್ ಕೆಳಗೆ ಕಮ್ಮಿ ವೋಲ್ಟ್‌ಗಳಲ್ಲಿ ಉರಿಯುತ್ತಿವೆ. ಅಲಂಕಾರಗೊಂಡಿರುವ ಮೇಜುಗಳ ಮೇಲಿನ ಸಣ್ಣ ಪುಟ್ಟ ವಸ್ತುಗಳು ಆಕರ್ಷಕವಾಗಿ ಕಾಣುತ್ತಿವೆ.

ವಿನಮ್ರವಾಗಿ ನಡೆಯುತ್ತಾ ಬಂದ ಸೇವಕ ತನ್ನದೇ ಆದ ಭಂಗಿಯಲ್ಲಿ ವಂದಿಸಿ, ಮೆನುಕಾರ್ಡ್ ಕೊಟ್ಟು ಪಕ್ಕದಲ್ಲೇ ನಿಂತುಕೊಂಡ. ಕಾರ್ಡ್ ಕೈಗೆ ತೆಗೆದುಕೊಂಡ ಹೀರೋ ಐದು ನಿಮಿಷ ಬಿಟ್ಟುಬರುವಂತೆ ತಿಳಿಸಿದ. ಕಾರ್ಡನ್ನು ಬ್ಯೂಲೀನಾ ಕೈಗೆ ನೀಡಿದ. ಬ್ಯೂಲೀನಾ ಐಟಮ್‌ಗಳನ್ನು ಒಮ್ಮೆ ನೋಡಿದ ಮೇಲೆ ಹೇಳಿದಳು "ನನಗೆ ನಮ್ಮ ಊರಿನ ಜ್ಞಾಪಕ ಬರುತ್ತಿದೆ, ನನಗೆ ಪೋರ್ಕ್ ಅಂದರೆ ಬಹಳ ಇಷ್ಟ. ಅದರ ಜೊತೆಗೆ ರೈಸ್‌ಬೀರ್ ಇದ್ದರೆ ಇನ್ನೂ ಮಜಾ ಇರುತ್ತದೆ"

"ಪೋರ್ಕ್ ಏನೋ ಗೊತ್ತು, ಆದರೆ ರೈಸ್‌ಬೀರು"

"ಅದನ್ನು ಕುಡಿದಾಗ ಮಾತ್ರ ಗೊತ್ತಾಗುತ್ತದೆ." ಬ್ಯೂಲೀನಾ ನಕ್ಕಳು.

"ಅದೋಗಲಿ ಈಗ ನಿನಗೇನು ಬೇಕೋ ತಿಳಿಸು." ಹೀರೋ ಹೇಳಿದ.

"ನನಗೆ ಬರಿ ತಂಪು ಬೀರು, ಜೊತೆಗೆ ಚಿಕನ್ ಚೌವ್‌ಮೀನ್." ಮೆನುಕಾರ್ಡ್‌ನಲ್ಲಿ ಐಟಮ್‌ಗಳನ್ನು ಹಾಗೆ ಹುಡುಕುತ್ತಾ ಹೋಗಿ ಜೊತೆಗೆ ಒಂದು ಚಿಕನ್ ಬಿರಿಯಾನಿ ಕೊಡು" ಎಂದಳು. ಹೀರೋ ತನಗೆ ಬೇಕಾಗಿರುವ ಒಂದೆರಡು ಐಟಮ್‌ಗಳನ್ನು ಗುರುತಿಸಿಕೊಂಡು ನಿಧಾನವಾಗಿ ಅವಳನ್ನು ಬ್ಯೂಯು ಎಂದು ಬಹಳ ಮೃದುವಾಗಿ ಮೆಲ್ಲಗೆ ಕರೆದ. ಬ್ಯೂಲೀನಾಳ ಮುಖಕಾಂತಿ ಇನ್ನಷ್ಟು ಹೊಳೆಯುತ್ತಾ ಅರಳಿಕೊಂಡಿತು.

"ನಿನ್ನ ಕೇಶರಾಶಿಯಲ್ಲಿ ಬಹಳ ಹೊಳಪಿದೆ" ಎನ್ನುತ್ತಾ ಅವಳ ತಲೆಯನ್ನು ನಿಧಾನವಾಗಿ ಸವರಿದ. ದಪ್ಪದಾದ ತುಟಿಗಳು ಇನ್ನಷ್ಟು ದಾಹದಿಂದ ಆಕರ್ಷಕವಾಗಿ ಒಂದನ್ನೊಂದು ಒತ್ತಿಕೊಂಡವು.

ಸೇವಕ ಮತ್ತೊಮ್ಮೆ ಹತ್ತಿರ ಬಂದು ನಿಂತುಕೊಂಡ. ಹೀರೋ ಎಲ್ಲವನ್ನೂ ಕೇಳುತ್ತಾ ಹೋದಂತೆ ಸೇವಕ ತನ್ನ ಪುಸ್ತಕದಲ್ಲಿ ಬರೆದುಕೊಳ್ಳುತ್ತಾ ಹೋದ. ಅಕ್ಕಪಕ್ಕದ ಮೇಜುಗಳ ಮುಂದೆ ಕುಳಿತಿರುವ ಹೆಣ್ಣು-ಗಂಡು ಒಳಧ್ವನಿಗಳಲ್ಲಿ ಮಾತನಾಡುತ್ತ ಸಾಯಂಕಾಲವನ್ನು ಆದಷ್ಟು ಮಧುರವಾಗಿ ಸವಿಯುತ್ತಿದ್ದಾರೆ.

ಅವನೇಳಿದ ಒಂದು ಮಾಂಸಾಹಾರಿ ಹಾಸ್ಯ ಬ್ಯೂಲೀನಾಳಲ್ಲಿ ಅಲೆಅಲೆಯಾಗಿ ನಗುವನ್ನು ಹೊಮ್ಮಿಸುತ್ತಿದೆ. ಸೇವಕ ಮೊದಲು ಡ್ರಿಂಕ್ಸ್ ಮತ್ತು ಗ್ಲಾಸುಗಳನ್ನು ತಂದಿಟ್ಟ ಮೇಲೆ ಮತ್ತೊಮ್ಮೆ ಟ್ರೇನಲ್ಲಿ ಎಲ್ಲಾ ಭಕ್ಷ್ಯಗಳನ್ನೂ ಮೇಜಿನ ಮೇಲೆ ಪೇರಿಸಿದ.

ಇಬ್ಬರೂ ಆ ಸಾಯಂಕಾಲದ ಕ್ಷಣಗಳನ್ನು ನೆನಪಿನಲ್ಲಿರುವಂತೆ ಕಳೆಯುತ್ತಾ ತಮ್ಮ ಮುಂದಿರುವ ಭಕ್ಷ್ಯಗಳನ್ನು ಡ್ರಿಂಕ್ಸ್ ಜೊತೆಗೆ ತೆಗೆದುಕೊಳ್ಳುತ್ತಿದ್ದಾರೆ. ಸರಿಯಾಗಿ ಅದೇ ಸಮಯಕ್ಕೆ ಒಂದು ಮೂಲೆಯಲ್ಲಿರುವ ಜೋಡಿ ಕಣ್ಣುಗಳು ಇವರಿಬ್ಬರ ಆನಂದವನ್ನು ಪದೇ ಪದೇ ನೋಡುತ್ತಾ ತಲ್ಲಣಿಸಿದಂತೆ ಆವೇಶಗೊಳ್ಳುತ್ತವೆ. ಹೃದಯದ ಕವಾಟುಗಳು ಒಂದೇ ಸಮನೆ ನುಗ್ಗಿ ಬರುತ್ತಿರುವ ರಕ್ತವನ್ನು ತಡೆದುಕೊಳ್ಳಲಾಗದೆ ವೇದನೆ ಪಡುತ್ತಿದೆ.

ಏನೋ ಕಾತರಪಡಿಸಿಕೊಂಡ ಆ ಕಣ್ಣುಗಳ ಜೊತೆಯಲ್ಲಿರುವವರಿಗೆ ಅರೆಕ್ಷಣ ಈಗಲೇ ಬರುತ್ತೇನೆಂದೇಳಿ ಎದ್ದುನಿಲ್ಲುತ್ತವೆ. ಮರುಕ್ಷಣದಲ್ಲಿ ತಾನು ಮಾಡದಿರುವ ಕೆಲಸವನ್ನು ಅತ್ಯಂತ ಜಾಗರೂಕತೆಯಿಂದ ಮುಗಿಸಬೇಕೆಂದುಕೊಳ್ಳುತ್ತಾ ನೇರವಾಗಿ 'ರಿಸೆಪ್ಶನ್' ಹತ್ತಿರ ನಡೆದು ಏನೋ ಮಾತನಾಡುತ್ತಾನೆ. ಆ ರಿಸೆಪ್ಶನಿಸ್ಟ್ ಫೋನ್ ಇರುವ ಇನ್ನೊಂದು ಕೋಣೆಯೊಳಕ್ಕೆ ಕರೆದುಕೊಂಡು ಹೋಗುತ್ತಾಳೆ.

ಆ ಕಡೆ ಪೊಲೀಸ್ ಠಾಣೆಯಲ್ಲಿರುವ ಒಬ್ಬ ಪೊಲೀಸ್ ಅಧಿಕಾರಿ ಫೋನ್ ತೆಗೆದುಕೊಳ್ಳುತ್ತಾನೆ. ಫೋನ್ ಕೆಳಗಿಟ್ಟ ಆ ಎರಡು ಕಣ್ಣುಗಳು ಅತ್ಯಂತ ಎಚ್ಚರಿಕೆಯಿಂದ ತನ್ನ ಕುರ್ಚಿ ಕಡೆಗೆ ಬರತೊಡಗುತ್ತವೆ ಅಷ್ಟೇ.

ಆ ಕಣ್ಣುಗಳನ್ನು ಆಕಸ್ಮಿಕವಾಗಿ ಅರೆಕ್ಷಣ ಎದುರುಗೊಂಡ ಅವನ ಮೆದುಳಿನ ಕಣ್ಣುಗಳನ್ನು ಯಾರೋ ಮುಳ್ಳಿನಲ್ಲಿ ಒಮ್ಮೆ ಚುಚ್ಚಿದಂತಾಗುತ್ತದೆ.

ಹೀರೋನ ತಲೆಯಲ್ಲಿರುವ ಪ್ರತಿಯೊಂದು ಕಣವು ಅವನನ್ನು ಅಲ್ಲಿಂದ ಪರಾರಿಯಾಗುವಂತೆ ಎಚ್ಚರಿಸಿಬಿಡುತ್ತವೆ. ಬ್ಯೂಲೀನಾ ಹಗುರವಾಗಿ ಓಲಾಡಿದಂತೆ ಕಳೆದೋಗಿದ್ದಾಳೆ.

ಪೊಲೀಸ್ ಅಧಿಕಾರಿ ಬೆಲ್ಟ್‌ನಲ್ಲಿರುವ ಪಿಸ್ತೂಲ್ ಮುಟ್ಟಿನೋಡಿಕೊಂಡು ತುರ್ತಾಗಿ ಕಾರ್ಯದರ್ಶಿಗೆ ತಯಾರಿರುವ 'ಸಿಟಿಸ್ಕ್ವಾಡ್' ಪೊಲೀಸ್ ಪೇದೆಗಳನ್ನು ರೋಪ್ಲಸ್‌ನಲ್ಲಿ ಕೂರಿಸಿಕೊಂಡು ಕ್ಲಬ್ ಕಡೆಗೆ ದೌಡಾಯಿಸುವಂತೆ ಚಾಲಕನಿಗೆ ಆಜ್ಞೆ ನೀಡುತ್ತಾನೆ. ರೋಪ್ಲೆಸ್ ರಸ್ತೆಗಳ ಮೇಲೆ ವೇಗವಾಗಿ ಧಾವಿಸುತ್ತದೆ.

ಪರ್ಸ್‌ನಲ್ಲಿದ್ದ ಜೋಡಿ ಕಣ್ಣುಗಳು ಅರೆಕ್ಷಣ ಏನೂ ತೋಚದೆ ಹಿಂದೆಯೇ ಹಿಂಬಾಲಿಸುತ್ತವೆ. ಕಾರಿನ ಬಾಗಿಲು ತೆಗೆದು ಬ್ಯೂಲೀನಾಳನ್ನು ಒಳಕ್ಕೆ ತಳ್ಳಿ ಬಾಗಿಲು ಮುಚ್ಚಿ ಮೂರೇ ಹೆಜ್ಜೆಗಳಲ್ಲಿ ಚಾಲಕನು ಕೂರುವ ಬಾಗಿಲಿಗೆ ಬಂದು, ಬಾಗಿಲು ತೆಗೆದು, ಒಳಗೆ ಸೇರಿಕೊಳ್ಳುತ್ತಾನೆ. ಕಾರು ಹಕ್ಕಿಯಂತೆ ರಸ್ತೆಗೆ ಜಿಗಿಯುತ್ತದೆ.

ಆ ಎರಡು ಕಣ್ಣುಗಳು ಏನೂ ಮಾಡಲಾಗದೆ ಕಾರಿನ ಸಂಖ್ಯೆಯನ್ನು

ಗುರುತಿಸಿಕೊಳ್ಳುತ್ತವೆ. ಆಗ ರೋಪ್ಲಸ್ ಪೊಲೀಸ್ ಅಧಿಕಾರಿ ಮತ್ತು ಪೇದೆಗಳನ್ನೊತ್ತು ಒಳಕ್ಕೆ ಧಾವಿಸಿ ಬರುತ್ತದೆ.

ಪೊಲೀಸ್ ಗಾಡಿಯ ಹತ್ತಿರಕ್ಕೆ ಓಡಿಬಂದ ಜೋಡಿಕಣ್ಣುಗಳು "ನನ್ನ ಹೆಸರು ದರ್ಶನಾಸಿಂಗ್ ಅಂತ. ಐದು ನಿಮಿಷಗಳ ಮುಂದೆ ಫೋನ್ ಮಾಡಿದ್ದು ನಾನೇ. ಅವನು ಈಗಲೇ ಕಾರಿನಲ್ಲಿ ಹೋಗಿಬಿಟ್ಟ." ಕಾರಿನ ಹೆಸರು ಮತ್ತು ಸಂಖ್ಯೆ ಕೂಡ ಹೇಳಿದಳು.

"ನೀವು ಸಾಧ್ಯವಾದಷ್ಟು ಬೇಗ ಪೊಲೀಸ್ ಠಾಣೆಗೆ ಬಂದು ದೂರು ಕೊಡಬೇಕು" ಅಧಿಕಾರಿ ಹೇಳಿದ.

"ಆಯಿತು, ನಾನು ಬೆಳಗ್ಗೆ ಪೊಲೀಸ್ ಠಾಣೆಗೆ ಬಂದು ದೂರು ಕೊಡುತ್ತೇನೆ" ದರ್ಶನಾ ಹೇಳಿದಳು. ರೋಪ್ಲಸ್ ತಿರುಗಿಕೊಂಡು ರಸ್ತೆಗೆ ಇಳಿಯಿತು. ಸ್ವಲ್ಪ ದೂರ ಓಡಿಸಿದ ಹೀರೋ ಕಾರನ್ನು ನಿಲ್ಲಿಸಿ, ತನ್ನ ಕಾರಿನ ಸಂಖ್ಯೆಯನ್ನು ಬದಲಾಯಿಸಿದ ಮೇಲೆ, ನಿಧಾನವಾಗಿ ಕಾರನ್ನು ಮನೆಯ ಕಡೆಗೆ ಓಡಿಸತೊಡಗಿದ. ಸುಮಾರು ಹೊತ್ತು ಓಡಾಡಿದ ಪೊಲೀಸ್ ಗಾಡಿ. ಪೊಲೀಸ್ ಠಾಣೆಯ ಕಡೆಗೆ ವಾಪಸ್ ಚಲಿಸಿತು.

ಸಮಯ ಬೆಳಿಗ್ಗೆ ಸರಿಯಾಗಿ ಒಂಬತ್ತು ಗಂಟೆಯಾಗಿತ್ತು. ದರ್ಶನಾ ಸಿಂಗ್ ಪೊಲೀಸ್ ಠಾಣೆಯ ಒಂದು ಕೋಣೆಯಲ್ಲಿ ಅಧಿಕಾರಿ ತರುಣ್‌ಕುಮಾರ್ ಮುಂದೆ ತನ್ನ ಜೊತೆ ನಡೆದ ಘಟನೆಯನ್ನು ವಿವರವಾಗಿ ಹೇಳುತ್ತಿದ್ದಾಳೆ. ತರುಣ್‌ಕುಮಾರ್ ಸರಾಗವಾಗಿ ಕೇಳಿಸಿಕೊಳ್ಳುತ್ತಾ ರೆಕಾರ್ಡ್ ಮಾಡಿಕೊಳ್ಳುತ್ತಿದ್ದಾನೆ.

"ನೀವು ಆದಷ್ಟು ವಿವರವಾಗಿ ತಿಳಿಸಬೇಕು."

"ನನಗೆ ತಿಳಿದ ಮಟ್ಟಿಗೆ ವಿವರವಾಗಿಯೇ ಹೇಳಿದ್ದೇನೆ" ದರ್ಶನಾ ಹೇಳಿದಳು.

"ನೀವು ಅವನನ್ನು ಮೊದಲು ನೋಡಿದ್ದೆಲ್ಲಿ?"

"ಅದಕ್ಕಿನ್ನ ಮುಂಚೆಯೇ ಒಂದೆರಡು ಸಲ ಅದೇ ಕಾಂಪ್ಲೆಕ್ಸ್‌ನಲ್ಲಿ ದೂರದಿಂದ ನೋಡಿದ್ದೆ."

"ಎಷ್ಟು ಸಲ?"

"ಮೂರು ಸಲ"

"ಅಂದರೆ, ನೀವು ಮೊದಲು ಮಾತನಾಡಿದ್ದು ಕಾಂಪ್ಲೆಕ್ಸ್‌ನಲ್ಲೆ?"

"ಹೌದು"

"ಯಾವ ದಿನ?" ಹೇಳಿದಳು.

ಆ ಮೇಲೆ ಹೋಟೆಲ್‌ಗೋಗಿದ್ದು, ಅಲ್ಲಿ ಸ್ಮೃತಿ ತಪ್ಪಿದ್ದು ಆ ನಂತರ ಮನೆಯಲ್ಲಿ ಪ್ರಜ್ಞೆ ಬಂದಿದ್ದು, ಮತ್ತೊಮ್ಮೆ ಮಾತ್ರೆ ನುಂಗಿಸಿದ್ದು, ಮತ್ತೆ ಬೆಂಗಳೂರು ಅರಮನೆಯ ಆವರಣದಿಂದ ಹಾಸ್ಪೆಲ್ಗೋಗಿದ್ದು ಎಲ್ಲಾ ಹೇಳಿದಳು.

ಒಂದು ಪ್ರಶ್ನೆ "ನಿಮಗೆ ಪ್ರಜ್ಞೆ ಬಂದಾಗ ಆ ಕೋಣೆಯನ್ನು ನೋಡಿದ್ದೀರಲ್ಲವೆ?"

"ನೋಡಿದ್ದೇನೆ."

"ಹೇಗಿದೆ?"

"ಅದೊಂದು ಒಳ್ಳೆ ಕೋಣೆ, ಗೋಡೆಗಳಿಗೆಲ್ಲ ತೆಳು ನೀಲಿಬಣ್ಣ ಹಚ್ಚಿದೆ, ಡಬಲ್‌ಕಾಟ್‌ಗೆ ಪಿಂಕ್ ಬಣ್ಣದ ನೈಲಾನ್ ಸೊಳ್ಳೆಪರದೆ ಕಟ್ಟಿದೆ, ಗೋಡೆ ಮೇಲೆ ಒಂದು ದೊಡ್ಡ ಆಕಾರದ ಪಟ್ಟೆಪಟ್ಟೆಯ ಹುಲಿಯ ಚಿತ್ರವಿದೆ, ಎರಡು ಅಲಂಕಾರದ ಗಾಜಿನ ವಿದ್ಯುತ್ ದೀಪಗಳಿವೆ". ಆ ದಿನ ಅವಳ ನೋಟಕ್ಕೆ ಸಿಕ್ಕಿ ಮುದ್ರಿತವಾದ ಚಿತ್ರಣದ ಒಂದೊಂದು ಭಾಗವನ್ನೂ ಬಿಡಿಸುತ್ತಾ ಹೋಗುತ್ತಿದ್ದಾಳೆ.

"ಆ ಮನೆ ಬೆಂಗಳೂರಿನ ಯಾವ ಕಾಲೋನಿಯಲ್ಲಿರಬಹುದು?"

"ನನಗೆ ಗೊತ್ತಿಲ್ಲ. ನಾನು ಬೆಂಗಳೂರಿನವಳಲ್ಲ, ರೀಸರ್ಚ್ ಮಾಡ್ತಾ ಇದ್ದೇನೆ, ನಮ್ಮ ಮೂಲಸ್ಥಾನ ಚಂಡೀಗಡ್" ಎಂದಳು.

"ಅದು ಸರಿ, ಅವನು ಬರೆದಿಟ್ಟಿದ್ದ ಕಾಗದವನ್ನಾದರೂ ಇಟ್ಟುಕೊಂಡಿರಬೇಕಾಗಿತ್ತು."

"ನನಗೆ ಆಗ ಅಷ್ಟು ಯೋಚನೆ ಬರಲಿಲ್ಲ. ಚೂರು ಚೂರು ಮಾಡಿ ಬಿಸಾಕಿಬಿಟ್ಟೆ."

"ಕ್ಷಮಿಸಬೇಕು, ನಾನೊಂದು ಪ್ರಶ್ನೆ ಕೇಳುತ್ತೇನೆ."

"ಖಂಡಿತ ಕೇಳಿ, ಸ್ವಾಗತಿಸುತ್ತೇನೆ."

"ಕಾಗದಲ್ಲಿ ಏನು ಬರೆದಿತ್ತೆಂದಿರಿ."

"ಮೂರೇ ಮೂರು ವಾಕ್ಯಗಳಿತ್ತು –

ಒಂದು : ಡಿಯರ್ ದರ್ಶನಾ ದಯವಿಟ್ಟು ನನ್ನನ್ನ ಕ್ಷಮಿಸುವುದು.

ಎರಡು : ನೀನು ಬಸಿರಾಗುವಂತೆ ನಾನು ನಡೆದುಕೊಂಡಿಲ್ಲ.

ಮೂರು : ಇದೊಂದು ಕನಸೆಂದುಕೊಂಡು ಮರೆತುಬಿಡುವುದು.

"ಎರಡನೇ ವಾಕ್ಯದ ಬಗ್ಗೆ ನಿಮ್ಮ ಅಭಿಪ್ರಾಯವೇನು?"

"ಅಂದರೆ ಬಹುಶಃ ನನ್ನ ಪ್ರಕಾರ ಸಂಭೋಗವಂತೂ ನಡೆಸಿದ್ದಾನೆ."

"ಗುಡ್, ಹೇಳಿ ಹೇಳಿ ದಯವಿಟ್ಟು ಏನೂ ಮುಚ್ಚಿಡಬೇಡಿ."

ಆ ಮಾತನ್ನು ಹೇಳಿ ತನ್ನ ಇಡಿ ಆಯುಷ್ಯದ ನಾಚಿಕೆಯನ್ನೆಲ್ಲಾ ಕಳೆದು ಕೊಂಡವಳಂತೆ ತಲೆ ಬಗ್ಗಿಸಿಕೊಂಡಳು.

"ಯಾವುದಾದರೂ ಕಾಂಟ್ರಾಸೆಪ್ಟೀವ್ ಪಿಲ್ಸ್ ಉಪಯೋಗಿಸಿರಬಹುದು." ತಲೆ ಬಗ್ಗಿಸಿಕೊಂಡು ಹೇಳಿದಳು.

"ಕಾಂಟ್ರಾಸೆಪ್ಟೀವ್ ಪಿಲ್ಸ್ ಉಪಯೋಗಿಸಿರಬಹುದು, ಹೇಗೇಳ್ತೀರಿ?" ದರ್ಶನಾ ಮುಖವನ್ನು ಮೇಲೆತ್ತಿ ಸೂಕ್ಷ್ಮವಾಗಿ ತರುಣ್‌ಕುಮಾರ್ ಕಡೆಗೆ ನೋಡಿದಳು.

"ಕ್ಷಮಿಸಿ, ಮಿಸ್ ದರ್ಶನಾಸಿಂಗ್ ನಮ್ಮ ಕೆಲಸವೇ ಅಂತಾದ್ದು. ೨೪ ಗಂಟೆಗಳೊಳಗೆ ಡಾಕ್ಟರ್ ಮುಖಾಂತರ ಪರೀಕ್ಷಿಸಿ ನಿಶ್ಚಯಿಸಿಕೊಂಡಿರಬಹುದು. ಆದರೂ ನಾನು ನೀವೇಳಿದ್ದನ್ನೇ ದೃಢವೆಂದು ನಂಬುತ್ತೇನೆ, ಇಂತವೇ ಮತ್ತೆರಡು ಕೇಸುಗಳು ಇತ್ತೀಚೆಗೆ ಬೇರೆ ಬೇರೆ ಠಾಣೆಗಳಲ್ಲಿ ದಾಖಲಾಗಿದೆ. ನೀವೇನೂ ಗಾಬರಿಯಾಗಬೇಕಿಲ್ಲ. ನಿಮಗೆ ಮೊದಲೇ ತಿಳಿಸಿದಂತೆ ನೀವೇಳಿದ ಪ್ರತಿಯೊಂದು ವಿಷಯವನ್ನೂ ಬಚ್ಚಿಡುವುದು ನಮ್ಮ ಕರ್ತವ್ಯ, ನೀವು ಯಾವ ರೀತಿಯಲ್ಲೂ ಚಿಂತಿಸಬೇಡಿ. ಇನ್ನೊಂದು ವಿಷಯ, ಅವನನ್ನು ಮತ್ತೆ ಎಲ್ಲಿಯಾದರೂ ನೋಡಿದರೆ, ಕೂಡಲೇ ನಮ್ಮನ್ನು ಸಂಪರ್ಕಿಸಲು ದಯವಿಟ್ಟು ಮರಿಬೇಡಿ. ಅವನ ಜೊತೆ ಇದ್ದ ಹೆಣ್ಣಾದರೂ ಸಾಕು. ಇನ್ನೊಂದು ವಿಷಯ ನಮ್ಮಲ್ಲಿ ಒಂದು ನೋಂದಣಿ ಮಾಡಿದ ಕ್ರಿಮಿನಲ್ ಫೋಟೋ ಆಲ್ಬಮ್ ಇದೆ. ಯಾವುದಕ್ಕೂ ಅದನ್ನೊಮ್ಮೆ ನೋಡಿ." ಎಂದು ಪೊಲೀಸ್ ಪೇದೆಯನ್ನು ಕರೆದು ಆ ನೋಂದಣಿ ಪುಸ್ತಕವನ್ನು ತರುವಂತೆ ಹೇಳಿದರು. ಅಷ್ಟರಲ್ಲಿ ಒಬ್ಬ ಪೇದೆ ಎರಡು ಕಾಫಿ ಕಪ್‌ಗಳನ್ನು ತಂದು ಮುಂದಿರಿಸಿದ. ಒಂದನ್ನು ದರ್ಶನಾ ಕಡೆಗೆ ನೀಡಿ ತಾನೊಂದನ್ನು ತೆಗೆದುಕೊಂಡರು ತರುಣ್‌ಕುಮಾರ್.

ಪೇದೆ ಫೋಟೋ ಆಲ್ಬಮ್ ತಂದು ಕೊಟ್ಟೋದ. ಆದರೆ ಅದರಲ್ಲಿ ಅವನಷ್ಟು ಸುಂದರವಾಗಿರುವ ಮುಖ ಒಂದೂ ಕಾಣದೆ, "ಇದರಲ್ಲಿ ಯಾರೂ ಇಲ್ಲ" ಎಂದೇಳಿ ಕೆಳಗಿಟ್ಟಳು.

"ನೀವೇನು ಭಯ ಪಡಬೇಕಾಗಿಲ್ಲ, ಮತ್ತೆ ನಿಮ್ಮ ತಂಟೆಗೆ ಅವನು ಬರುವುದಿಲ್ಲವೆಂದೇ ತಿಳಿಯುತ್ತೇನೆ, ಯಾವ ರೀತಿಯ ತೊಂದರೆಯಾದರೂ ಸರಿ, ಖಂಡಿತ ತಿಳಿಸಿ ನಮ್ಮ ಕೈಯಲ್ಲಾದಷ್ಟು ಸಹಾಯ ನಾವು ಮಾಡುತ್ತೇವೆ."

ದರ್ಶನಾ ವಿವರವಾಗಿ ಬರೆದುಕೊಟ್ಟ ಮುಚ್ಚಳಿಕೆಯನ್ನು ಫೈಲಿನಲ್ಲಿಟ್ಟು "ಇನ್ನು ನೀವು ಹೋಗಬಹುದು" ಹೇಳಿದ.

ದರ್ಶನಾ ಎದ್ದುನಿಂತು ವಂದನೆಗಳನ್ನು ಸಲ್ಲಿಸಿ ಹೊರಕ್ಕೆ ನಡೆದಳು. ಪೊಲೀಸ್ ಅಧಿಕಾರಿ ತರುಣ್‌ಕುಮಾರ್ ಕೂಡ ಎದ್ದುನಿಂತು ದರ್ಶನಾಳನ್ನು ಬೀಳ್ಕೊಟ್ಟರು.



ಭೂಮಿ ಪೂರ್ವದಿಂದ ಪಶ್ಚಿಮಕ್ಕೆ ಎಂದಿನಂತೆ ತಿರುಗುತ್ತಾ ಹೋಗುತ್ತಿದೆ. ೧೩೦ ರೇಖಾಂಶದಲ್ಲಿರುವ ಬೆಂಗಳೂರು ನಗರ, ಆ ಸಾಯಂಕಾಲದ ಸೂರ್ಯನ ಕಿರಣಗಳಿಂದ ಪೂರ್ವಕ್ಕೆ ಓಡುತ್ತಿದ್ದಂತೆ, ಲಕ್ಷಾಂತರ ಬೆಳಕಿನ ಕಿರಣಗಳು ಬೆಂಗಳೂರು ನಗರವನ್ನು ಕತ್ತಲಿಂದ ದೂರವಾಗಿಸಲು ಹೆಣಗಾಡಿ ಕೊನೆಗೂ ಸೋಲನ್ನೊಪ್ಪಿ ಕೊಂಡವು. ಬೆಂಗಳೂರು ವಿಮಾನ ನಿಲ್ದಾಣದಲ್ಲಿ ಬ್ಯೂಲೀನಾ ಒಂದು ದೊಡ್ಡ ಸೂಟ್‌ಕೇಸು ಒಂದು ಏರ್ ಬ್ಯಾಗು ಮತ್ತು ಒಂದು ಲೀಟರಿನ ಮಿಲ್ಟನ್ ಕೂಲ್ ರೈಡರ್ ಪಕ್ಕದಲ್ಲಿಟ್ಟುಕೊಂಡು ಹೀರೋ ಜೊತೆ ಮಾತನಾಡುತ್ತಿದ್ದಾಳೆ.

ಬೆಂಗಳೂರಿನಿಂದ ಕಲ್ಕತ್ತಾಗೆ ೨೦:೨೦ ಗಂಟೆಗೆ ಹೊರಡುವ ವಿಮಾನ ಐಸಿ.೨೭೨ರಲ್ಲಿ ಬ್ಯೂಲೀನಾಳನ್ನು ಕೂರಿಸಿಬಿಟ್ಟರೆ ಒಂದು ಮುಖ್ಯ ಐ ವಿಟ್ನೆಸ್ಸನ್ನು ಸಂಪೂರ್ಣವಾಗಿ ಗಂಟು ಮೂಟೆ ಕಟ್ಟಿದಂತಾಗುತ್ತದೆ. ಆದರೂ ಅವನ ಮನ ಬ್ಯೂಲೀನಾಳನ್ನು ಕಳೆದುಕೊಳ್ಳುವುದಕ್ಕೆ ಇಷ್ಟಪಡದೆ ಒಂದು ರೀತಿಯಲ್ಲಿ ನಿರಾಶೆಗೊಂಡಿದೆ. ಬ್ಯೂಲೀನಾ ಈಗಾಗಲೇ ತನ್ನ ಕೊನೆಯ ವರ್ಷದ ಪರೀಕ್ಷೆ ಮುಗಿಸಿರುವುದರಿಂದ ಕಲ್ಕತ್ತಾ ಮುಖಾಂತರ ಕೊಹಿಮಾ ಸೇರಿಕೊಳ್ಳಲಿದ್ದಾಳೆ. ಸುಮಾರು ಒಂದು ತಿಂಗಳಿಂದ ಮನೆಯಲ್ಲೇ ಉಳಿದುಕೊಂಡಿರುವ ಹೀರೋ ಗಡ್ಡವನ್ನು ಬೆಳೆಸಿಕೊಂಡು, ಉಡುಪನ್ನು ವಿಚಿತ್ರವಾಗಿ ಬದಲಿಸಿಕೊಂಡಿದ್ದಾನೆ.

ಕಪ್ಪು ಕನ್ನಡಕದ ಬದಲಿಗೆ ಕಂದು ಬಣ್ಣದ ದಪ್ಪ ಫ್ರೇಮಿರುವ ಕನ್ನಡಕ ಧರಿಸಿಕೊಂಡಿದ್ದಾನೆ.

ಮುಖ್ಯವಾಗಿ ತಾನು ನಡೆಸುತ್ತಿದ್ದ ಕಾರನ್ನು ದರ್ಶನಾ ನೋಡಿದ ಮೇಲೆ ಬಿಡಿಬಿಡಿಯಾಗಿ ಮಾಡಿ ಮೂಲೆಗೊಂದು ತುಂಡನ್ನು ಬಿಸಾಕಿದ್ದಾನೆ.

ದರ್ಶನಾ ಗುರುತಿಸಿದ ಕಾರಿನ ಸಂಖ್ಯೆಯನ್ನು ನೋಂದಣಿ ಮತ್ತು ಜಾಗದ ಬಗ್ಗೆ ಕೆದಕುತ್ತಾ ಹೋದ ಪೊಲೀಸ್ ಅಧಿಕಾರಿಗಳು ಕೊನೆಗೂ ಕಾರಿನ ಸಂಖ್ಯೆ ಮುಂಬಯಿಯಲ್ಲಿ ಮೊದಲು ನೋಂದಣಿಯಾಗಿದ್ದನ್ನು ತಿಳಿದುಕೊಳ್ಳುತ್ತಾರೆ ಮುಂಬಯಿ ಪೊಲೀಸರ ಸಹಾಯದಿಂದ. ಆದರೆ ಕಾರಿನ ಒಡೆಯರು ಕೂಡ ಸುಳ್ಳು ವಿಳಾಸದವರೆ ಎಂದು ತಿಳಿಯುತ್ತದೆ.

ಪೊಲೀಸರ ಒಂದು ಗುಮಾನಿಯ ಪ್ರಕಾರ ಬೆಂಗಳೂರಿನಲ್ಲೇ ಕಾರು

ಓಡುತ್ತಿದ್ದು, ಆ ಆಗಂತಕನು ಯಾವುದೋ ಒಂದು ಸುಳ್ಳು ಸಂಖ್ಯೆಯನ್ನು ಉಪಯೋಗಿಸುತ್ತಿದ್ದಾನೆಂದು ನಂಬಲಾಗುತ್ತದೆ.

ವಿಮಾನ ನಿಲ್ದಾಣದಲ್ಲಿರುವ ಸ್ಪೀಕರ್‌ಗಳಲ್ಲಿ, ವಿಮಾನ ಐಸಿ–೨೭೨ ಹೊರಡಲಿದೆಯಾದ್ದರಿಂದ ಎಲ್ಲಾ ಪ್ರಯಾಣಿಕರೂ ವಿಮಾನವನ್ನು ಸೇರಿಕೊಳ್ಳುವಂತೆ ತಿಳಿಸಲಾಯಿತು. ಬ್ಯೂಲೀನಾ ಕೈಯಲ್ಲಿ ಒಂದು ವ್ಯಾನಿಟಿ ಚೀಲ ಮತ್ತು ಮಿಲ್ಟನ್ ಕೂಲ್‌ರೈಡರ್ ಮಾತ್ರ ಉಳಿಸಿಕೊಂಡಿದ್ದು, ಮಿಕ್ಕ ಸಾಮಾನುಗಳು ಈಗಾಗಲೇ ವಿಮಾನದ ಹೊಟ್ಟೆ ಸೇರಿಕೊಂಡಿವೆ.

ಬ್ಯೂಲೀನಾ ಕಣ್ಣುಗಳ ತುಂಬಾ ಅವನನ್ನು ತುಂಬಿಕೊಂಡಳು. ಅವನೂ ಅವಳನ್ನು ಕಣ್ಣುಗಳ ತುಂಬಾ ತುಂಬಿಕೊಂಡ. ಒಬ್ಬರನ್ನೊಬ್ಬರು ಹಗುರವಾಗಿ ಆಲಂಗಿಸಿಕೊಂಡರು. ಕೊನೆಯ ಛಾನ್ಸ್ ಎಂಬಂತೆ ಹೀರೋ ತುಟಿಗಳನ್ನೊಮ್ಮೆ ಮೃದುವಾಗಿ ಒತ್ತಿಸಿಕೊಂಡ ಬ್ಯೂಲೀನಾ "ನನ್ನ ವಿಳಾಸ ನಿನ್ನಲ್ಲಿದೆ, ಸಾಧ್ಯವಾದರೆ ಒಮ್ಮೆ ನಾನಿರುವ ಹಿಲ್ಸ್‌ಗೆ (ಕೊಹಿಮಾ) ಕಂಡಿತಾ ಬಾ. ನಾನು ಮತ್ತೆ ಬೆಂಗಳೂರಿಗೆ ಬರುತ್ತೇನೋ ಇಲ್ಲವೋ ಗೊತ್ತಿಲ್ಲ. ಬೈ... ಬೈ..." ಗಾಳಿಯಲ್ಲಿ ಕೈ ಬೀಸುತ್ತಾ ನೀರಿನ ಬಾಟಲ್ ತೆಗೆದುಕೊಂಡು ವಿಮಾನದ ಕಡೆಗೆ ನಡೆಯುತ್ತಾ ಹೋದಳು.

ಹೀರೋ ಹಿಂದಿನಿಂದ ಅವಳನ್ನೇ ನೋಡುತ್ತಾ ನಿಂತ. ಅವಳ ನಗ್ನ ದೇಹದ ಒಂದೊಂದು ಅಂಗವೂ ಅವನ ಮುಂದೆ ಎದ್ದು ಕುಣಿದಾಡಿದ್ದವು. ಅವರಿಬ್ಬರ ಮಧ್ಯದ ಸರಿಯಾದ ಅನುಭವಗಳನ್ನೊತ್ತ ವಿಮಾನ ಆಕಾಶದಲ್ಲಿ ನೆನಪಿನ ಬಿಂದುಗಳನ್ನು ಮೂಡಿಸುತ್ತಾ ಸಾಗುತ್ತಿದೆ. ಕೆಳಗೆ ಒಂದು ಮೂಲೆಯಲ್ಲಿ ನಿಂತು ಆಕಾಶದಲ್ಲಿ ಸಾಗುವ ವಿಮಾನ ಕಾಣುವವರಿಗೂ ನೋಡಿ, ಕಾರಿನ ಕಡೆಗೆ ನಡೆಯತೊಡಗಿದ. "ಕಾಳಿದಾಸನ ಮೇಘಸಂದೇಶ" ಹೀರೋ ಜ್ಞಾಪಕಕ್ಕೆ ಬರದೇ ಇರಲಿಲ್ಲ.



ಆ ಸಂಜೆಯ ಸೂರ್ಯ ನಾನು ಹೋದ ಮೇಲೆ ನನ್ನ ಕೆಲಸ ಯಾರು ವಹಿಸಿಕೊಳ್ಳುತ್ತಾರೆ ಎಂದು ಕೇಳುತ್ತಾನೆ. ಯಾರೂ ಮಾತನಾಡುವುದಿಲ್ಲ. ಕೊನೆಗೆ ಮಿಣುಕು ಹುಳುವೊಂದು ನಾನು ವಹಿಸಿಕೊಳ್ಳುತ್ತೇನೆ ಎನ್ನುತ್ತದೆ.

ರವೀಂದ್ರರ ಒಂದು ಕವನ ಓದುತ್ತಿದ್ದಾನೆ ಪವನ್, ಒಳಗೆ ಬಂದ ಪ್ರಾಚಿ ಪಕ್ಕದಲ್ಲಿ ಕುಳಿತುಕೊಳ್ಳುತ್ತಾಳೆ. ಪವನ್ ಪುಸ್ತಕ ಮುಚ್ಚಿ ಪ್ರಾಚಿಯ ಕಡೆ ನೋಡಿದ. ಒಂದು ರೀತಿಯ ಬಣ್ಣಬಣ್ಣದ ಹೂವುಗಳ ದೊಗಳೆ ಚೂಡಿದಾರ್ ಧರಿಸಿದ ಪ್ರಾಚಿ ಆ ಉಡುಪಿನ ಒಳಗಡೆಯೇ ಹೂವಿನಂತೆ ಅರಳಿಕೊಂಡಿದ್ದಾಳೆ.

ಚೆಲುವು ನೋಡುವವರ ಕಣ್ಣುಗಳಲ್ಲಿ ಇರುತ್ತದಂತೆ. ಪ್ರಾಚಿ ಪವನ್‌ನ ಕಣ್ಣುಗಳಿಗೆ ಅದ್ಭುತವಾಗಿ ಕಾಣುತ್ತಿದ್ದಾಳೆ. ಆ ಉಡುಪಿನ ಒಳಗೆ ಅಡಗಿರುವ ಸಂಖ್ಯೆಗಳು ಎಂತಹವರನ್ನೂ ಒಮ್ಮೆ ಮತ್ತೊಮ್ಮೆ ನೋಡುವಂತೆ ಪ್ರೇರೇಪಿಸುವ ಲಕ್ಷಣಗಳುಳ್ಳ ಸಂಖ್ಯೆಗಳು. ಪವನ್ ಮೃದುವಾಗಿ ತಬ್ಬಿಕೊಂಡು ತೊಡೆಗಳ ಮೇಲೆ ಕೂರಿಸಿಕೊಂಡ. ಪ್ರಾಚಿ ಮಗುವಿನಂತೆ ತಬ್ಬಿಕೊಂಡು ಯಾವ ರೀತಿಯ ಸಂಕೋಚವೂ ಇಲ್ಲದೆ ಕುಳಿತುಕೊಂಡಳು. ಪವನ್ ಇನ್ನಷ್ಟು ಸರಳವಾಗಿ ಹತ್ತಿರಕ್ಕೆ ಮುಖವಿಟ್ಟು ಒಮ್ಮೆ ಚುಂಬಿಸಿದ.

'ಹೆಣ್ಣು ಗಂಡನ ಎದುರಿಗೆ ವಿಧ ವಿಧವಾಗಿ ಶೃಂಗಾರ ಮಾಡಿಕೊಂಡು, ಚಿತ್ರವಿಚಿತ್ರವಾದ ಉಡುಪುಗಳನ್ನು ತೊಟ್ಟು ಭಿನ್ನಭಿನ್ನವಾಗಿ ಕಾಣಿಸಿಕೊಳ್ಳಬೇಕು' ಈ ವಿಷಯ ಪ್ರಾಚಿಗೆ ಚೆನ್ನಾಗಿ ಗೊತ್ತಿದೆ. ಮೈಮೇಲೆಲ್ಲಾ ಕೈಗಲಾಡಿಸಿದ ಪವನ್ ಪ್ರಾಚಿಯ ಒಳಗಿರುವ ಆಸೆಗಳನ್ನು ಹೊರಕ್ಕೆ ಹೊಮ್ಮಿಸಿದ. ತುಸು ಉದ್ರೇಕಗೊಂಡ ಪ್ರಾಚಿ ನಿಮ್ಮನ್ನು ಸ್ಪರ್ಶಿಸುವುದೇ ತಪ್ಪೆಂದು ಪವನ್ ಹಿಡಿತದಿಂದ ತಪ್ಪಿಸಿಕೊಂಡು ಪಕ್ಕದಲ್ಲಿದ್ದ ಕುರ್ಚಿಯ ಮೇಲೆ ಕುಳಿತುಕೊಂಡಳು. ಪವನ್ ತನ್ನ ಆಸೆಯನ್ನು ತಡೆದುಕೊಳ್ಳಲಾರದೆ ಅವಳ ಹಿಂದೆಯೇ ಎದ್ದೋದ. ಆದರೆ ಪ್ರಾಚಿಯ ಮುಖ ಬಾಡುತ್ತಾ ಹೋಗುತ್ತಿತ್ತು. ಪವನ್ ಪ್ರಾಚಿಯನ್ನು ವಿನಮ್ರವಾಗಿ ಪ್ರೇರೇಪಿಸಿದಂತೆ, ಪ್ರಾಚಿ ಹೇಳಿದಳು.

"ಎಲ್ಲಾ ಸರಿ, ಆದರೆ ನನಗೆ ಫೋನ್ ಬರುವುದನ್ನು ಮಾತ್ರ ಸಹಿಸಲಾರೆ."

ಪವನ್ ಈಗ ನಿಜವಾಗಿಯೂ ಪ್ರಾಚಿಯನ್ನು ಸಮಾಧಾನ ಪಡಿಸುವುದರ ಬಗ್ಗೆ ಸ್ವಲ್ಪ ತಲೆ ಕೆಡಿಸಿಕೊಂಡವನಂತೆ ಅರೆಕ್ಷಣ ಸುಮ್ಮನೆ ಅವಳ ಕಡೆಯೇ ನೋಡತೊಡಗಿ, "ಮತ್ತೆ ಅವನು ನಿನಗೆ ಫೋನ್ ಮಾಡುವುದಿಲ್ಲ ಬಿಡು, ನೀನು ಅವನ ಬಗ್ಗೆ ತಲೆ ಕೆಡಿಸಿಕೊಳ್ಳಬೇಡ, ಅವನು ನಿನಗೆ ಫೋನ್ ಮಾಡದಿದ್ದರೂ ಈಗ ಸಿಕ್ಕಿಬೀಳುತ್ತಾನೆ. ಅವನ ಮಾತುಗಳು ಈಗಾಗಲೇ ದೂರವಾಣಿ ಮತ್ತು ಪೊಲೀಸ್ ವಿಭಾಗದಲ್ಲಿವೆ. ಯಾರಾದರೂ ಅವನನ್ನು ಪತ್ತೆ ಹಚ್ಚೆ ಹಚ್ಚುತ್ತಾರೆ" ಎಂದ.

"ನನಗೇಕೋ ಭಯವಾಗುತ್ತೆ" ಪ್ರಾಚಿ ತನ್ನ ಸೌಂದರ್ಯವನ್ನೆಲ್ಲ ಕಳೆದುಕೊಂಡವಳಂತೆ ಹೇಳಿದಳು. ಪವನ್‌ಗೆ ಸ್ವಲ್ಪ ನೋವಾಯಿತು.

ಇತ್ತೀಚೆಗೆ ಕೆಲವು ಸಣ್ಣ ಕಂಪನಿಗಳು ಜಾಹೀರಾತಿಗಾಗಿ ಪ್ರಾಚಿಯನ್ನು ಸಂದಿಸಿದ್ದರು. ಪ್ರಾಚಿ ಅರೆ ಮನಸ್ಸಿನಿಂದ ತಿರಸ್ಕರಿಸಿದ್ದಳು. ದೊಡ್ಡದಾಗಿ ಒಮ್ಮೆಲೆ ಒಳ್ಳೆ ಕಂಪನಿಯ ಮಾಡಲ್ ಆಗಿಯೋ, ಸಣ್ಣ ಪರದೆಗೋ ಅಥವ ಬೆಳ್ಳಿ ಪರದೆಗೋ ಅವಕಾಶ ಸಿಕ್ಕರೆ ಒಂದು ಕೈ ನೋಡೇ ತೀರಬೇಕೆನ್ನುವ ಹಂಬಲವನ್ನು ಹೊಂದಿದ್ದಳು.

ಆದರೆ ಅವಳಿಗೆ ಬರುವ ಅಜ್ಞಾತ ಫೋನ್ ಅವಳನ್ನು ಎಲ್ಲಾ ರೀತಿಯಲ್ಲೂ ಅಸ್ತವ್ಯಸ್ತ ಮಾಡಿಬಿಟ್ಟಿದೆ.

"ಪ್ರಾಚಿ ನೀನೇಕೋ ಈ ದಿನ ಜಾಸ್ತಿಯ ತಲೆ ಕಡಿಸಿಕೊಂಡಿದ್ದೀಯ, ಹೊರಗಡೆ ಎಲ್ಲಿಯಾದರೂ ಸುತ್ತಿಬರೋಣ ತಯಾರಾಗು."

"ಎಲ್ಲಿಗೆ?"

"ರಂಗಶಂಕರ ಮಂದಿರದಲ್ಲಿ ನಾಟಕವಿದ್ದರೆ ನೋಡೋಣ, ಇಲ್ಲದಿದ್ದರೆ ಯಾವುದಾದರೂ ಹೋಟೆಲ್‌ನಲ್ಲಿ ಊಟ ಮಾಡೋಣ. ನಿನಗೆ ಬೇರೆ ಎಲ್ಲಿಯಾದರೂ ಹೋಗುವ ಐಡಿಯಾ ಇದ್ದರೂ ಸರಿ."

ಪ್ರಾಚಿಗೂ ಅವನ ಮಾತು ಸರಿ ಎನಿಸಿ ಎದ್ದು ತಯಾರಾಗತೊಡಗಿದಳು. ಹತ್ತಿರ ಬಂದ ಪವನ್ ಅರೆನಗ್ನಳಾಗಿದ್ದ ಪ್ರಾಚಿಯನ್ನು ತನ್ನ ಬಾಹುಗಳಲ್ಲಿ ತುಂಬಿಕೊಂಡು ಹಗುರವಾಗಿ ಅಪ್ಪಿಕೊಂಡು "ಪ್ರಾಚಿ ನೀನು ಯಾವಾಗಲೂ ನಗುತ್ತಿರುವುದನ್ನೇ ನೋಡ ಬಯಸುತ್ತೇನೆ. ನಿನ್ನ ಸೌಂದರ್ಯದಲ್ಲಿ ವಿಷಾದಕ್ಕೆ ಸ್ಥಳವಿರಬಾರದು."

"ಪವನ್ ನನ್ನನ್ನು ಕ್ಷಮಿಸು" ಎನ್ನುತ್ತಾ ಜೋರಾಗಿ ಅವನ ಕೆನ್ನಗೊಂದು ಮುತ್ತುಕೊಟ್ಟು ನಗುತ್ತಾ ಪಕ್ಕಕ್ಕೆ ನಡೆದಳು. ಒಮ್ಮೆಲೇ ಪುಳಕಗೊಂಡ ಪವನ್ ಪ್ರಾಚಿಯ ಹಿಂದೆಯೇ ನಡೆದ.

"ಅದಕ್ಕೆ ನಾನು" ಎನ್ನುತ್ತಾ ಅವನಿಂದ ತಪ್ಪಿಸಿಕೊಂಡು ಬಟ್ಟೆ ಬದಲಿಸಿ ತಯಾರಾದಳು, ಪವನ್ ಪ್ರಾಚಿಯ ಕಡೆಗೆಯೇ ನೋಡುತ್ತಾ ತಯಾರಾದ.

ಪ್ರಾಚಿ "ಸೆಕ್ಸ್ ಎಂದರೆ ಹೆಣ್ಣೋ ಗಂಡೊ?"

"ಹೆಣ್ಣು-ಗಂಡು ಸೇರಿದಾಗಲೇ ಸೆಕ್ಸ್ ಆಗುವುದು"

"ಸೆಕ್ಸಿಯಸ್ಟ್ ಮನುಷ್ಯ ಯಾರು?"

ಒಂದು ಕ್ಷಣದಲ್ಲೆ ಉತ್ತರ ಕಂಡುಕೊಂಡ ಪ್ರಾಚಿ ಪವನ್ ಕಡೆಗೊಮ್ಮೆ ನೋಟ ಬೀರಿ "ನೀವೇ" ಎಂದಳು. ಆ ನಗುವಿನಲ್ಲಿ ಒಂದು ಹೊಸತನ ಕಂಡ ಪವನ್ "ಹಾಗಾದರೆ ಸೆಕ್ಸಿಯಸ್ಟ್ ಮನುಷ್ಯನ ಬಗ್ಗೆ ಡೆಫಿನಿಶನ್ ಹೇಳುವುದಿಲ್ಲ" ಎಂದ.

"ಯಾಕೆ?"

ಹೊಳೆಯುವ ಕಣ್ಣುಗಳಲ್ಲಿ ಪ್ರಶ್ನೆಗಳನ್ನು ಸೃಷ್ಟಿಸಿಕೊಂಡ ಪ್ರಾಚಿ ಸೆಕ್ಸಿಯಸ್ಟ್ ಮನುಷ್ಯನೆಂದರೆ ಏನೇಳಬಹುದು, ಮನದಲ್ಲೇ ಒಮ್ಮೆ ಯೋಚಿಸಿದ ಮೇಲೆ ಪ್ರಶ್ನಿಸಿದಳು.

"ಇಲ್ಲ, ನೀನು ನನ್ನ ಬಗ್ಗೆ ಹೇಳದಿದ್ದಿದ್ದರೆ ಡೆಫಿನಿಶನ್ ಹೇಳುತ್ತಿದ್ದೆ." ಇನ್ನಷ್ಟು ಕುತೂಹಲಳಾದ ಪ್ರಾಚಿ, "ಇಲ್ಲ ನೀನೇಳಲೇಬೇಕು" ಎಂದಳು. ಪ್ರಾಚಿಯನ್ನು ಸತಾಯಿಸುವುದಕ್ಕೆ ಮನಸ್ಸು ಬರದೆ ಸೆಕ್ಸಿಯಷ್ಟ್ ಮನುಷ್ಯನೆಂದರೆ "One who satisfy the greatest number of women" ಎಂದ.

ಈಗ ಪ್ರಾಚಿ ಪವನ್ ಹಾಸ್ಯಕ್ಕೆ ತೆರೆ ತೆರೆಯಾಗಿ ಮನಬಿಚ್ಚಿ ನಗುವುದರ ಜೊತೆಗೆ ಕಣ್ಣುಗಳನ್ನು ಸಣ್ಣದಾಗಿ ಮಾಡಿಕೊಂಡು ಸಂದೇಹದಿಂದ ಒಮ್ಮೆ ನೋಡಿದಳು. ಅವಳಲ್ಲಿ ಬೆಳಿಗ್ಗೆಯಿಂದ ತುಂಬಿಕೊಂಡಿದ್ದ ದುಗುಡವೆಲ್ಲ ಹಾರಿಹೋಗಿತ್ತು. ಇಬ್ಬರೂ ಹೊರಗಡೆಗೆ ನಡೆಯತೊಡಗಿದರು.



ಶಾಲಿನಿ ಕೊಟ್ಟಿರುವ ಕ್ಯಾಸೆಟ್ಟನ್ನು ಎರಡು ಮುರು ದಿನಗಳು ಬೇರೆ ಬೇರೆ ಟೇಪ್ ರೆಕಾರ್ಡ್‌ಗಳಲ್ಲಿ ವಾಲ್ಯೂಮ್ ಹೆಚ್ಚಿಸಿ, ಕಮ್ಮಿ ಮಾಡಿ ವಿಧವಿಧವಾಗಿ ಕೇಳತೊಡಗಿದರೂ, ಕ್ಯಾಸೆಟ್‌ನಿಂದ ಒಂದು ಪದವೂ ಹೊರಡಲಿಲ್ಲ. ಅತಿ ಆನಂದದಿಂದ ತನ್ನ ಅಂತರಂಗದ ಭಾವನೆಯನ್ನು ಕ್ಯಾಸೆಟ್ ಮುಖಾಂತರ ತಿಳಿಸಿರಬೇಕೆಂದು ನಂಬಿದ್ದ ವಿನೋದ್ ಹೆಚ್ಚಾಗಿಯೇ ಅಪ್‌ಸೆಟ್ ಆಗಿಬಿಟ್ಟಿದ್ದ.

ಇದಕ್ಕಿನ್ನ ಹೆಚ್ಚೆಂದರೆ ಶಾಲಿನಿಯ ಮನೆಗೋಗಿ "ಈ ಕ್ಯಾಸೆಟ್‌ನಲ್ಲಿ ಏನೂ ಇಲ್ಲವಲ್ಲ" ಎಂದಾಗ ಇನ್ನೊಂದು ಅಪಘಾತ ಕಾದಿತ್ತು.

"ಹೌದು ಅದರಲ್ಲಿ ಏನೂ ಇಲ್ಲ, ನೀವು ನಿಮ್ಮ ಭಾವನೆಗಳನ್ನು ಈ ಕ್ಯಾಸೆಟ್‌ನಲ್ಲಿ ತುಂಬಿ ತರುತ್ತೀರೆಂದೇ ನಿಮಗೆ ಶಾಲಿನಿ ಈ ಕ್ಯಾಸೆಟ್ ಕೊಟ್ಟಿದ್ದು." ಶಾಲಿನಿ ಎಂಬ ಹೆಸರೇ ಈಗ ಅವನನ್ನು ತಿವಿದಂತಿತ್ತು. "ಬಹಳ ಸಂಕೋಚ ಸ್ವಭಾವದ ನೀವು ಮನಸ್ಸಿನಲ್ಲಿರುವುದನ್ನು ಹೆಣ್ಣಿನ ಮುಂದೆ ಅದೂ ನನ್ನಂತಹ ಗಯ್ಯಾಳಿಯ ಮುಂದೆ ಹೇಳುವುದಕ್ಕಾದರೂ ಆಗುತ್ತದೆಯೆ?"

ಅವಳ ಕೊಂಕು ಮಾತುಗಳು, ಆ ನಗು, ಅವನನ್ನು ಇನ್ನಷ್ಟು ಬೆರಗಾಗಿಸಿಬಿಟ್ಟಿದ್ದವು. ಅವಳ ಮಾತುಗಳು, ಅವಳ ನಗು ಅವನನ್ನು ನಿಂತಕಡೆ ನಿಲ್ಲಿಸದೇ ಕುಳಿತ ಕಡೆ ಕೂರಿಸದೇ ಮಾಡಿಬಿಟ್ಟಿದ್ದವು. ಈ ಮಾತುಗಳನ್ನು ಬೇರೆ ಯಾರ ಜೊತೆಯೂ ಹೇಳಲಾಗದೆ ಕಪ್ಪೆಯನ್ನು ನುಂಗಿದ ಹಾವಿನಂತಾಗಿದ್ದ.



ಬೆಳಿಗ್ಗೆ ಕಚೇರಿಯಲ್ಲಿ ಕುಳಿತಿರುವ ಪವನ್ ೪೫x೪೫ ಸೆ.ಮೀ. ಚೌಕಟ್ಟಿನಲ್ಲಿರುವ

ಭಾರತದ ರಿಲೀಫ್ ನಕ್ಷೆಯನ್ನು ತದೇಕಚಿತ್ತನಾಗಿ ನೋಡುತ್ತಿದ್ದಾನೆ. ಭಾರತದ ಭೂಪಟಕ್ಕೊಂದು ಪರಿಪೂರ್ಣವಾದ ಲಕ್ಷಣವಿದೆ. ನೋಡುತ್ತಾ ಹೋದಷ್ಟೂ ನೋಡಬೇಕೆನ್ನುವ ಹಂಬಲ ಮನದಲ್ಲಿ ತುಂಬಿಕೊಳ್ಳುತ್ತದೆ. ಪರ್ಯಾಯ ದ್ವೀಪದ ಮೂರು ಕಡೆಯೂ ಹಬ್ಬಿಕೊಂಡಿರುವ ವಿಶಾಲಸಾಗರ, ಅಗತ್ಯದ ಹಸಿರು ಬಣ್ಣಗಳ ತುಂಬಿಕೊಂಡಿರುವ ೨೯,೮೯೨ ಅಡಿಗಳ ಎತ್ತರದ ಎವ್ಹರೆಸ್ಟ್ ಶಿಖರ, ಭೂರೇಖೆಗಳ ಮಧ್ಯ ಎದ್ದು ಕಾಣುತ್ತದೆ.

ಎವ್ಹರೆಸ್ಟ್ ಶಿಖರವೆಂದ ತಕ್ಷಣ ನಮ್ಮ ತೇನ್‌ಸಿಂಗ್ ಜ್ಞಾಪಕಕ್ಕೆ ಬಂದುಬಿಡುತ್ತಾನೆ. ಪರ್ವತಗಳೇ ನನ್ನ ಉಸಿರಾಟ' ಎಂದ ಅವನು ಎವ್ಹರೆಸ್ಟ್ ಹತ್ತಿದ್ದು ಒಂದು ಪವಾಡವೇ ಸರಿ.

ಅದೇ ಸಮಯಕ್ಕೆ ಮಿಸ್ ರುಚಿ 'ಕ್ಷಮಿಸಿ' ಎನ್ನುತ್ತಾ ಬಾಗಿಲನ್ನು ತಳ್ಳಿಕೊಂಡು ಒಳಕ್ಕೆ ಪ್ರವೇಶಿಸಿದಳು. "ಭಾರತದ ಭೂಪಟವನ್ನು ನೋಡಿದಾಗೆಲ್ಲ ನನಗೆ ಹಿಮಾಲಯದ ಪರ್ವತಶ್ರೇಣಿಗಳು ಎದ್ದು ಕಾಣುತ್ತವೆ, ಅವುಗಳಲ್ಲಿ ಏನೋ ಅದ್ಭುತ ಸೌಂದರ್ಯ ತುಂಬಿಕೊಂಡಿದೆ ಎನಿಸುತ್ತದೆ" ಪವನ್ ಹೇಳಿದ.

ತುಸು ಬೆರಗಾದ ರುಚಿ ತೀಕ್ಷ್ಣವಾಗಿ ಒಮ್ಮೆ ಪವನ್ ಕಡೆ ನೋಡಿ ತನ್ನ ಎದೆಯ ಮೇಲಿದ್ದ ಸೆರಗನ್ನು ಎಳೆದುಕೊಂಡಳು.

ಓ ಎಲ್ಲೋ ಏನೋ ಮುರಿದುಕೊಂಡಂತಹ ಅನುಭವವಾದ ಪವನ್ 'ಕ್ಷಮಿಸಿ' ಎಂದು ತನ್ನ ಮುಂದೆ ಇದ್ದ ಭಾರತದ ಭೂಪಟ ಚೌಕಟ್ಟನ್ನು ರುಚಿಗೆ ಕೊಟ್ಟ ರುಚಿ ತೆಗೆದುಕೊಂಡು ನೋಡಿ "ಬಹಳ ಚೆನ್ನಾಗಿದೆ" ಎಂದಳು. ಆ ಮಾತು ಸ್ವಲ್ಪ ಮೆಚ್ಚಿಗೆಯಾಗಿ ಕುಳಿತುಕೊಳ್ಳುವಂತೆ ಆಹ್ವಾನಿಸಿದ.

ರುಚಿ 'ವಂದನೆಗಳು' ಎನ್ನುತ್ತಾ ಎದುರಿಗೆ ಕುಳಿತುಕೊಂಡಳು. ಕರೆಗಂಟೆ ಬಾರಿಸಿದ ಪವನ್ ಎರಡು ಕಾಫಿಗಳನ್ನು ತರುವಂತೆ ಸೇವಕನಿಗೆ ಆಜ್ಞೆ ನೀಡಿದ.

ಹುಡುಗ ಒಳ್ಳೆ ಮೂಡ್‌ನಲ್ಲಿದ್ದಾನೆ ಎಂದುಕೊಂಡಳು.

"ಮಿಸ್ ರುಚಿ, ನಿಮಗೆ ಏನೂ ಅವಸರದ ಕೆಲಸವಿಲ್ಲವೆಂದುಕೊಳ್ಳುತ್ತೇನೆ."

"ಇಲ್ಲ, ಏನೂ ಇಲ್ಲ."

"ಹಾಗಾದರೆ ಸ್ವಲ್ಪ ಸಮಯ ಮಾತನಾಡಿಕೊಳ್ಳೋಣ"

"ಆಗಬಹುದು"

"ಆದರೆ... ಆದರೆ?"

"ನನ್ನ ಸಂದರ್ಶನದಲ್ಲಿ ಕೇಳಿದಂತಹ ಪ್ರಶ್ನೆಗಳನ್ನು ಕೇಳುವುದಿಲ್ಲಾ ತಾನೆ?"

ಆ ಮಾತಿನ ಜೊತೆಗೆ ಸ್ವಲ್ಪ ಸಲಿಗೆ ತೆಗೆದುಕೊಂಡಿದ್ದಾಗಿ, ಅವಳ ಒಳಮನ ಹೇಳುತ್ತಿತ್ತು. ಪವನ್ ಸಣ್ಣದಾಗಿ ತುಟಿಗಳನ್ನು ಬಿರಿಯದೆ ನಕ್ಕ.

"ಪ್ರಶ್ನೆಗಳನ್ನೇ ಕೇಳಬೇಕೆಂದಿದ್ದೆ, ಕೇಳುವ ಮುಂಚೆಯೇ ಪೂರ್ಣವಿರಾಮ ಇಟ್ಟುಬಿಟ್ಟಿರಿ" ಎಂದ. ಇಬ್ಬರ ನಗುವು ಒಂದಾಗಿ ಆಲಿಂಗನಗೊಂಡಿತು ಆ ಕೋಣೆಯಲ್ಲಿ.

"ಮಿಸ್ ರುಚಿ ನಿಮಗೆ ಯಾರೋ ಒಬ್ಬರು ಅಂದರೆ ನಿಮ್ಮ ಬಗ್ಗೆ ಅವರಿಗೆ ಚೆನ್ನಾಗಿ ತಿಳಿದಿದ್ದು, ನಿಮಗೆ ಅವರ ಬಗ್ಗೆ ಏನೂ ತಿಳಿಯದೇ ಇರಬಹುದೆಂದುಕೊಳ್ಳೋಣ. ಅಂತಹವರು ನಿಮಗೆ ಫೋನ್ ಮುಖಾಂತರ ನಿಮ್ಮನ್ನು ಒಂದು ರೀತಿಯಲ್ಲಿ ಮೆಚ್ಚುಸುವಂತೆ 'ಐ ಮೀನ್' ಇಷ್ಟಪಡುವಂತೆ ಮಾತನಾಡಿಸುತ್ತಾರೆ ಅವರ ಮಾತುಗಳಿಂದಲೇ ನೀವು ಕೂಡ ಆಕರ್ಷಣೆಗೊಳ್ಳುತ್ತೀರಿ ಎಂದುಕೊಳ್ಳೋಣ" ಅನ್ನುವಷ್ಟರಲ್ಲಿ.

"ಅಂದರೆ ಫೋನ್ ಮಾಡಿದ್ದು – ಗಂಡಸಿಗೆ ತಾನೆ?" ರುಚಿ ಗೊತ್ತಿರುವ ಉತ್ತರವಾದರೂ ಪ್ರಶ್ನಿಸುತ್ತಾಳೆ. "ಹೌದು. ಹೆಣ್ಣು ಗಂಡಿಸಿಗೆ ಫೋನ್ ಮಾಡುತ್ತಾಳೆ." ಪವನ್ ಹೇಳಿದ.

"ಇಲ್ಲಿ, ಹೆಣ್ಣು ಗಂಡಸಿಗೆ ಫೋನ್ ಮಾಡಿರುವುದರಿಂದ ಒಂದು ರೀತಿಯಲ್ಲಿ ಕುತೂಹಲ ಫ್ಯಾಂಟಸಿಯಾಗಿದೆ. ಅದೇ ಗಂಡಸು ಹೆಣ್ಣಿಗೆ ಫೋನ್ ಮಾಡಿದ್ದರೆ ಅದು ಒಂದು ರೀತಿಯಲ್ಲಿ ಭಯದ ಜೊತೆಗೆ ಯೋಚಿಸುವುದಕ್ಕೆ ಅವಕಾಶವಾಗಬಹುದು."

ಪ್ರಾಚಿಯ ತಳಮಳ ಅವನಲ್ಲಿ ಥಟ್ಟನೆ ಹೊಳೆಯುತ್ತದೆ. ರುಚಿ ಹೇಳಿದ ಮಾತಿಗೆ ಒಂದು ರೀತಿಯಲ್ಲಿ ಹೆಚ್ಚೆಚ್ಚಿಗೆ ಪರಿಣಾಮ ಬೀರಿದಂತಾಗಿ "ಹೌದು ನೀನು ಸರಿಯಾಗಿಯೇ ಹೇಳಿದೆ" ಪವನ್ ಹೇಳಿದ.

ರುಚಿ ತನಗೆ ತಾನೇ ಬೆನ್ನು ತಟ್ಟಿಕೊಂಡಳು. ಅಂದರೆ ಫೋನ್ ಬರುವುದು ನಿಮಗೆ ತಾನೆ? ತುಟಿಗಳಿಗೆ ಬಂದ ಪ್ರಶ್ನೆಯನ್ನು ಒಳಕ್ಕೆ ತಳ್ಳಿದಳು. ಪವನ್ ರುಚಿಯ ಮುಖವನ್ನು ಸೂಕ್ಷ್ಮವಾಗಿ ನೋಡುತ್ತಾನೆ. ಆದರೆ ಅಲ್ಲಿ ಯಾವ ರೀತಿಯ ಬದಲಾವಣೆಯೂ ಕಾಣಲಿಲ್ಲ. ತನಗೆ ಬರುವ ಫೋನ್ ಹಿಂದೆ ಇವಳ ಕೈವಾಡವೇನಾದರೂ ಇರಬಹುದೆ ಎಂದುಕೊಂಡರೂ, ಅದರ ಹಿಂದೆಯೇ ಇರಲಾರದು ಫೋನ್ ಬರುವಾಗಲೆಲ್ಲ ರುಚಿ ಕಚೇರಿಯಲ್ಲೇ ಇರುತ್ತಾಳೆ, ಸುಳ್ಳು ಮಾತ್ರ ಹೇಳಲಾರಳು. ಅವಳ ಹೆಸರು ಕನ್ನಡದಲ್ಲಿ ಮೂರಕ್ಷರವಾದರೆ ಇಂಗ್ಲಿಷ್‌ನಲ್ಲಿ ಆರಕ್ಷರ, ರುಚಿಯ ಹೆಸರು ಕನ್ನಡದಲ್ಲಿ ಎರಡಕ್ಷರವಾದರೆ ಇಂಗ್ಲಿಷ್‌ನಲ್ಲಿ ಐದಕ್ಷರ ಮಾತ್ರ.

ನನ್ನೊಳಗಿರುವ ಕೆಲವು ವಿಷಯಗಳನ್ನು ಅವಳು ಹೇಳಬಲ್ಲಳೆಂದರೆ ಅವಳಲ್ಲಿರುವ ಚುರುಕುತನದ ಜೊತೆಗೆ ತುಸು ಮನಶ್ಶಾಸ್ತ್ರವನ್ನು ಅಧ್ಯಯನ ಮಾಡಿರಬಹುದೆ ವಿನಃ ಅವಳೇ ಇವಳೆಂತೂ ಅಲ್ಲ ಎಂದುಕೊಂಡ.

"ಮಿಸ್ ರುಚಿ ಫೋನ್ ಮಾಡುವವರು ಯಾವುದೋ ಕೆಲವು ನಿಬಂಧನೆಗಳಿಂದ ತನ್ನ ವಿಳಾಸ ಅಥವಾ ಪರಿಚಯವನ್ನು ಹೇಳುವುದಿಲ್ಲ ಎಂದುಕೊಳ್ಳೋಣ. ಫೋನ್ ಮುಖಾಂತರ ಹಿಡಿದುಕೊಳ್ಳಲು ಪ್ರಯತ್ನ ಪಡದೆ ಬೇರೆ ಯಾವ ರೀತಿಲ್ಲಾದರೂ ಫೋನ್ ಮಾಡುತ್ತಿರುವವರನ್ನು ಗುರುತಿಸಲು ಸಾಧ್ಯವೆ?" ಪವನ್ ಪ್ರಶ್ನಿಸಿದ.

ರುಚಿ ತನ್ನ ತೋರುಬೆರಳಿಂದ ಮೃದುವಾಗಿ ತನ್ನ ಕೆಳತುಟಿಯನ್ನು ಒತ್ತಿಕೊಂಡು ಉಪಾಯವನ್ನು ಹುಡುಕತೊಡಗಿದಳು. ಆ ಪ್ರಶ್ನೆ ಅವಳ ಸಂದರ್ಶನದಲ್ಲಿ ಪವನ್ ಕೇಳಿದ ಪ್ರಶ್ನೆಯನ್ನು ಜ್ಞಾಪಿಸಿತು. "ಸ್ವಲ್ಪ ಯೋಚಿಸಬೇಕು." ರುಚಿ ಹೇಳಿದಳು.

ಮತ್ತೆ ಫೋನ್ ಮಾಡುವವರ ವಾಯ್ಸ್ ಮೊದಲೇ ಕೇಳಿದ್ದರೆ ಗೊತ್ತಾಗುತ್ತಿತ್ತು.

"ಲೋಕಲ್ ಕಾಲ್, ಎಸ್.ಟಿ.ಡಿ ಕಾಲ್ ಮತ್ತು ವಿದೇಶಗಳಿಂದ ಬರುವ ಕಾಲ್‌ಗಳನ್ನು ಬೇಕಾದರೆ ಗುರುತಿಸಬಹುದು."

ರುಚಿಯ ಮಾತುಗಳನ್ನು ತುಂಡರಿಸಿ, "ಲೋಕಲ್ ಕಾಲ್ ಎಂದುಕೊಳ್ಳೋಣ" ಪವನ್ ಹೇಳಿದ.

ರುಚಿ ಒಂದು ರೀತಿಯಲ್ಲಿ ಕೈಗೆ ಬಂದಿದ್ದ ಪ್ರತಿಷ್ಠೆಯನ್ನು ಸಲೀಸಾಗಿ ಬಿಟ್ಟುಕೊಡಲಾರದೆ ಉಪಾಯಗಳ ಜೊತೆ ಉರುಳಾಡಿ 'ಸಾಮಾನ್ಯವಾಗಿ ಒಂದು ರೀತಿಯಲ್ಲಿ ಬಹಳ ಹತ್ತಿರವಾಗಿರುವವರೇ ಆಗಿರಬೇಕು' ಎಂದಳು.

"ಹಾಗಿದ್ದರೆ ಅವರ ವಾಯ್ಸ್ ಗೊತ್ತಿರುವುದೇ ಆಗಿರಬೇಕಲ್ಲ"

"ಹೌದು"

ತುರ್ತು ಹೇಳಿಕೆಯನ್ನು ತಪ್ಪೆಂದು ಒಪ್ಪಿಕೊಂಡಿದ್ದರ ಜೊತೆಗೆ ತನ್ನ ಸೂಕ್ಷ್ಮತೆಯನ್ನು ಕಳೆದುಕೊಂಡಂತೆ, ಗಂಭೀರವಾದಳು ಒಂದೆರಡು ಕ್ಷಣ. "ಕಾಫಿ ತಣ್ಣಗಾಗುತ್ತದೆ" ಪವನ್ ಜ್ಞಾಪಿಸಿದ. ಉಳಿದಿದ್ದ ಕಾಫಿಯನ್ನು ಮುಗಿಸಿದಳು.

"ಮಿಸ್ ರುಚಿ, ನೀವೋಗಬಹುದು. ವಂದನೆಗಳು." ರುಚಿ ಎದ್ದು ಹೊರಕ್ಕೆ ನಡೆಯತೊಡಗಿದಳು. ಹಿಂದಿನಿಂದ ಅವಳ ವೈಯ್ಯಾರವನ್ನು ಪವನ್ ಆಸ್ವಾದಿಸಿದ.

ಸಂಪೂರ್ಣವಾಗಿರುವ ಹೆಣ್ಣುಗಳ ಸಂಖ್ಯೆ ಬಹಳ ಕಮ್ಮಿ. ಕೆಲವು ಹೆಣ್ಣುಗಳಿಗೆ ಸುಂದರವಾದ ಕಾಲುಗಳಿರುತ್ತವೆ, ಮತ್ತೆ ಕೆಲವರಿಗೆ ಸೊಗಸಾದ ಸೊಂಟಗಳಿರುತ್ತವೆ, ಇನ್ನೂ ಕೆಲವರಿಗೆ ಚೆಲುವಾದ ಎದೆಗಳಿರುತ್ತವೆ ಮತ್ತೂ ಕೆಲವರಿಗೆ ಮುದ್ದಾದ ಮುಖಗಳಿರುತ್ತವೆ. ಇನ್ನು ಮುಖದಲ್ಲಿನ ಅಂಗಗಳು ಒಂದೊಂದೂ ಹೆಣ್ಣಿಗೆ ಒಂದೊಂದು ಪ್ರತ್ಯೇಕವಾದ ಸೌಂದರ್ಯವನ್ನು ತುಂಬಿರುತ್ತವೆ.

ತನ್ನ ತಾರುಣ್ಯದ ದಿನಗಳಿಂದ, ಹತ್ತಿರವಾದ ಪ್ರತಿಯೊಂದು ಹೆಣ್ಣಿನ ಬಗ್ಗೆಯೂ ನೆನಪಿಸಿಕೊಳ್ಳುತ್ತಾ ಹೋದ. ಜೊತೆಗೆ ಇತ್ತೀಚೆಗೆ ಅಲ್ಲಿ ಇಲ್ಲಿ ಭೇಟಿಯಾಗಿದ್ದ ಮುದ್ದು ರೂಪಸಿಗಳನ್ನ ಜ್ಞಾಪಿಸಿಕೊಳ್ಳುತ್ತಾ, ಅವರ ಮುದ್ದು ಸ್ವರಗಳನ್ನು ತನಗೆ ಬರುತ್ತಿರುವ ಫೋನ್ ವಾಯ್ಸ್‌ಗೆ ಹೋಲಿಸುತ್ತಾ ಹೋದ.

ರುಚಿ ತನ್ನ ಕುರ್ಚಿಯಲ್ಲಿ ಪ್ರಶ್ನೆಯಾಗಿಯೆ ಕುಳಿತುಕೊಂಡಳು. ಪವನ್ ಸಂದರ್ಶನದಲ್ಲಿ ತನಗೆ ಪ್ರಶ್ನೆಗಳನ್ನು ಕೇಳಿ ರೇಗಿಸಿದ್ದರಿಂದ ಸೇಡು ತೀರಿಸಿಕೊಳ್ಳಲು ಉಪಾಯಗಳನ್ನು ಹಾಕುತ್ತಿದ್ದಳೆ ವಿನಃ ಕಾರ್ಯ ರೂಪಕ್ಕೆ ಮಾತ್ರ ತರಲಾಗಲಿಲ್ಲ.

ಆದರೆ ತನ್ನ ಜಾಗದಲ್ಲಿ ಬೇರೆ ಯಾರೋ ಸರಿಯಾಗಿಯೇ ಆಟವಾಡಿಸುತ್ತಿದ್ದಾರೆ. ಒಂದು ರೀತಿಯಲ್ಲಿ ಅವಳ ಮನದಲ್ಲಿ ತುಸು ಹೆಣ್ಣಿಗಿರಬೇಕಾದ ಜೆಲಸಿ ತುಂಬಿಕೊಂಡು ತಾನು ಮಾಡದಿದ್ದ ಕೆಲಸವನ್ನು ಇನ್ಯಾರೋ ಮಾಡುತ್ತಿರುವುದರಿಂದ ಅವಳ್ಯಾರೋ ಎಂದು ಕಣ್ಣುಗಳನ್ನು ಸಣ್ಣದಾಗಿಸಿಕೊಳ್ಳುತ್ತಾಳೆ.



ಹುಣ್ಣಿಮೆಯ ರಾತ್ರಿ

ಪ್ರಿಯ ಪ್ರಿಯತಮೆಯಲ್ಲಿ ಉತ್ಸಾಹದ ಅಲೆಗಳು ಹೊಮ್ಮುವ ಸಮಯ. ಪ್ರಾಚಿ ತುಸು ಶೀಘ್ರವಾಗಿ ಹಾಸಿಗೆಯ ಮೇಲೆ ಮೈಚೆಲ್ಲಿದ್ದಾಳೆ. ಪವನ್ ಬಾಡಿ ಗೆಸ್ಚರ್ಸ್ ಎನ್ನುವ ಪುಸ್ತಕವನ್ನು ಮೇಜಿನ ದೀಪದಲ್ಲಿ ಓದುತ್ತಿದ್ದಾನೆ.

ಮನುಷ್ಯನ ತನಗೆ ಗೊತ್ತಿಲ್ಲದೆಯೋ ಅಥವಾ ಗೊತ್ತಿದ್ದೋ ಪ್ರದರ್ಶಿಸುವ ಭಾವನಾಭಿನಯಗಳಿಂದಲೇ ತನ್ನ ನಿಜ ಭಾವನೆಗಳನ್ನು ಹೇಗೆ ಪ್ರದರ್ಶಿಸಬಲ್ಲ ಎನ್ನುವುದನ್ನು ಆ ಗೆಸ್ಚರ್ಸ್‌ಗಳ ಮುಖಾಂತರ ತಿಳಿಸಲಾಗಿದೆ. ಒಬ್ಬ ಮನುಷ್ಯನ ನಡೆ ನುಡಿಗಳು, ಅವನ ಬೇಕು ಬೇಡಗಳು ಗೆಸ್ಚರ್ಸ್‌ಗಳ ಮುಖಾಂತರವೇ ಗೊತ್ತಾಗಿಬಿಡುತ್ತದೆ.

ಮೇಜಿನ ಮೇಲಿದ್ದ ಫೋನ್ ಕೂಗಿಕೊಳ್ಳುತ್ತದೆ. ಅದೊಂದು ವಿಚಿತ್ರವಾದ ಕರೆ.

ಪವನ್ ಒಂದೆರಡು ಕ್ಷಣಗಳಲ್ಲಿ ಬಟ್ಟೆ ಸರಿಪಡಿಸಿಕೊಂಡು ರಿಸೀವರ್ ತೆಗೆದುಕೊಂಡು ಬಟನ್ ಒತ್ತಿದ.

"ಹಲೋ... ಎಂಟು ಸಂಖ್ಯೆಗಳನ್ನೇಳಿ ಅದೇ ಸಂಖ್ಯೆ ತಾನೆ?" ಕೇಳಿದಳು.

"ಹೌದು" ಎನ್ನುವ ಮುಂಚೆಯೇ ಪವನ್ ಹಾರಿಬಿದ್ದ. ಅವನು ದಿನವೂ ಕೇಳಬಯಸುವ ಸ್ವರ. ಅವನಿಗೆ ಬಹಳ ಹತ್ತಿರವಾದ ಅವನ ಒಂದು ಅಂಗವೆನ್ನುವಂತಹ ಪ್ರಿಯವಾದ ಸ್ವರ.

"ನೀವು ಒಬ್ಬರೆ ಇದ್ದೀರೋ ಅಥವಾ..."

"ಆಫ್‌ಕೋರ್ಸ್ ಒಬ್ಬನೆ ಎಂದುಕೋ" ಹೇಳಿದ.

ತಕ್ಷಣ "ಒಂದು ನಿಮಿಷ ಹಾಗೆ ಇರು" ಎಂದೇಳಿ ರಿಸೀವರ್ ಕ್ರೆಡಲ್ ಮೇಲಿಡದೆ, ಮೇಜಿನ ಮೇಲಿಟ್ಟು ಇನ್ನೊಂದು ಕೋಣೆಯಲ್ಲಿರುವ ಪ್ಯಾರಲಲ್ ಸಂಪರ್ಕವಿರುವ ರಿಸೀವರ್ ತೆಗೆದುಕೊಂಡು "ಹಲೋ" ಎಂದ.

"ಗಂಡಾಂತರಕ್ಕೆ ಸ್ವಲ್ಪ ದುರವಾದಿರಿ" ನಗು ಆ ನಗು ಆ ರಾತ್ರಿಯನ್ನು ಕೆಣಕಿದಂತಿತ್ತು. "ಬರೀ ಹಗಲು ಮಾತ್ರ ತೊಂದರೆ ಮಾಡುತ್ತಿದ್ದೆ, ಆದರೆ ಏನು ಮಾಡುವುದು ಬೆಂಗಳೂರಿನ ರಾತ್ರಿ ನನ್ನನ್ನು ನಿದ್ದೆ ಹೋಗೊಡಲಿಲ್ಲ. ನೀನು ಹೇಗಾದರೂ ಮಾಡಿ ನನ್ನನ್ನು ಹುಡುಕಿಕೊಂಡು ಬರುತ್ತೇಯೆಂದೇ ದಿನಾ ರಾತ್ರಿ ಕಾಯುತ್ತಿದ್ದೇನೆ.

ಮುಡಿದ ಮಲ್ಲಿಗೆ ಮೊಗ್ಗುಗಳು ಆ ಚಂದ್ರನು ಈ ದಿನ ಅಷ್ಟು ದೊಡ್ಡದಾಗಿ ಏಕೆ ಉಬ್ಬಿಕೊಂಡನು. ಎಂದು ಕೇಳಿ ಕೇಳಿ ಅರಳಿಕೊಳ್ಳುತ್ತಿದೆ. ನಿನ್ನ ನಲ್ಲನೆಲ್ಲಿ ಎಂದು ನಕ್ಷತ್ರಗಳು ಕೇಳುತ್ತಿವೆ. ಕಿಟಕಿಯಲ್ಲಿ ಗಾಳಿ ಸೆರಗನ್ನು ಕಳಚುತ್ತಿದೆ. ಈ ರಾತ್ರಿ ಹೇಗಾದರೂ ಕಳೆದುಬಿಡುತ್ತೇನೆ ನೆನೆದುಕೊಂಡೆ, ರವಿಯು ಮೂಡುವ ಮೊದಲೇ ನೀ ಬರಬೇಕು. ಹೃದಯದ ಬಾಗಿಲು ನಿನಗಾಗಿ ತೆರೆದೇ ಇಟ್ಟಿದ್ದೇನೆ. ಹುಚ್ಚಿ, ವಿಳಾಸಕೊಡದೆ ಏನೇನೋ ತೊದಲುತ್ತಿದ್ದೀಯ ಎನ್ನುತೀಯಾ? ಹೌದು. ನಾನು ಒಂದು ರೀತಿಯಲ್ಲಿ ಹುಚ್ಚಿಯೇ, ನಿನಗೆ ಮದುವೆಯಾಗಿದೆ ಎಂದು ಗೊತ್ತಿದ್ದರೂ ನಿನ್ನ ಬೆನ್ನತ್ತಿದ್ದೇನೆ"

ಆ ಮಾತು ಕೇಳಿದ ತಕ್ಷಣವೇ ಪವನ್ ಕಿವಿಗಳು ನಿಮಿರಿದವು. ಇದೇ ಕಾರಣದಿಂದಲೇ ದೂರ ಇರಲು ನಿಶ್ಚಯಿಸಿರಬೇಕು ಪವನ್ ಯೋಚಿಸಿದ.

"ನಾನು ಮಾತ್ರ ಮಾತಾಡುತ್ತಲೇ ಇದ್ದೇನೆ. ನೀನೇನೋ?" ಅವಳ ಆ ಹುಸಿಕೋಪಕ್ಕೆ ಅವನ ಕೈಯಲ್ಲಿರುವ ತಂತಿ ಮಡಚಿಕೊಂಡಂತಾಗಿ "ಹೌದು, ನಾನು ಮಾತನಾಡಲಿಲ್ಲ."

"ಹ... ಇನ್ನೊಂದು ವಿಷಯ ನಾಳೆ ಸಾಯಂಕಾಲ ೧೭:೩೦ – ೧೮:೩೦ ಮಧ್ಯೆ ನೀವೆಲ್ಲಿರುತ್ತೀರ?" ಕೇಳಿದಳು. ಪವನ್ ಹೇಳಿದ. ಜೊತೆಗೆ ಅವನಿರುವಲ್ಲಿನ ಫೋನ್ ಸಂಖ್ಯೆಯೂ ಹೇಳಿದ.

"ಒಳ್ಳೆ ಹುಡುಗ ನಿಜವಾಗಿಯೂ..."

ಆ ಕಡೆಯಿಂದ ಅಪ್ರಿಶಿಯೇಶನ್ ಮಾಡಲಾಯಿತು.

ಪವನ್‌ಗೆ ಏನೂ ಮಾತನಾಡಬೇಕೋ ಗೊತ್ತಿಲ್ಲದೆ ಒಂದು ರೀತಿಯ ಗೊಂದಲದಲ್ಲಿ ಅವಳ ಧ್ವನಿಯನ್ನು ಹಾಗೆ ಕಿವಿಯಲ್ಲಿಟ್ಟುಕೊಂಡಿದ್ದಾನೆ.

"ಏನು ಯೋಚಿಸುತ್ತಿದ್ದೀರಾ?" ಬಹುವಚನದ ಮಾತು. ಬೆಚ್ಚಿಬಿದ್ದು "ಇಲ್ಲ, ನೀನು ಏಕವಚನದಲ್ಲೆ ಮಾತನಾಡು" ಪವನ್ ಹೇಳಿದ.

"ಓ... ಎಷ್ಟೊಂದು ಸಿಹಿಯಾದ ಮಾತು. ವಂದನೆಗಳು..."

"ನಾಳೆ ನೀನಿರುವ ಸ್ಥಳದಲ್ಲಿ ನಿನ್ನ ವಾಹನವು ಇರಲಿ, ಏಕೆ ಎಂದು ಪ್ರಶ್ನಿಸಬೇಡ. ಈ ದಿನ ನನಗೇಕೋ ನಾನೇ ಮಾತನಾಡಬೇಕೆನಿಸುತ್ತಿದೆ" ಎಂದಳು. ಮಧ್ಯದಲ್ಲಿಯೆ "ನಾನಂತೂ ನಿನ್ನ ಮುಖ ನೋಡಿಲ್ಲ. ನೀನಾದರೂ ನನ್ನನ್ನು ನೋಡಿದ್ದೀಯಾ" ಪವನ್ ಕೇಳಿದ.

ನಗು ರಿಸೀವರ್ ತುಂಬಿ ಹೊಮ್ಮುತ್ತಿದೆ, ಪವನ್ ಅವಳ ನಗುವನ್ನು ಹೊರಗಡೆಗೆ ಬಿಟ್ಟುಕೊಡದೆ ಒಬ್ಬನೇ ಆನಂದಿಸುತ್ತಿದ್ದಾನೆ. ಫೋನ್ ಒಮ್ಮೆ ಕಡಿದುಕೊಂಡಿತು

ಫೋನ್ ಮತ್ತೆ ರಿಂಗಾಗಿ ಪವನ್ ದಿಢೀರನೆ ತೆಗೆದುಕೊಂಡ.

"ಪ್ರೀತಿಗೆ ತಡೆದುಕೊಳ್ಳುವ ಶಕ್ತಿ ಬಹಳ ಕಮ್ಮಿ"

"ನೋಡಿದ್ದೇನೆ, ಬಹಳ ಹತ್ತಿರದಿಂದ. ಬಹಳ ಹ್ಯಾಂಡ್‌ಸಮ್ ಆಗಿದ್ದೀಯ, ಆದರೆ?"

"ಆದರೆ?"

"ಎಡಬೈತಲೆ ಬದಲಿಸಿ ಬಲಬೈತಲೆ ಬಾಚಿ ನೋಡು. ಹಾಗೆ ಮೇಲು ತುಟಿಯ ಅಂಚನ್ನು ಮುಚ್ಚಿಕೊಂಡಿರುವ ಮೀಸೆಯನ್ನು ಲಘುವಾಗಿ ಕತ್ತರಿಸು. ನೀನು ನನ್ನನ್ನು ನೋಡಿರಬೇಕು."

ಪವನ್ ಮತ್ತೊಮ್ಮೆ ಅವಳ ಮಾತುಗಳನ್ನು ಯಾವ ರೀತಿಯ ಪ್ರತಿಕ್ರಿಯೆಯೂ ತೋರಿಸದೇ ಕೇಳಿಸಿಕೊಳ್ಳುತ್ತಿದ್ದಾನೆ.

"ಮಿಸ್" ಪದವನ್ನು ಕೇಳಿದ ಆ ಕಡೆಯ ಸ್ವರ ತುಸು ದಂಗಾದಂತೆ ಅಂದರೆ ಪ್ರಶ್ನಿಸಿದಳು. ಬಡಿದುಕೊಳ್ಳುವ ಹೃದಯದ ಜೊತೆ "ನೀನು ಮಿಸ್ ಸರಿ, ಹೆಸರು ಮಾತ್ರ ಇನ್ನೂ ಗೊತ್ತಿಲ್ಲ." ಅವಳ ಹೃದಯ ಸ್ವಲ್ಪ ಸ್ವಲ್ಪವಾಗಿ ಸ್ಥಿಮಿತಕ್ಕೆ ಬರತೊಡಗಿ, "ಅಂದರೆ ನನ್ನ ಹೆಸರು ಇನ್ನೂ ಗೊತ್ತಿಲ್ಲ. ನಾಳೆ ಹೇಳುತ್ತೇನೆ" ಎಂದಳು.

"ಪವನ್" ಹಾಸಿಗೆಯಿಂದ ಪ್ರಾಚಿ ಕರೆದಳು. ಪವನ್ ರಿಸೀವರ್‌ಗೆ ಅಡ್ಡವಾಗಿ ಅಂಗೈ ಇಟ್ಟು ಉತ್ತರಿಸಿ ಮತ್ತೆ ಏನೋ ಹೇಳಲೋದ.

ಅಷ್ಟರಲ್ಲಿ ಏನೋ ತೊಂದರೆಯಲ್ಲಿ ಸಿಲುಕಿದ ಎಂದು ಕಂಡುಕೊಂಡ ಆ ಸ್ವರ "ಓಕೆ ಪವನ್, ನಾನು ನಿನ್ನನ್ನ ಪ್ರೀತಿಸುತ್ತಿದ್ದೇನೆ ಎಷ್ಟು ಗೊತ್ತೆ? ನನಗೂ ಗೊತ್ತಿಲ್ಲ, ದಿನಾ ರಾತ್ರಿ ನೀನು ನನ್ನ ಕನಸಿನಲ್ಲಿ ಬರುತ್ತೀಯಾ, ನಿನ್ನ ಕನಸಿನಲ್ಲಿ ನಾನು ಬರುತ್ತಿದ್ದೇನೆಯೇ? ನಿನಗೆ ಕನಸುಗಳು ಬರಲಿ. ಶುಭರಾತ್ರಿ" ಎಂದು ಒಂದು ಚುಂಬನ ಕೊಟ್ಟಳು. ಫೋನ್ ತನ್ನ ಉಸಿರನ್ನು ಕಳೆದುಕೊಂಡಂತಾಯಿತು. ಅವಳು ಮಾತುಗಳು ಆ ಚುಂಬನ ಎಲ್ಲವೂ ಅವನನ್ನು ಬಹಳವಾಗಿ ಕಲಕಿಬಿಟ್ಟವು. ಕಾಲುಗಳನ್ನು ಎಳೆದುಕೊಂಡು ನಡೆದ ಪವನ್ ಪಿ.ಸಿ. ಸರ್ಕಾರ್ ಎದುರಿಗೆ ಸಮ್ಮೋಹನಗೊಂಡವನಂತೆ ನೇರವಾಗಿ ಹಾಸಿಗೆಯ ಮೇಲೆ ಹೋಗಿ ಉರುಳಿಕೊಂಡ.

ನೀನು ನನ್ನನ್ನು ನೋಡಿರಬೇಕು. ನಾನು ನಿನ್ನನ್ನು ಪ್ರೀತಿಸುತ್ತಿದ್ದೇನೆ ಎಷ್ಟು ಗೊತ್ತೆ. ನನಗೂ ಗೊತ್ತಿಲ್ಲ. ನೀನು ನನ್ನ ನೋಡಿರಬೇಕು ಈ ವಾಕ್ಯ ಅವನನ್ನು ಇನ್ನಷ್ಟು ಆಳವಾಗಿ ಕಾಡಿಸುತ್ತಿದೆ. ಬೆಂಗಳೂರಿನಲ್ಲಿ ನೋಡಿರುವ ಪ್ರತಿಯೊಂದು ಮುದ್ದು ಮುಖವನ್ನು ಮೆಲುಕು ಹಾಕುತ್ತಾ ಹೋಗುತ್ತಿದ್ದಾನೆ. ಆದರೆ ಅಷ್ಟೊಂದು ಮುಖಗಳಲ್ಲಿ ಆ ಮುಖ ಯಾವುದು? ಇನ್ನೂ ಎಡಬೈತಲೆ, ಬಲಬೈತಲೆ ಮೀಸೆಗಳ ಬಗ್ಗೆ ಯೋಚಿಸುತ್ತಾ ಯೋಚಿಸುತ್ತಾ ಕತ್ತಲ ರಾತ್ರಿಯ ಒಳಕ್ಕೆ ಹೋಗಿಬಿಟ್ಟ.



ಐಸಿ–೫೧೧ ವಿಮಾನ ಬೆಂಗಳೂರಿನ ವಿಮಾನ ನಿಲ್ದಾಣದಲ್ಲಿ ಸರಿಯಾದ ಸಮಯಕ್ಕೆ ಹೊರಡಲು ರೆಕ್ಕೆಗಳನ್ನು ಬಿಚ್ಚಿ ನಿಂತುಕೊಂಡಿದೆ. ಆ ವಿಮಾನದಲ್ಲಿ ಪ್ರಯಾಣ ಮಾಡಲಿರುವ ಪ್ರಯಾಣಿಕರೆಲ್ಲಾ ರಿಪೋರ್ಟ್ ಮಾಡಿಕೊಂಡು ವಿಶ್ರಾಮ ಪಡೆಯುತ್ತಿದ್ದಾರೆ. ಅವರ ಮುಖ್ಯವಾದ ಸಾಮಾನುಗಳನ್ನು ನಿಲ್ದಾಣದ ಕೂಲಿಗಳು ವಿಮಾನದ ಹೊಟ್ಟೆಯೊಳಕ್ಕೆ ತುಂಬುತ್ತಿದ್ದಾರೆ. ಅಗತ್ಯವಾದ ಕೆಲವು ಸಣ್ಣಪುಟ್ಟ ವಸ್ತುಗಳನ್ನು ಮಾತ್ರ ತಮ್ಮಲ್ಲಿ ಉಳಿಸಿಕೊಂಡಿರುವ ಪ್ರಯಾಣಿಕರು ತಮ್ಮ ತಮ್ಮ

ಡೆಸ್ಟಿನೇಶನ್ ಸೇರಿಕೊಳ್ಳಲು ಶಿಖರಗಳ ಮೇಲಿನ ಮೋಡಗಳಂತೆ ತುದಿಗಾಲುಗಳಲ್ಲೇ ನಿಂತಿದ್ದಾರೆ.

ಆ ವಿಮಾನದ ಮುಖಾಂತರ ಮುಂಬಯಿ ತಲುಪಿ ಅಲ್ಲಿಂದ ಮತ್ತೆ ಪಶ್ಚಿಮ ದೇಶಗಳಿಗೆ ಹೊರಡುವ ಅನೇಕ ಪ್ರಯಾಣಿಕರು ಅವರಲ್ಲಿದ್ದಾರೆ. ಹೆಣ್ಣು-ಗಂಡು, ಪ್ರೀತಿ, ಸೌಂದರ್ಯ, ಜ್ಞಾನ, ಐಶ್ವರ್ಯ ಎಲ್ಲವೂ ಅವರ ಸುತ್ತ ತುಂಬಿ ತುಳುಕುತ್ತಿದೆ.

ಇವರ ಮಧ್ಯದಲ್ಲಿರುವ ಒಂದು ಸೌಂದರ್ಯ ಗೊಂಚಲು ತನ್ನ ಕೈ ಗಡಿಯಾರದ ಕಡೆಗೆ ನೋಡಿಕೊಳ್ಳುತ್ತಾ ಬೆಂಗಳೂರಿನ ನಕ್ಷೆಯನ್ನು ಕೈಯಲ್ಲಿಡಿದುಕೊಂಡು ಯಾವುದೋ ಲೆಕ್ಕಾಚಾರದಲ್ಲಿ ಮುಳುಗಿ ಹೋಗಿದ್ದಾಳೆ.

ವಿಮಾನ ಹೊರಡುವುದಕ್ಕೆ ಮುಂಚೆ ಸುಮಾರು ಒಂದು ಗಂಟೆ ಇರುವಾಗ ಆ ಸೌಂದರ್ಯ ಗೊಂಚಲು ಮೃದುವಾಗಿ ವಿಚಾರಣ ಕೇಂದ್ರಕ್ಕೆ ನಡೆದು ಹೋಗಿ ಸರಿಯಾಗಿ ವಿಮಾನ ಹೊರಡುವ ಸಮಯವನ್ನು ತಿಳಿದುಕೊಳ್ಳುತ್ತಾಳೆ.

ಮತ್ತೆ ಗಡಿಯಾರವನ್ನು ನೋಡಿಕೊಳ್ಳುತ್ತಾ, ನಿಲ್ದಾಣದಲ್ಲಿನ ಟೆಲಿಫೋನ್ ಹತ್ತಿರಕ್ಕೆ ನಡೆದು ತನಗೆ ಬೇಕಿರುವ ಸಂಖ್ಯೆಯನ್ನು ತಿರಿವಿಸುತ್ತಾಳೆ. ರಿಸೀವರ್ ಕೈಗೆ ತೆಗೆದುಕೊಂಡ ಪವನ್ "ಪವನ್ ಹಿಯರ್" ಹೇಳುತ್ತಾನೆ.

"ಹಲೋ ಪವನ್, ನಾನು."

"ಗೊತ್ತಾಯಿತು ನೀನೇ"

"ನಾನು... ಅ... ಅಚಲಾ..."

"ಅಚಲಾ... ನಿನ್ನ ಹೆಸರು ಅಚಲಾನೆ?"

"ಹೌದು! ಅಚಲ ಎತ್ತರವಾದ ದೂರವಾದ ಬೆಟ್ಟ. ಕನ್ನಡದಲ್ಲಿ ಮೂರಕ್ಷರ, ಇಂಗ್ಲಿಷಿನಲ್ಲಿ ಆರಕ್ಷರ" "ಹೌದು, ಇಷ್ಟು ದಿನ ಹೆಸರಿಲ್ಲದೆಯೇ ಮಾತನಾಡಿಕೊಂಡೆವು. ಈಗ ಹೆಸರೇಳಿದ ಗುಟ್ಟಾದರು ಏನು?" ಪ್ರಶ್ನಿಸಿದ.

"ಏನೂ ಇಲ್ಲ. ನನ್ನ ಹೆಸರನ್ನು ಈಗ ನಾನು ಕೊಡುವ ವಿವರಣೆಯಿಂದ ನೀನು ಹೇಗಾದರೂ ಮಾಡಿ ತಿಳಿದುಕೊಳ್ಳುತ್ತೀಯಾ. ಅದಕ್ಕೆ ನಾನೇ ಹೇಳಿಬಿಟ್ಟೆ. ವಿಮಾನದಲ್ಲಿ ಟಿಕೆಟ್ ತೆಗೆದುಕೊಳ್ಳುವಾಗಲೇ ಯೋಚಿಸಿದೆ. ಬೇರೆ ಹೆಸರಿನಲ್ಲಿ ಟಿಕೇಟು ತೆಗೆದುಕೊಳ್ಳೋಣವೆಂದು. ಆದರೆ ಬೇರೆ ಹೆಸರಿನಲ್ಲಿ ಟಿಕೇಟು ತೆಗೆದುಕೊಂಡು ಮೇಲಕ್ಕೆ ಹಾರಿಬಿಟ್ಟರೆ ಜೀವ ವಿಮೆ ಸಿಗುವುದಿಲ್ಲವಲ್ಲ. ಅದಕ್ಕೆ ನನ್ನ ನಿಜವಾದ ಹೆಸರಿನಲ್ಲೇ ಟಿಕೇಟ್ ತೆಗೆದುಕೊಂಡೆ." ಗಲಗಲನೆ ನಕ್ಕಳು ಕಾವೇರಿಯಂತೆ. ಅವಳ ನಗು ಅವನನ್ನು ಉಸಿರುಕಟ್ಟಿಸಿದಂತಿತ್ತು.

"ಅಂದರೆ ನೀನು ಬೆಂಗಳೂರು ಬಿಟ್ಟು ಹೋಗುತ್ತಿದ್ದೀಯಾ?" ಪ್ರಶ್ನಿಸಿದ.

"ಬೆಂಗಳೂರು ಬಿಟ್ಟರೆ ನನಗೇನೂ ಚಿಂತೆಯಿಲ್ಲ , ನಿನ್ನನ್ನು ಬಿಟ್ಹೋಗುತ್ತಿದ್ದೇನೆ" ಮತ್ತದೇ ನಗು.

"ಅಚಲಾ ಪ್ಲೀಸ್ ನಾನು ಬರುವವರೆಗೂ ಅಲ್ಲೇ ಇರು"

"ಪವನ್, ಇನ್ನೊಮ್ಮೆ ಅಚಲಾ ಅನ್ನು" ಎಂದಳು. ಪವನ್ ಮತ್ತೆ ಮತ್ತೆ ಅಚಲಾಳ ಹೆಸರೇಳಿ "ಅಚಲಾ ತಮಾಷೆ ಮಾಡಬೇಡ. ನೀನು ವಿಮಾನ ನಿಲ್ದಾಣದಲ್ಲೇ ತಾನೇ ಇರುವುದು? ಅಲ್ಲೇ ಇರು, ನಾನೀಗಲೇ ಬಂದುಬಿಡುತ್ತೇನೆ" ಎಂದ.

"ನೋಡು ಪವನ್ ನನ್ನ ಕೈಗಡಿಯಾರದಲ್ಲಿ ಈಗ ಸಮಯ ಸರಿಯಾಗಿ ೧೭:೪೦ ಗಂಟೆ ಅಂದರೆ ೧೮:೪೦ ರಿಂದ ೧೮:೪೫ರ ನಡುವೆ, ನಾನು ಹೊರಡಬೇಕಾಗಿರುವ ವಿಮಾನ ಐಸಿ-೫೧೧ ಬೆಂಗಳೂರಿನ ಏರ್‌ಸ್ಟ್ರಿಪ್‌ನಿಂದ ಮೇಲಕ್ಕಾರುತ್ತದೆ. ನಾನು ಸರಿಯಾಗಿ ೩೦ ನಿಮಿಷಗಳಿರುವಾಗ ಮುಖ್ಯ ಬಾಗಿಲಿನಿಂದ ವಿಮಾನದ ಕಡೆಗೆ ನಡೆದುಹೋಗುತ್ತೇನೆ. ಅಂದರೆ ನಿನಗೆ ಸರಿಯಾಗಿ ೩೦ ನಿಮಿಷ ಸಮಯ ಕೊಡುತ್ತೇನೆ. ನೀನಿರುವ ಸ್ಥಳದಿಂದ ನಾನಿರುವ ಸ್ಥಳಕ್ಕೆ ಹಳೆಯ ಮದ್ರಾಸ್ ರಸ್ತೆಯ ಮುಖಾಂತರ ಇಂದಿರಾನಗರದ ರಸ್ತೆಯ ಮೇಲೆ ೩೦ ಕಿ.ಮೀ. ದೂರವಾಗುತ್ತದೆ. ಮಧ್ಯೆ ಸರಿಯಾಗಿ ೧೨ ಸಿಗ್ನಲ್‌ಗಳಿರುವ ಅಡ್ಡ ರಸ್ತೆಗಳು ಸಿಗುತ್ತವೆ, ಒಂದೊಂದು ಸಿಗ್ನಲ್ ಕಂಬದ ಮುಂದೆಯೂ ನಿಂತು ಬಂದಿದ್ದೆಯಾದರೆ (೧೨*೩೦ ಸೆಕೆಂಡ್‌ಗಳು) ಸುಮಾರು ಆರು ನಿಮಿಷಗಳು ಹಾಳಾಗಬಹುದು, ಒಂದೇ ಒಂದು ಅಡ್ಡ ರಸ್ತೆಯ ಸಿಗ್ನಲ್ ಕಂಬದ ಹತ್ತಿರವೂ ನಿಲ್ಲದಂತೆ ವೇಗವನ್ನು ಸರಿಹೊಂದಿಸಿಕೊಂಡು ಬಂದಿದ್ದೆಯಾದರೆ ಸುಮಾರು ಆ ೬ ನಿಮಿಷಗಳ ಸಮಯವನ್ನು ಉಳಿಸಿಕೊಳ್ಳಬಹುದು.

"ದಯವಿಟ್ಟು ಮುಖ್ಯ ಬಾಗಿಲಿನಿಂದ ಒಳಕ್ಕೆ ಬರಬೇಡ. ನಾನು ಒಂದು ಮುಖ್ಯ ವಿಷಯದ ಮೇಲೆ ನ್ಯೂಯಾರ್ಕ್‌ಗೆ ಹೋಗುತ್ತಿದ್ದೇನೆ. ಮತ್ತೆ ವಾಪಸ್ ಬರುತ್ತೇನೋ ಇಲ್ಲವೋ ಗೊತ್ತಿಲ್ಲ. ದೇವರ ಬಗ್ಗೆ ನನಗೆ ನಂಬಿಕೆಯಂತೂ ಇಲ್ಲ, ಆದರೆ ಯಾವುದೋ ಒಂದು ಶಕ್ತಿ ಈ ವಿಶ್ವಾಸವನ್ನು ನಿಯಂತ್ರಿಸುತ್ತಿದೆ ಎನ್ನುವುದು ಮಾತ್ರ ಸತ್ಯ. ಕಾಲ ಎಲ್ಲವನ್ನೂ ನಿಯಂತ್ರಿಸುತ್ತದೆ. ಮತ್ತೆ ಬೆಂಗಳೂರಿಗೆ ಬಂದರೆ ಖಂಡಿತ ಫೋನ್ ಮಾಡುತ್ತೇನೆ. ಯಾವುದಕ್ಕೂ ಒಳಿತೆನ್ನುವಂತೆ ನಿನ್ನ ಇಷ್ಟು ದಿನಗಳ ಗೆಳೆತನಕ್ಕೆ ಧನ್ಯವಾದಗಳು. ನಾನು ಮುಖ್ಯ ಬಾಗಿಲಿನಿಂದ ಹೋಗುವುದಕ್ಕೆ ಮುಂಚೆಯೇ ನೀನು ತಲುಪಿದ್ದೆಯಾದರೆ ನಿನಗೊಂದು ಮುತ್ತು ಕೊಡುತ್ತೇನೆ ಗುಡ್‌ಲಕ್.

❖❖❖

"ಎತ್ತಣ ಮಾಮರ, ಎತ್ತಣ ಕೋಗಿಲೆ ಎತ್ತಣಿಂದೆತ್ತ ಸಂಬಂಧವಯ್ಯಾ?" ಬೆಟ್ಟದ ನೆಲ್ಲಿಯ ಕಾಯಿ ಸಮುದ್ರದೊಳಗಣ ಉಪ್ಪು ಎತ್ತಣಿಂದೆತ್ತ ಸಂಬಂಧವಯ್ಯ? ಗುಹೇಶ್ವರ ಲಿಂಗಕ್ಕೆಯೂ ಎನಗೆಯೂ ಎತ್ತಣಿಂದೆತ್ತ ಸಂಬಂಧವಯ್ಯ – ಅಲ್ಲಮನ ಸಂಬಂಧವೆಂದರೆ ಇದಲ್ಲವೆ?

ರಿಸೀವರ್ ಗೆಳಗಿಟ್ಟ ತಕ್ಷಣ ಅವಳ ಹೃದಯ ನೋವಿನಿಂದ ಮೃದುವಾಗಿ ಕಂಪಿಸಿತು. ತಾನು ಪವನ್‌ಗೆ ನೀಡುತ್ತಿರುವ ಒಂದೊಂದು ಕಠಿಣ ಪರೀಕ್ಷೆಯ ಜೊತೆಗೆ ಅವನು ತೋರುತ್ತಿರುವ ಅದಮ್ಯ ತಾಳ್ಮೆ, ತಿಳಿವು ಸಮಯ ಪ್ರಜ್ಞೆ ಅವಳನ್ನು ಇನ್ನಷ್ಟು ಮೃದುವಾಗಿಸಿಬಿಟ್ಟಿತ್ತು. ಆದರೂ ಅವಳ ಅಂತಿಮ ಜಯಕ್ಕೆ ಮುಂದೆ ಅವನನ್ನು ಹೇಗಾದರೂ ಮಾಡಿ ದೂರವಿರಿಸುವುದೇ ಅವಳ ಉದ್ದೇಶವಾಗಿತ್ತು.

ಪವನ್‌ನ ಬೆಂಟ್ಲಿ ಕಾರು ಬೆಂಗಳೂರಿನ ರಸ್ತೆಗಳಲ್ಲಿ ಒಂದೇ ಸಮನೆ ಧಾವಿಸುತ್ತಿದೆ. ಪವನ್ ಏಕಾಗ್ರತೆಯಿಂದ ಓಡಿಸಲು ಎಷ್ಟೇ ಪ್ರಯತ್ನಪಟ್ಟರೂ ಅಚಲಾಳ ಮಾತುಗಳು ನೂರಾರು ಸಂದೇಹಗಳಾಗಿ ಅವನನ್ನು ಖಿನ್ನನಾಗಿಸಿಬಿಟ್ಟಿದೆ.

ಮತ್ತೆ ಬೆಂಗಳೂರಿಗೆ ಬಂದಿದ್ದೆ ಆದರೆ ಫೋನ್ ಮಾಡುತ್ತೇನೆ. ಯಾವುದಕ್ಕೂ ಒಳಿತೆನ್ನುವಂತೆ ನಿನ್ನ ಇಷ್ಟುದಿನಗಳ ಗೆಳೆತನಕ್ಕೆ ಧನ್ಯವಾದಗಳು. ನಾನು ಒಂದು ಮುಖ್ಯ ವಿಷಯದ ಮೇಲೆ ನ್ಯೂಯಾರ್ಕಿಗೆ ಹೋಗುತ್ತಿದ್ದೇನೆ, ಮತ್ತೆ ವಾಪಸ್ ಬರುತ್ತೇನೋ ಇಲ್ಲವೊ. ದೇವರ ಬಗ್ಗೆ ನನಗೆ ನಂಬಿಕೆಯಂತೂ ಇಲ್ಲ. ಮೇಲಿನ ಎಲ್ಲಾ ಮಾತುಗಳು ಅವನನ್ನು ಸುತ್ತಿ ಸುತ್ತಿ ಪ್ರಶ್ನಿಸುತ್ತಿವೆ. ಮಾನಸಿಕ ಉದ್ವೇಗದ ಜೊತೆಗೆ ಎಲ್ಲಾ ಪ್ರಶ್ನೆಗಳಿಗೆ ಉತ್ತರವೆನ್ನುವಂತೆ ಎರಡು ಮೂರು ರೀತಿಯ ಊಹೆಗಳು ನೀಲಾಕಾಶದಲ್ಲಿ ಮಿಂಚುವ ಬೆಳ್ಳಿರೇಖೆಗಳಂತೆ ಅವನ ಒಳಗೆ ಘರ್ಷಣೆಗೊಳ್ಳುತ್ತಿವೆ.

ಒಂದು – ಉದ್ಯೋಗದ ಬೆನ್ನತ್ತಿ ಹೋಗುತ್ತಿರಬೇಕು?

ಎರಡು – ಮದುವೆ? ಛೆ, ಛೆ, ಇರಲಾರದು?

ಮೂರು – ಯಾವುದೋ ಅನಾರೋಗ್ಯದ ವಾಪಸ್ ಬರಲಾರದ ಕಾಯಿಲೆ ಇರಬಹುದೆ?

ದೇವರೆಂದರೆ ನಂಬಿಕೆಯಿಲ್ಲದ ಪವನ್ ಕೂಡ ಒಳಗೊಳಗೆಯೇ ದೇವರಲ್ಲಿ ಅರಿಕೆ ಮಾಡಿಕೊಂಡ. ಈಗಾಗಲೇ ಎರಡು ಮೂರು ಸಲ ಅಂತಿಮ ಗೇರ್‌ನಲ್ಲಿ ಓಡುತ್ತಿದ್ದ ಕಾರು ಪವನ್‌ನಿಂದ ನೇರವಾಗಿ ಬ್ರೇಕ್ ಒತ್ತಿಸಿಕೊಂಡು ಸಣ್ಣದಾಗಿ ಶಬ್ದಮಾಡುತ್ತಾ ರಸ್ತೆಗಳಲ್ಲಿ ಚೀರಿಕೊಂಡಿದೆ. ಬೇರೆ ಕಾರುಗಳಿಗಿನ್ನ ಬಹಳ ಶೀಘ್ರವಾಗಿ ವೇಗವನ್ನು ಹೆಚ್ಚಿಸಿಕೊಳ್ಳುವುದು.

ಕಾರು ಈಗಾಗಲೇ ಹದಿನೈದು ಕಿ.ಮೀಟರುಗಳು ದಾಟಿ ಹದಿನಾರನೆಯ ಕಿ.ಮೀಟರುಗಳ ಕಲ್ಲಿನ ಹತ್ತಿರ ಓಡುತ್ತಿದೆ. ಬೆಂಗಳೂರಿನ ಮುಖ್ಯ ಟ್ರಾಫಿಕ್ ಇರುವ ರಸ್ತೆಗಳನ್ನು ದಾಟಿರುವ ಕಾರು ಇನ್ನಷ್ಟು ವೇಗವನ್ನು ಹೆಚ್ಚಿಸಿಕೊಂಡು ಓಡುತ್ತಿದೆ. ಕತ್ತಲು ನಿಧಾನವಾಗಿ ಬೆಂಗಳೂರನ್ನು ಆವರಿಸಿಕೊಳ್ಳುತ್ತಿದೆ. ವಕ್ರಾಕಾರದ ರಸ್ತೆಯಲ್ಲಿನ ದೂರದೂರದ ವಿದ್ಯುತ್ ದೀಪಗಳು ರಸ್ತೆಯ ಮೇಲೆ ಬೆಳಕನ್ನು ಚೆಲ್ಲುತ್ತಿವೆ.

ಇಲ್ಲಿ ವಿಮಾನ ನಿಲ್ದಾಣದಲ್ಲಿ ಚಡಪಡಿಸುತ್ತಿರುವ ಅಚಲಾ ನಿಮಿಷಕ್ಕೊಮ್ಮೆ ಸುತ್ತುತ್ತಿರುವ ಭೂಮಿಯನ್ನು ತಲೆಯ ಮೇಲೆ ಹೊತ್ತುಕೊಂಡಂತೆ ಕೈಯಲ್ಲಿರುವ ಗಡಿಯಾರವನ್ನು ನೋಡುತ್ತ ಪವನ್‌ನ ಕಾರನ್ನೇ ಮನಸ್ಸಿನ ತುಂಬಾ ತುಂಬಿಕೊಂಡು ರಸ್ತೆಯ ಕಡೆಯೇ ನೋಡುತ್ತಿದ್ದಾಳೆ. ತಾನು ವಿಮಾನದ ಕಡೆಗೆ ನಡೆದು ಹೋಗಬೇಕಿರುವ ಸಮಯ ಪವನ್‌ಗೆ ಹೇಳಿರುವಂತೆ ಇನ್ನು ಹತ್ತು ನಿಮಿಷಗಳು ಮಾತ್ರ ಉಳಿದಿವೆ.

ಅದೇ ಸಮಯಕ್ಕೆ ಸರಿಯಾಗಿ ಪವನ್‌ನ ಆ ಕಾರಿಗೆ ಎದುರಾಗಿ ಒಂದು ಟ್ರಕ್ ವೇಗವಾಗಿ ಧಾವಿಸಿ ಬರುತ್ತಿದೆ. ಅರೆಕ್ಷಣ ದಂಗಾದ ಪವನ್ ಎದುರಿಗೆ ಬರುತ್ತಿರುವುದು ದ್ವಿಚಕ್ರ ಗಾಡಿ ಅಲ್ಲದೆ ಎಡಗಡೆಗೆ ಒಂದೇ ಹೆಡ್‌ಲೈಟ್ ಇರುವ ಟ್ರಕ್ ಎಂದು ತಿಳಿಯುವುದರೊಳಗೆ ಟ್ರಕ್ ಹತ್ತಿರ ಬಂದೇ ಬಿಟ್ಟಿತ್ತು. ಪೂರ್ತಿ ಹೊರಗಿದ್ದ ಬಲಕಾಲನ್ನು ತೆಗೆದು ಬ್ರೇಕ್ ಮೇಲಿಟ್ಟು ಕೈಯಲ್ಲಿದ್ದ ಸ್ಟೇರಿಂಗನ್ನು ಎಡಗಡೆಗೆ ತಿರುವಿಸಿ ಮತ್ತೆ ಬಲಕ್ಕೆ ಕಟ್ ಮಾಡಿದ ಅಷ್ಟೆ. ಟ್ರಕ್ ಹಿಂದೆಯೇ ಸೈಡ್ ತೆಗೆದುಕೊಳ್ಳಲು ನೋಡುತ್ತಿದ್ದ ಕಾರಿಗೆ ಪಳ್ಳನೆ ಹೊಡೆದು, ಕಾರು ಪಕ್ಕಕ್ಕೆ ಉರುಳಿಕೊಂಡಿತು. ಪವನ್ ನಿಧಾನವಾಗಿ ಪ್ರಜ್ಞೆ ಕಳೆದುಕೊಂಡ. ಕೆಲವೇ ನಿಮಿಷಗಳಲ್ಲಿ ಜನರ ಗುಂಪು ಸೇರಿತು.

ಅಚಲಾ ಒಲ್ಲದ ಮನಸ್ಸಿನಿಂದ ನಿಧಾನವಾಗಿ ವಿಮಾನದ ಕಡೆಗೆ ನಡೆಯತೊಡಗಿದಳು. ಮಧ್ಯೆ ಮಧ್ಯೆದಲ್ಲಿ ಹಿಂದಕ್ಕೆ ತಿರುಗಿ ನೋಡುತ್ತಾ ವಿಮಾನದ ಒಳಗೋಗುವವರೆಗೂ ನೋಡಿ ನೋಡಿ ಕೊನೆಗೊಮ್ಮೆ ದೊಡ್ಡ ವಿಶ್ವಾಸದೊಂದಿಗೆ ತನ್ನ ನಿರಾಶೆಯನ್ನು ಕಣ್ಣುಗಳಲ್ಲಿ ತುಂಬಿಕೊಂಡಳು.

ವಿಮಾನದಲ್ಲಿ ಸಣ್ಣಗೆ ಶುರುವಾದ ಶಬ್ದ ಇನ್ನಷ್ಟು ಮತ್ತಷ್ಟು ಜೋರಾಗಿ ವಿಮಾನ ಒಮ್ಮೆಲೇ ರೆಕ್ಕೆಬಿಚ್ಚಿ ಹಾರತೊಡಗಿತು. ಅಚಲಾಳ ಆಸೆ ನಿರಾಶೆ ಯಾವುದನ್ನೂ ಅರಿಯದ ವಿಮಾನ ಮಾತ್ರ ಗಗನದ ಕಡೆಗೇ ಒಂದೇ ಸಮನೆ ಧಾವಿಸುತ್ತಿದೆ.

ಸರಿಯಾದ ಸಮಯಕ್ಕೆ ಫೋನ್‌ನಲ್ಲಿ ಮಾತನಾಡಿದ ಪವನ್ ಮಾತ್ರ ನಿಗದಿಪಡಿಸಿದ ಸಮಯಕ್ಕಿಂತ ಮುಂಚೆ ವಿಮಾನ ನಿಲ್ದಾಣ ತಲುಪದೆ ಹೋಗಿದ್ದು, ಅಚಲಾಳ ಮನದಲ್ಲಿ ವಿಧವಿಧವಾದ ಸಂದೇಹಗಳ ಜೊತೆಗೆ ಆಶ್ಚರ್ಯವನ್ನೂ

ಮೂಡಿಸಿದೆ. ಪವನ್‌ನ ಸಮಯಪ್ರಜ್ಞೆ, ಸೂಕ್ಷ್ಮತೆ. ಪರಿಜ್ಞಾನ ಮತ್ತು ಚುರುಕು ಗೊತ್ತಿರುವ ಅಚಲಾಳ ಮನಸ್ಸಿನಾಳದಲ್ಲಿ ಎಲ್ಲೋ ಒಂದು ಸಣ್ಣದಾದ ಅಳುಕು ತುಂಬಿಕೊಂಡು ದೊಡ್ಡದಾಗುತ್ತಾ ಹೋಗುತ್ತಿದೆ. ಅರೆಕ್ಷಣ ದೇವರಲ್ಲಿ ನಂಬಿಕೆ ಇಲ್ಲದಿದ್ದರ ಮನದಲ್ಲೇ ಒಮ್ಮೆ ಹೀಗಾಗದಿರಲಿ ದೇವರೇ ಎಂದುಕೊಳ್ಳುತ್ತಾಳೆ.



ಪವನ್ ಎಷ್ಟೋ ದಿನಗಳಿಂದ ಕೋಮಾದಲ್ಲಿದ್ದವನಂತೆ ಆಸ್ಪತ್ರೆಯ ಒಂದು ಹಾಸಿಗೆ ಮೇಲೆ ಮಲಗಿದ್ದಾನೆ. ತಲೆಯಲ್ಲಿ ನೂರಾರು ವಿಮಾನಗಳು ಓಡುತ್ತಿವೆ.

ಆಕಾಶದಲ್ಲಿನ ನಕ್ಷತ್ರಗಳು ಯಾವ ನಾಚಿಕೆಯೂ ಇಲ್ಲದೆ ಮಿಣುಕು ಹುಳುಗಳಂತೆ ಹೊಳೆಯುತ್ತಿವೆ. ಹುಣ್ಣಿಮೆಯ ರಾತ್ರಿ ಕರಕಲು ಭೂಮಿಯನ್ನು ಬೆಣ್ಣೆಯಂತಾಗಿಸಿದೆ. ಪವನ್, ನೀಲ್ ಅರ್ಮ್ಸ್ಟ್ರಾಂಗ್‌ನಂತೆ ತನ್ನ ಉದ್ದುದ್ದ ಕಾಲುಗಳನ್ನು ಭೂಮಿಗೆ ಸೋಕಿಸಿ ತನಗಿಂತ ಎಷ್ಟೋ ಪಟ್ಟು ಮೇಲಕ್ಕೆ ಕುಪ್ಪಳಿಸುತ್ತಾ ಬೆನ್ನಟ್ಟುತ್ತಿದ್ದಾನೆ ನೀಲಿ ವಿಮಾನದಲ್ಲಿ ಸಾಗುತ್ತಿರುವ ಅಚಲಾಳ ಕಡೆಗೆ.

ಅಚಲಾ ಬೆಳ್ಳಿ ರೇಖೆಗಳ ಅಂಚಿರುವ ಮೋಡಗಳ ಸೀರೆ ಉಟ್ಟು, ತಲೆಯ ಮೇಲೆ ನಕ್ಷತ್ರಗಳ ಮುಕುಟವಿಟ್ಟುಕೊಂಡಿದ್ದಾಳೆ. ನೀಳವಾಗಿ ಇಳಿಬಿಟ್ಟು ಕೇಶರಾಶಿ ಪ್ರಕಾಶಮಾನವಾಗಿ ಹೊಳೆಯುತ್ತಿದೆ. ಒಟ್ಟಿನಲ್ಲಿ ಅಚಲಾ ಸ್ವರ್ಗದಿಂದ ಭೂಮಿಗೆ ಜಾರುತ್ತಿರುವ ದೇವಕನ್ನಿಕೆಯಂತೆ ತೋರುತ್ತಿದ್ದಾಳೆ.

ಮನುಷ್ಯನ ಕಿವಿಗಳಿಗೆ ಎಟುಕದ 'ಸೀಸ್ಮೋಗ್ರಾಮ್' ಎಂಬ ಸಲಕರಣೆಯಿಂದ ಭೂಮಿಯ ಕಂಪನವನ್ನು ಮುದ್ರಿಸಿಕೊಳ್ಳಲಾಗುತ್ತದೆ. ಅದೇ ರೀತಿಯಾಗಿ ಪವನ್‌ನ ಕಿವಿಗಳು ಸುತ್ತಲಿನ ಪಿಸು ಮಾತುಗಳನ್ನು ಕೇಳಿಸಿಕೊಳ್ಳುತ್ತಿವೆ.

ಅದೇ ಸಮಯಕ್ಕೆ ಯಾರೋ ಬಹಳ ಮೃದುವಾಗಿ ಅವನ ದೇಹವನ್ನು ಸಣ್ಣದಾಗಿ ಕದಲಿಸುತ್ತಿದ್ದಾರೆ. ಪವನ್ ಮರುಜನ್ಮ ಪಡೆದವನಂತೆ ಕಣ್ಣುಬಿಟ್ಟು ಸುತ್ತಲು ನೋಡುತ್ತಾನೆ. ಪ್ರಾಚಿ ವಿಷಾದ ಮುಖದೊಂದಿಗೆ ಹತ್ತಿರ ಬಂದಿದ್ದಾಳೆ. ಹಾಗೆ ಇನ್ನೂ ತನ್ನ ಕೆಲವು ಆಪ್ತ ಮಿತ್ರರು, ಮೇಲಿನ ಅಧಿಕಾರಿಯೊಬ್ಬರು ಜೊತೆಗೆ ವಿನೋದ್ ಕೂಡ ನಿಂತಿದ್ದಾನೆ.

ದಿಢೀರನೆ ಪ್ರಜ್ಞಾಸ್ಥಿತಿಗೆ ಬಂದ ಪವನ್ ತನ್ನ ಅಂಗಾಂಗಗಳನ್ನು ಖಾತರಿಪಡಿಸಿಕೊಳ್ಳಲೆಂಬಂತೆ ಕೈಗಳ ಸಹಾಯದಿಂದ ಎದ್ದು ಕೂರಲು ಪ್ರಯತ್ನಿಸುತ್ತಾನೆ. ಎಡಕ್ಕೈ ಮಾಮೂಲಿಗಿಂತ ಎರಡು ಪಟ್ಟು ದೊಡ್ಡದಾಗಿ ಪ್ಲಾಸ್ಟರ್ ಏರಿಸಿಕೊಂಡಿದೆ. ಬಲಕ್ಕೈ ನೋಡಿಕೊಳ್ಳುತ್ತಾನೆ ಏನೂ ಆಗಿಲ್ಲ. ಕಾಲುಗಳನ್ನು ಕದಲಿಸಿ

ನೋಡುತ್ತಾನೆ. ಸ್ವಲ್ಪ ನೋವಾದರೂ ಆರೋಗ್ಯವಾಗೇ ಇವೆ. ಸದ್ಯ ತಪ್ಪಿಸಿಕೊಂಡೆ ಎಂದುಕೊಳ್ಳುವಷ್ಟರಲ್ಲಿ ಪ್ರಾಚಿ ಹೇಳಿದಳು

"ಏನೂ ಆಗಿಲ್ಲ ಎಡಕೈ ಒಂದೆ, ಎರಡು ಕಡೆ ಮುರಿದಿದೆ, ಮಿಕ್ಕ ಎಲ್ಲಾ ಸಣ್ಣಪುಟ್ಟ ಗಾಯಗಳು. ಎಕ್ಸರೇ ತೆಗೆದು ಶಸ್ತ್ರಚಿಕಿತ್ಸೆ ಮಾಡಲಾಗಿದೆ" ಎಂದಳು. ಅವಳ ಮಾತುಗಳ ನಡುವೆ,

"ಪ್ರಾಚಿ ನಾನು ಆಸ್ಪತ್ರೆಯಲ್ಲಿರುವುದಿಲ್ಲ ಮನೆಗೆ ಹೋಗಬೇಕು" ಮಗುವಿನಂತೆ ಹೇಳಿದ. ಏನೋ ಒಂದು ರೀತಿಯಾಗಿ ಜೋಮಿಡಿದಂತೆ, ಆಯಾಸವಾದಂತೆ, ವಿಶ್ರಾಂತಿ ಪಡೆಯಲು ಅವನ ಮನ ಅಪೇಕ್ಷಿಸುತ್ತಿದೆ.

ಪ್ರಾಚಿಯ ಮನ ಕನಿಕರದಿಂದ ತುಂಬಿಹೋಯಿತು. ಯಾರೂ ಇಲ್ಲದಿದ್ದರೆ ಅವನನ್ನು ತನ್ನ ಮಡಿಲಲ್ಲಿ ಮಗುವನ್ನಾಗಿಸಿಕೊಳ್ಳಲು ಅವಳ ಮನ ಮಿಡಿಯಿತು. ಸುತ್ತಲೂ ಒಮ್ಮೆ ನೋಡಿದಳು. ಯಾರಾದರೂ ತನ್ನ ಮನದ ಹಿಂಗಿತವನ್ನು ತಿಳಿದುಕೊಂಡರೆ ಎಂದು.

"ನೀನು ಆಸ್ಪತ್ರೆಯಲ್ಲಿ ಹೆಚ್ಚಾಗಿ ಇರುವ ಅವಶ್ಯಕತೆಯಿಲ್ಲ. ಕೇವಲ ಇನ್ನೊಂದು ದಿನ ಇದ್ದರೆ ಸಾಕಂತೆ, ಡಾಕ್ಟರ್ ಹೇಳಿದ್ದಾರೆ." ಪ್ರಾಚಿ ಅವನನ್ನು ಸಂತೈಸತೊಡಗಿದಳು. ಅಷ್ಟರಲ್ಲಿ ಹತ್ತಿರ ಬಂದ ಪೊಲೀಸ್ ಅಧಿಕಾರಿ ಪವನ್‌ಗೆ ಹೇಳಿಕೆಯನ್ನು ಕೊಡುವಂತೆ ತಿಳಿಸಿದ. ಪವನ್ ನಡೆದಿದ್ದೆಲ್ಲವನ್ನೂ ತಿಳಿಸಿದ.

"ನೀವು ವಿಮಾನ ನಿಲ್ದಾಣಕ್ಕೆ ಹೋಗುತ್ತಿದ್ದೆ ಎಂದು ತಿಳಿಸಿದಿರಿ, ಯಾರನ್ನ ಸಂಧಿಸಬೇಕಾಗಿತ್ತು, ತಿಳಿದುಕೊಳ್ಳಬಹುದು?" ಈ ಪ್ರಶ್ನೆಯನ್ನು ಮೊದಲೇ ನಿರೀಕ್ಷಿಸಿದ್ದ ಪವನ್ ಪ್ರಾಚಿಯ ಎದುರಿಗೆ ಯಾವ ರೀತಿಯ ಮಾರ್ಪಾಡನ್ನೂ ಮುಖದಲ್ಲಿ ತೋರಿಸಿಕೊಳ್ಳದೆ ಬಹಳ ಮಾಮೂಲಿಯಾಗಿ 'ಅಚಲಾ' ಹೆಸರೇಳಿದ.

ನಿಜವಾದ ಹೆಸರೇಳದೆ ಹೋದಲ್ಲಿ ಮುಂದೆ ಪೊಲೀಸ್ ಶೋಧನೆಯಲ್ಲಿ ಸಿಕ್ಕಿಹಾಕಿಕೊಳ್ಳುವ ಮುಂಜಾಕರೂಕತೆಯಿಂದ ಹೆಸರೇಳಿದ್ದ. "ಅಂದರೆ ಅವರನ್ನು ಸಂಧಿಸುವ ಹಿನ್ನೆಲೆಯಲ್ಲಿ ಬಹಳ ಮಹತ್ವವೇನಾದರೂ ಇತ್ತೆ" ಎಂಬ ಪೊಲೀಸ್ ಅಧಿಕಾರಿಯ ಪ್ರಶ್ನೆಗೆ "ಇಲ್ಲ ಆ ರೀತಿಯಾಗಿ ಏನೂ ಇಲ್ಲ" ಎಂದ.

'ಅಚಲಾ' ಹೆಸರು ಕೇಳಿದ್ದೆ ಬೆಚ್ಚಿಬಿದ್ದ ಪ್ರಾಚಿ ಪವನ್‌ನ ಸುಂದರ ಸೂಕ್ಷ್ಮ ಕಣ್ಣುಗಳ ಹಿಂದೆ ಏನಾದರೂ ರಾಸಲೀಲೆಗಳು ಇವೆಯೇ ಎಂದು ತನ್ನ ಅನುಭವವನ್ನೆಲ್ಲಾ ಉಪಯೋಗಿಸಿ ಹುಡುಕತೊಡಗಿದಳು.

"ಅವರು ಅಮೆರಿಕಾಗೆ ಹೋಗಬೇಕಿದ್ದು, ನಾನು ನಿಲ್ದಾಣದಲ್ಲಿ ಬೀಳ್ಕೊಡಿಗೆ

ನೀಡಲು ಹೊರಟಿದ್ದೆ. ಅಪಘಾತವಾಗಿದ್ದು ಎದುರಿಗೆ ಬರುತ್ತಿರುವ ವಾಹನ ದ್ವಿಚಕ್ರ ವಾಹನ ಎಂದುಕೊಂಡಿದ್ದೆ ನನ್ನ ತಪ್ಪು, ಇದನ್ನು ಈಗಾಗಲೇ ತಿಳಿಸಿದ್ದೇನೆ."

"ಹೌದು ತಿಳಿಸಿದ್ದೀರ. ಆದರೆ ಪೊಲೀಸ್ ಶೋಧನೆಗೆ ತನ್ನದೇ ಆದ ನಿಯಮಗಳಿವೆ."

"ಆಯಿತು"

"ಕೊನೆಗೆ ಇನ್ನೊಂದು ಪ್ರಶ್ನೆ. ನಿಮಗೆ ಯಾರ ಮೇಲಾದರೂ ಸಂದೇಹವಿದೆಯೆ?"

"ಯಾರೂ ಇಲ್ಲ" ಪವನ್ ಹೇಳಿದ.

ಈ ಪ್ರಶ್ನೆಗಳಿಗೆ ಉತ್ತರ ಕೊಡುತ್ತಿರುವಾಗಲೇ ಅಚಲಾಳ ಬಗ್ಗೆ ಪ್ರಾಚಿಗೆ ಯಾವ ರೀತಿಯಾಗಿ ತಿಳಿಸಬೇಕೆಂದು ಒಳಗೊಳಗೇ ಒಂದು ಕತೆಯನ್ನು ಪೋಣಿಸಿಕೊಳ್ಳುತ್ತಿದ್ದಾನೆ.

"ನಿಮ್ಮ ಕಾರಿಗೆ ಎದುರಾಗಿ ಬರುತ್ತಿದ್ದ ಕಾರಿನಲ್ಲಿ ಯಾರಿಗೂ ಯಾವ ರೀತಿಯ ಹಾನಿಯೂ ಆಗಿಲ್ಲ. ಸಣ್ಣಪುಟ್ಟ ಗಾಯಗಳನ್ನು ಬಿಟ್ಟರೆ, ಜೊತೆಗೆ ಅವರು ಕೊಟ್ಟಿರುವ ಹೇಳಿಕೆಯೂ ನೀವು ಕೊಟ್ಟ ಹೇಳಿಕೆಯೂ ಒಂದೇ ರೀತಿಯಾಗಿರುವುದರಿಂದ ಇದೊಂದು ಮಾಮೂಲಿ ಕೇಸಾಗುತ್ತದೆ. ಯಾವುದಕ್ಕೂ ಅವರು, ನೀವು ಮಾತನಾಡಿಕೊಂಡು ತೀರ್ಮಾನ ಮಾಡಿಕೊಂಡರೆ ಚೆನ್ನಾಗಿರುತ್ತದೆ. ನಾನು ಇನ್ನು ಬರುತ್ತೇನೆ." ಪೊಲೀಸ್ ಅಧಿಕಾರಿ ಕೈಕುಲುಕಿ ಎದ್ದುನಿಂತ.

ಪ್ರಾಚಿ ಹತ್ತಿರಕ್ಕೆ ಬರುತ್ತಿದ್ದಂತೆ ಒಂದು ದೊಡ್ಡ ಪ್ರಶ್ನೆ ಪವನ್ ಮುಂದಕ್ಕೆ ನಡೆದು ಬರುತ್ತಿರುವಂತೆ ತೋರುತ್ತಿದೆ. ಬಹಳ ಸರಳವಾಗಿ ಪ್ರಾಚಿಯ ಮುಖವನ್ನು ನೋಡಿದ. ಪ್ರಾಚಿಯ ಹೊಳೆಯುವ ಕಣ್ಣುಗಳು ಅವನನ್ನು ತಿವಿದು ಪ್ರಶ್ನಿಸುವಂತಿದ್ದವು.

"ಪ್ರಾಚಿ, ನಾನು ಇಲ್ಲಿ ಇರುವುದಿಲ್ಲ, ಮನೆಗೋಗಬೇಕು" ಎಂದ.

"ಹೋಗೋಣ ಆದರೆ ಡಾಕ್ಟರ್" ಎನ್ನುವುದರಲ್ಲಿ, ಡಾಕ್ಟರ್ ಹತ್ತಿರಕ್ಕೆ ಬಂದು "ನಾಳೆಯೇ ಡಿಸ್‌ಚಾರ್ಜ್ ಆಗಬಹುದು. ಪ್ಲಾಸ್ಟರ್ ಮಾತ್ರ ಮೂರು ವಾರಗಳಿದ್ದರೆ ಸಾಕು, ನೀವು ಮನೆಗೆ ಹೋಗಬೇಕೆಂದುಕೊಂಡರೆ ಹೋಗಬಹುದು ಯಾವ ತೊಂದರೆಯೂ ಇಲ್ಲ. ನಾನು ಕೆಲವು ಔಷಧಿಗಳನ್ನು ಬರೆದುಕೊಡುತ್ತೇನೆ. ಸಮಯಕ್ಕೆ ಸರಿಯಾಗಿ ತೆಗೆದುಕೊಳ್ಳಬೇಕು." ಎಂದರು. ಆ ಮಾತುಗಳನ್ನು ಕೇಳಿದ ಪವನ್‌ನ ಹೃದಯ ಹಕ್ಕಿಯಂತೆ ಹಾರಾಡಿತು. "ಇನ್ನು ಒಂದು ಗಮಟೆಯಾದ ಮೇಲೆ ನೀವು ಹೋಗಬಹುದು", ಡಾಕ್ಟರ್ ಶುಭಾಶಯಗಳನ್ನು ಕೋರಿ ಹೊರಟುಹೋದರು.

ಸುತ್ತಲಿದ್ದ ಆಪ್ತ ಗೆಳೆಯರು ಪವನ್ ಜತೆ ಮಾತನಾಡತೊಡಗಿದರು. ಪವನ್ ವಿನೋದ್‌ನನ್ನು ಮಾತನಾಡಿಸಿದ. ಒಂದು ಗಂಟೆಯಾದ ಮೇಲೆ ಪ್ರಾಚಿ, ಪವನ್ ಮನೆ ಸೇರಿಕೊಂಡರು.



ಪ್ರಾಚಿ ಪವನ್‌ಗೆ ಎದುರಿಗೆ ಕುಳಿತಿದ್ದಾಳೆ. ಪವನ್ ಈಗಾಗಲೇ ಎಷ್ಟೋ ವರ್ಷಗಳಿಂದ ಬೆಳಕು ಕಾಣದ ಕೈದಿಯಂತೆ ಹೊರಕ್ಕೆ ಹಾರಲು ತಯಾರಾಗಿದ್ದಾನೆ. ಆ ಗ್ರಹಾಂಬೆಲ್ ತನ್ನ ಕಿವುಡು ಹೆಂಡತಿಗಾಗಿ ಏನೋ ಕಂಡಿಡಿಯಲು ಹೋಗಿ ಟೆಲಿಫೋನ್ ಕಂಡಿಡಿದಿದ್ದೇನೋ ಸರಿ, ಆದರೆ ಅದೇ ಟೆಲಿಫೋನ್ ತನ್ನನ್ನು ಇಷ್ಟು ತಲೆ ತಿನ್ನುತ್ತಿರುವುದು ಮಾತ್ರ ಸರಿ ಎನಿಸಲಿಲ್ಲ... ಪ್ರಾಚಿಗೆ.

"ಪ್ರಾಚಿ ನನಗೆ ಮನೆಯಲ್ಲೇ ಇದ್ದು ಇದ್ದು ಬೇಜಾರಾಗಿದೆ. ಯಾವುದಾದರೂ ಒಂದು ಪ್ರೋಗ್ರಾಮ್ ತಯಾರಿಸು, ಹೋಗೋಣ." ಪವನ್ ಹೇಳಿದ.

"ಏಕೆ, ವಿಮಾನ ನಿಲ್ದಾಣಕ್ಕೆ ಯಾರೂ ಕರೆದಿಲ್ಲವೆ?" ಈ ಪ್ರಶ್ನೆಯನ್ನು ಮೊದಲೇ ಅರಿತಿದ್ದ ಪವನ್, ಅಂತಹ ವಾತಾವರಣದಲ್ಲಿ ಮಾತು ನಿರೀಕ್ಷಿಸಿರಲಿಲ್ಲ. ಈ ರೀತಿಯ ಪ್ರಶ್ನೆಗಳು ಹೆಣ್ಣುಗಳ ಆದರ್ಶ ಪ್ರಶ್ನೆಗಳಾಗಿರುತ್ತವೆ. ತುಸು ಬೆರಗಾದ ಪವನ್ ತನ್ನ ಗುಟ್ಟನ್ನು ಎಷ್ಟೋ ಪರಿಜ್ಞಾನ ಚಾತುರ್ಯದಿಂದ ನಿಭಾಯಿಸಲು ಪ್ರಯತ್ನಪಟ್ಟರೂ ಪ್ರಾಚಿಯ ಮುಂದೆ ಏನೋ ಎಲ್ಲೋ ಕಳೆದುಕೊಂಡವನಂತೆ ಪೇಲವವಾಗುತ್ತಾ ಹೋಗುತ್ತಿದ್ದ.

"ಇಲ್ಲ, ಪ್ರಾಚಿ, ನಿಜವಾಗಿಯೂ ಆ ಹೆಣ್ಣಿಗೂ ನನಗೂ ಯಾವ ರೀತಿಯ ಸಂಬಂಧವೂ ಇಲ್ಲ."

"ಯಾವ ರೀತಿಯ ಸಂಬಂಧವೂ ಇಲ್ಲದಿದ್ದರೆ ವಿಮಾನ ನಿಲ್ದಾಣಕ್ಕೋಗುವಂತಹ ಅವಶ್ಯಕತೆ ಏನಿತ್ತು?" ಪ್ರಶ್ನಿಸಿದಳು ಕೋಪವಾಗಿ.

"ನಿನ್ನಂತಹ ರೂಪರಾಶಿ ಇರುವಾಗ ಬೇರೆ ಹೆಣ್ಣುಗಳ ಹಿಂದೆ ನಾನೇಕೆ ಹೋಗುತ್ತೇನೆ" ಈ ಮಾತನ್ನು ಎಷ್ಟೋ ನೋವಿನಿಂದ ಹೇಳಿದಂತೆ ಅಂದಿದ್ದ. "ಅದೆಲ್ಲಾ ಹೆಂಗಸರನ್ನು ಮರುಳುಗೊಳಿಸುವ ಮಾತುಗಳು. ನಿನ್ನ ಮೇಲೆ ನನಗೆ ಪೂರ್ತಿ ವಿಶ್ವಾಸವಿತ್ತು. ಆದರೆ ವಿಮಾನ ನಿಲ್ದಾಣಕ್ಕೆ ಹೋಗುವ ಮುಂಚೆ ನನಗೆ ಒಂದೇ ಒಂದು ಮಾತು ಹೇಳಿ ಹೋಗಿದ್ದರೆ ನನಗೆ ಸಂದೇಹವಿರುತ್ತಿರಲಿಲ್ಲ. ಎಷ್ಟಾದರೂ ಗಂಡಸರಲ್ಲವೆ?"

"ಯಾವೊಬ್ಬ ಗಂಡಸು ಒಂದೇ ಹೆಣ್ಣಿನ ಸುತ್ತ ತನ್ನ ಬಾಂಧವ್ಯ ಇರಿಸಿಕೊಂಡಿರುವುದಿಲ್ಲ ಎನ್ನುವುದು ನಿಜವೆ?"

ಪ್ರಾಚಿಯ ಮುಖದ ಮೇಲಿನ ಸುಂದರ ಅಂಗಾಂಗಗಳು ಇಷ್ಟೊಂದು ಬಿರುಸಾಗಬಲ್ಲವು ಎನ್ನುವುದನ್ನು ಪ್ರಪ್ರಥಮವಾಗಿ ನೋಡಿದ ಪವನ್ ಮೊದಲಬಾರಿಗೆ ಸ್ವಲ್ಪ ಭೀತಿಗೊಂಡ. ನಿಧಾನವಾಗಿ ತನ್ನ ಪ್ಲಾಸ್ಟರ್ ಕೈಯನ್ನು ಎಚ್ಚರಿಕೆಯಿಂದ ಹೊತ್ತುಕೊಂಡು ಪ್ರಾಚಿಯ ಹತ್ತಿರಕ್ಕೆ ನಡೆದು ಬಂದು ತುಸು ಅಂಜಿಕೆಯಿಂದಲೇ ಇನ್ನೊಂದು ಕೈಯನ್ನು ಭುಜದ ಮೇಲಿರಿಸಿ ಅವಳ ಮೃದುವಾದ ಕೆನ್ನೆಯನ್ನು ಸ್ಪರ್ಶಿಸುತ್ತಾ "ಪ್ರಾಚಿ, ನಿನ್ನಾಣೆ, ಅವಳಿಗೂ ನನಗೂ ಯಾವ ರೀತಿಯ ಸಂಬಂಧವೂ ಇಲ್ಲ" ಪ್ರಾಚಿ ಮುಖವನ್ನು ಮೇಲೆತ್ತಿ ತನ್ನ ಕಣ್ಣುಗಳಲ್ಲಿರುವ ಜ್ವಾಲೆಯನ್ನು ಒಮ್ಮೆ ಪ್ರಜ್ವಲಿಸಿ ಮತ್ತೆ ತಲೆ ಬಗ್ಗಿಸಿಕೊಂಡಳು.

"ನೋಡಿ, ಏನಾದರೂ ಆಗಲಿ ಇವೊತ್ತೇ ತೀರ್ಮಾನವಾಗಬೇಕು. ಅದೇನೇನು ನಡೆದಿದೆಯೋ ಅದನ್ನ ಹಾಗೆ ತಿಳಿಸಿದರೆ ಮಾತ್ರ ನಾನು ನಿಮ್ಮನ್ನ ನಂಬುತ್ತೇನೆ, ಇಲ್ಲದಿದ್ದರೆ" ಬುಸುಗುಟ್ಟಿದಳು. ಪವನ್ ಮನಸ್ಸು ಇನ್ನಷ್ಟು ಸಡಿಲಗೊಂಡಿದ್ದೇ ಅಲ್ಲದೆ ಪ್ರಾಚಿಯ ಸೌಂದರ್ಯ, ಅವನ ಮೇಲೆ ಅವಳಿಗಿರುವ ಪ್ರೀತಿ ವಿಶ್ವಾಸ ಎಲ್ಲವೂ ಅವನನ್ನು ಕಟ್ಟಾಕಿತು. ಮಗುವಿನಂತೆ ಕಥೆಯನ್ನು ಪ್ರಾರಂಭಿಸಿ ಮುಗಿಸಿದ.



ಪ್ರಾಚಿಯ ಕ್ರೋಧವೆಲ್ಲ ಕರಗಿ ಕರಗಿ ಯಾವುದೋ ಒಂದು ರೀತಿಯ ಕುತೂಹಲ ತುಂಬಿಕೊಂಡಿತು. ಮತ್ತೆ ತನ್ನ ಗಂಡನ ಸ್ಫುರದ್ರೂಪ ಸೆಳೆತಕ್ಕೆ ಹೆಣ್ಣುಗಳು ಎಷ್ಟೊಂದು ರೀತಿಯಾಗಿ ಬಲೆ ಬೀಸುತ್ತಾರೆ ಎನ್ನುವುದರ ಜೊತೆಗೆ ಈ ಒಂದು ಹೆಣ್ಣಿನ ಸೂಕ್ಷ್ಮತೆಯ ಬಗ್ಗೆ ಅಸೂಯೆ ಕೂಡ ಮೂಡಿತು.

"ಅಂದರೆ ಆ ಹೆಣ್ಣಿನ ಹೆಸರು 'ಅಚಲಾ' ಎನ್ನುವುದು ನಿಜವೊ, ಸುಳ್ಳೋ? ಸುಳ್ಳಂತೂ ಇರುವುದಿಲ್ಲ" ಪವನ್ ಹೇಳಿದ. "ಅಮೆರಿಕಾಗೆ ಯಾತಕ್ಕಾಗಿ ಹೋಗಿರಬಹುದು?" ಅರೆಕ್ಷಣ ಯೋಚಿಸಿದ ಪವನ್ ಒಂದು ಉದ್ಯೋಗ ಅರಸಿ ಹೋಗಿರಬಹುದು? ಎರಡು ಯಾವುದೋ ಚಿಕಿತ್ಸೆಗೋಸ್ಕರ ಹೋಗಿರಬೇಕು. ಇನ್ನ ಮದುವೆ ಆಗಿಲ್ಲ ಎಂದುಕೊಳ್ಳುತ್ತೇನೆ" ಆ ಮಾತನ್ನು ನಿಧಾನವಾಗಿ ಹೇಳಿದ.

"ಅಂದರೆ ಮತ್ತೆ ಬೆಂಗಳೂರಿಗೆ ಬರುತ್ತಾಳೋ ಇಲ್ಲವೋ?"

"ಆ ಮಾತು ನನಗೂ ಪ್ರಶ್ನೆಯಾಗಿಯೇ ಉಳಿದಿದೆ. ನನಗೇಕೋ ಬರುತ್ತಾಳೆ ಎನಿಸುತ್ತದೆ"

"ಬಂದರೆ ಖಂಡಿತ ನೀನು ನನಗೆ ಪರಿಚಯಿಸಬೇಕು" ಪ್ರಾಚಿ ಹೇಳಿದಳು.

"ನಾನೂ ನೋಡಿಲ್ಲ, ನನಗೆ ಪರಿಚಯವಾದ ಮೇಲೆ ನಿನಗೂ ಪರಿಚಯಿಸುತ್ತೇನೆ" ಪವನ್ ಹೇಳಿದ.

ಪ್ರಾಚಿ ಪವನ್‌ನನ್ನು ಮತ್ತೊಮ್ಮೆ ದುರುಗುಟ್ಟಿ ನೋಡಿ "ಇದೆಲ್ಲಾ ನೀವು ನನಗೆ ಮೊದಲೇ ಏಕೆ ಹೇಳಲ್ಲಿ" ಕೇಳಿದಳು. ಪವನ್ ಸಣ್ಣದಾಗಿ ನಕ್ಕು "ತಪ್ಪಾಯಿತು" ಎಂದೇಳಿ ಎರಡೂ ಕೈಗಳನ್ನು ಮೇಲೆತ್ತಿ ನಮಸ್ಕಾರ ಮಾಡಲೋದ ಕೈ ಮುರಿದಿದೆ ಎನ್ನುವುದನ್ನು ಮರೆತು. ಕೈಗಳನ್ನು ಹಿಡಿದುಕೊಂಡ ಪ್ರಾಚಿ ಪವನ್‌ನನ್ನು ಕ್ಷಮಿಸಿದಳು, ತಬ್ಬಿಕೊಳ್ಳುವ ಕ್ರಿಯೆಯಲ್ಲಿ.

ಬ್ಯೂಟಿಪಾರ್ಲರ್‌ಗೆ ಹೋಗಿ ಬರುವುದಾಗಿ ತಿಳಿಸಿದ ಪ್ರಾಚಿ ಪೋರ್ಟಿಕೋದಿಂದ ಕಾರನ್ನು ಹೊರಕ್ಕೆ ಓಡಿಸಿದಳು. ಪವನ್ ರ್‍ಯಾಕ್‌ನಲ್ಲಿರುವ ಒಂದು ಪುಸ್ತಕವನ್ನು ಆಯ್ದುಕೊಂಡು ಓದುತ್ತಿದ್ದಾನೆ. 'ಬರ್ಟ್‌ದಂಡ್ ರಜಲ್' ಬರೆದಿರುವ ಆ ಪುಸ್ತಕದಲ್ಲಿನ 20ನೇ ಶತಮಾನದ ಜೆಂಟಲ್‌ಮೆನ್, ಸಜ್ಜನನ ಡೆಫಿನಿಶನ್ ಗುಣ ಲಕ್ಷಣಗಳ ಬಗ್ಗೆ ಮತ್ತೆ ಮತ್ತೆ ಓದುತ್ತಿದ್ದಾನೆ.

–ಸಭ್ಯನೆಂದರೆ ಯಾರು? ಒಳ್ಳೆ ಸ್ವಭಾವದವನು ಉಚ್ಛವಾದ ನಡುವಳಿಕೆ ಇರುವವನು, ಯಾರಿಗೂ ತೊಂದರೆ ಮಾಡದವನು, ಸುಳ್ಳೇಳದವನು, ಮೋಸ ಮಾಡದವನು, ಹೀಗೆ. ಆದರೆ ಮೇಳಿನ ಎಲ್ಲಾ ಗುಣಗಳನ್ನು ಆಚರಿಸಿದ್ದೆಯಾದರೆ, ಹೊಟ್ಟೆಗಿಲ್ಲದೆ ಬಟ್ಟೆಗಿಲ್ಲದೆ ನರಳುವುದಂತೂ ಖಂಡಿತ. ಇನ್ನು ಮೇಲಿನ ಎಲ್ಲಾ ಗುಣಗಳನ್ನು ಹೆಸರಿಗೆ ಮಾತ್ರ ಆಚರಿಸುವ 21ನೇ ಶತಮಾನದ ಸಜ್ಜನರು ಎಲ್ಲಾ ಸವಲತ್ತುಗಳನ್ನೂ ಹೊಂದಿದ್ದು ವಿಮಾನಗಳಲ್ಲೇ ಓಡಾಡುತ್ತಾರೆ. ಸ್ಟಾರ್ ಹೋಟೆಲ್ಗಳಲ್ಲೇ ಇರುತ್ತಾರೆ. ಪವನ್ ಪುಸ್ತಕವನ್ನು ಕುತೂಹಲವಾಗಿ ಓದುತ್ತಾ ಹೋಗುತ್ತಿದ್ದಾನೆ. ಅದೇ ಸಮಯಕ್ಕೆ ಫೋನ್ ಬಾರಿಸಿತು.

ಪವನ್, ಮನೆ ಆಳು ರಾಮನನ್ನು ಕರೆಯುವುದರೊಳಗೆ ಅವನೇ ಇನ್ನೊಂದು ಕೋಣೆಯಲ್ಲಿನ ಫೋನ್ ತೆಗೆದುಕೊಂಡಿದ್ದ. ಪವನ್ ಪುಸ್ತಕದಲ್ಲಿ ಮತ್ತೊಮ್ಮೆ ಮಗ್ನನಾದ. ರಾಮು ನಿಧಾನವಾಗಿ ಮಾತನಾಡುತ್ತಿದ್ದುದು ಮಾತ್ರ ಕೇಳಿಸುತ್ತಿತ್ತು. ಆದರೆ ಏನು ಮಾತನಾಡುತ್ತಿದ್ದಾನೋ ಕೇಳಿಸುತ್ತಿರಲಿಲ್ಲ. ಸುಮಾರು ಐದು ನಿಮಿಷಗಳಾದ ಮೇಲೆ ರಾಮು ಕಾಫಿ ಬಟ್ಟಲು ಹಿಡಿದು ಒಳಕ್ಕೆ ಬಂದ. ಆಗ ಜ್ಞಾಪಿಸಿಕೊಂಡ ಪವನ್ ಫೋನ್ ಬಂದ ವಿಷಯ ಕೇಳಿದ.

"ಯಾರೋ ಗೊತ್ತಿಲ್ಲ. ರಾಂಗ್‌ನಂಬರ್" ಎಂದೇಳಿ ಕೋಣೆಯಿಂದ ಹೊರಕ್ಕೋದ. ಪವನ್ ಕಾಫಿ ತೆಗೆದುಕೊಂಡ. ಪ್ರಾಚಿ ಇರುವ ಕಾರು

ಬ್ಯೂಟಿಪಾರ್ಲರ್ ಮುಂದೆ ನಿಂತುಕೊಂಡಿದೆ. ಪ್ರಾಚಿ ತನ್ನ ಸುತ್ತಲು ಸೌಂದರ್ಯವನ್ನು ಚೆಲ್ಲುತ್ತಾ ಇಳಿದು ಒಳಕ್ಕೋದಳು. ಮೊದಲೇ ಅಪಾಯಿಂಟ್‌ಮೆಂಟ್ ತೆಗೆದುಕೊಂಡಿದ್ದರಿಂದ ನೇರವಾಗಿ ಶೃಂಗಾರಗೊಳ್ಳುವ ಆಸನದ ಮೇಲೆ ಕುಳಿತುಕೊಂಡಳು.

'ಪ್ರಾಚಿ' ಆ ಆಸನದ ಮೇಲೆ ಕುಳಿತ ತಕ್ಷಣ ಅದಕ್ಕೊಂದು ಅಲಂಕಾರ ಮೂಡಿಬಂದಿತು. ಪಾರ್ಲರ್‌ನ ಮುಖ್ಯ ಮೇಲ್ವಿಚಾರಕಿ ಹತ್ತಿರ ಬಂದು ಆದರಣೆಯಿಂದ ಮಾತನಾಡಿಸಿ ಶೃಂಗರಿಸಲು ಬೇಕಾಗಿರುವ ವಸ್ತುಗಳನ್ನು ಒಂದೊಂದಾಗಿ ಸಮೀಪಕ್ಕೆ ಸರಿಸಿಕೊಂಡಳು. ಅದೇ ಸಮಯಕ್ಕೆ ಎದುರಿಗಿದ್ದ ಫೋನ್ ಮೊಳಗಿತು. ರಿಸೀವರ್ ಕೈಗೆ ತೆಗೆದುಕೊಂಡ ಒಬ್ಬ ಪರಿಚಾರಕಿ ಪ್ರಾಚಿಗೆ ಫೋನ್ ಬಂದಿರುವುದಾಗಿ ತಿಳಿಸಿದಳು. ಪ್ರಾಚಿ ರಿಸೀವರನ್ನು ಕೈಗೆ ತೆಗೆದುಕೊಂಡು ಕಿವಿಯಲ್ಲಿಟ್ಟುಕೊಂಡಳು.

"ಹಲೋ ಚೆಲುವೆ... ನಿನ್ನ ಅಪರೂಪ ಫೀಚರ್ಸ್‌ಗಳ ಮೇಲೆ ಕೃತಕ ರಾಸಾಯನಿಕಗಳನ್ನೆಲ್ಲ ಲೇಪಿಸಿಕೊಂಡು ಕೆಡಿಸಿಕೊಳ್ಳಬೇಡ, ನೈಸರ್ಗಿಕವಾಗಿ ಚೆಲುವೆಯೇ ನೀನು."

ಅವಳ ಹೃದಯ ದಸಕ್ಕನೆ ಗಂಟಲಲ್ಲಿ ಸಿಕ್ಕಿಕೊಂಡಂತಾಯಿತು. ಸುತ್ತಲೂ ಒಮ್ಮೆ ನೋಡಿದಳು. ಕಿವಿಯಲ್ಲಿ ಅವಳು ಸಹಿಸಲಸಾಧ್ಯವಾದ ಮಾತುಗಳೇ ಅಲ್ಲದೆ ಗೊಂದಲ, ಅಸ್ತವ್ಯಸ್ತತೆ, ನಾಚಿಕೆ, ಅಪಮಾನದಲ್ಲಿ ಮುಳುಗಿದ್ದಾಳೆ. ದಿಢೀರನೆ ರಿಸೀವರನ್ನು ಕ್ರೆಡಲ್ ಮೇಲಿಟ್ಟು ಅವಸರದ ಕೆಲಸವಿರುವುದಾಗಿ ಮೇಲ್ವಿಚಾರಕಿಗೆ ತಿಳಿಸಿ, ಸರಸರನೆ ಹೊರಕ್ಕೆ ನಡೆದುಬಿಟ್ಟಳು. ಕಾರು ವೇಗವಾಗಿ ಧಾವಿಸಿ ಬಂದು ಮನೆಯ ಮುಂದೆ ನಿಂತುಕೊಂಡಿತು.

ಪವನ್ ಪುಸ್ತಕದಲ್ಲಿ ಮಗ್ನನಾಗಿದ್ದಾನೆ. ಸರಸರನೆ ಒಳಕ್ಕೆ ಬಂದ ಪ್ರಾಚಿ ಬೆದರಿದ ಹುಲ್ಲೆಯಂತೆ ಪವನ್ ಪಕ್ಕಕ್ಕೆ ಸೇರಿಕೊಂಡಳು. ಪುಸ್ತಕದಿಂದ ತಲೆ ಎತ್ತಿದ ಪವನ್ 'ಪ್ರಾಚಿ ಪಾರ್ಲರ್‌ಗೆ ಹೋಗಲಿಲ್ಲವೆ?" ಕೇಳಿದ. ಅವಳ ಕಣ್ಣುಗಳಲ್ಲಿ ನಿಜವಾಗಿಯೂ ಗಾಬರಿ ತುಂಬಿಕೊಂಡಿತ್ತು. ಒಮ್ಮೆಲೇ ಅರ್ಥಮಾಡಿಕೊಂಡ ಪವನ್,

"ಏಕೆ ಪ್ರಾಚಿ ಫೋನ್ ಬಂದಿತ್ತೆ?" ಪ್ರಾಚಿ ತಲೆ ಬಗ್ಗಿಸಿಕೊಂಡು ಇನ್ನಷ್ಟು ಹತ್ತಿರಕ್ಕೆ ಸೇರಿಕೊಂಡಳು. ಪವನ್‌ಗೆ ಕೂಡಲೆ ಏನು ಮಾತನಾಡಬೇಕೋ, ಯಾವ ರೀತಿಯಲ್ಲಿ ಸಮಾಧಾನ ಪಡಿಸಬೇಕೋ ಅರ್ಥವಾಗದೆ ಪ್ರಾಚಿಯನ್ನು ಹತ್ತಿರದಿಂದ ಆತ್ಮೀಯವಾಗಿ ಅಪ್ಪಿಕೊಳ್ಳುತ್ತಾ,

"ಅಷ್ಟೊಂದು ತಳಮಳವಾಗುವ ಅವಶ್ಯಕತೆಯಿಲ್ಲ. ಧೈರ್ಯವಾಗಿರು" ಸಮಾಧಾನ ಮಾಡತೊಡಗಿದ.

ಮನೆಗೆ ಫೋನ್ ಮಾಡಿದರೆ, ಫೋನ್ ಮುಖಾಂತರ ಬೆನ್ನಟ್ಟುವುದನ್ನು ಅರಿತುಕೊಂಡಿರುವ ಆಗಂತಕ ಈಗ ಪ್ರಾಚಿ ಹೊರಗೆ ಹೋಗುವುದನ್ನೇ ಕಾಯುತ್ತಿದ್ದಂತಿದೆ. ಪವನ್ ಪ್ರಾಚಿಯನ್ನು ಸಮಾಧಾನ ಮಾಡುತ್ತಿರುವುದರ ಜೊತೆಯೇ ತನ್ನ ಕಣ್ಣುಗಳನ್ನು ಸಣ್ಣದಾಗಿಸಿಕೊಂಡು ಏನೋ ಸಂದೇಹವನ್ನು ಎಲ್ಲಿಗೋ ಜೋಡಿಸಿಕೊಳ್ಳುತ್ತಾ ತನ್ನೊಳಗೆಯೆ ಯೋಚಿಸತೊಡಗಿದ.

ಪ್ರಾಚಿ ಮಾತ್ರ ಎಂದಿಗಿಂತ ಇಂದು ಹೆಚ್ಚಿಗೆ ಗಾಬರಿಯಾಗಿದ್ದಾಳೆ.

"ಪವನ್ ಈ ಸಮಸ್ಯೆಯಿಂದ ತನ್ನನ್ನು ಹೇಗಾದರೂ ರಕ್ಷಿಸು, ಇದಕ್ಕಿನ್ನ ಹೆಚ್ಚಿಗೆ ನನ್ನಿಂದ ಸಹಿಸಲಾಗುವುದಿಲ್ಲ. ನನಗೆ ಇನ್ನೊಮ್ಮೆ ಫೋನ್ ಬರಬಾರದು, ಬೇಕಾದರೆ ಬೆಂಗಳೂರೇ ಬಿಟ್ಟುಬಿಡುತ್ತೇನೆ, ನೀನು ನನ್ನ ಜೊತೆ ನಡೆ ಮುಂಬಯಿಗೆ ಹೋಗೋಣ, ನನಗೇಕೋ ಭಯಾ ಆಗುತ್ತೆ. ಈ ರೀತಿಯಾಗಿ ದಿನೇ ದಿನೇ ಶಿಥಿಲವಾಗಲಾರೆ."

ಎಷ್ಟೊ ದಿನದಿಂದ ತಡೆಹಿಡಿದಿದ್ದ ಆತಂಕವೆಲ್ಲಾ ಒಮ್ಮೆಲೇ ಹರಿಯತೊಡಗಿತು. ಪ್ರಾಚಿಗಿನ್ನ ಎಷ್ಟೋ ಪಟ್ಟು ಅಚಲನಾದ ಪವನ್ ಕೂಡ ಸಡಿಲಗೊಂಡ. ಇದಕ್ಕೊಂದು ಪರಿಹಾರ ಕಂಡುಕೊಳ್ಳಬೇಕೆನ್ನುವ ದೃಢವಾದ ಹೆಜ್ಜೆಯನ್ನು ಮನಸ್ಸಿನಲ್ಲೇ ನಿಶ್ಚಯಿಸಿಕೊಳ್ಳುತ್ತಾ ರಿಸೀವರನ್ನು ಕೈಗೆ ತೆಗೆದುಕೊಂಡು ತನಗೆ ತಿಳಿದಿರುವ ಕೆಲವು ಸಂಖ್ಯೆಗಳನ್ನು ಒತ್ತುತ್ತಾನೆ.

ಒತ್ತಿದ ಸಂಖ್ಯೆಗಳು ಒಂದಾಗಿ ಪೊಲೀಸ್ ಅಧಿಕಾರಿಯ ಕಚೇರಿಗೆ ನುಗ್ಗುತ್ತವೆ. ಅಲ್ಲಿನ ಪೊಲೀಸ್ ಪೇದೆ ಅದನ್ನು ಅಧಿಕಾರಿಗೆ ತಲುಪಿಸುತ್ತಾನೆ. ಪೊಲೀಸ್ ಅಧಿಕಾರಿ ತರುಣಕುಮಾರ್ ಒಬ್ಬನೇ ಪವನ್‌ನ ಆಹ್ವಾನದ ಮೇರೆಗೆ ನೇರವಾಗಿ ಮನೆ ತಲುಪುತ್ತಾನೆ, ಸಿವಿಲ್ ಉಡುಪಿನಲ್ಲೆ.

ಪವನ್, ಪ್ರಾಚಿ ಮತ್ತು ತರುಣ್‌ಕುಮಾರ್ ಸುಮಾರು ಹೊತ್ತು ಮಾತನಾಡಿದ ಮೇಲೆ ತರುಣ್‌ಕುಮಾರ್ ಕಥೆಗೆ ಇನ್ನೊಂದು ತಿರುವು ನೀಡುತ್ತಾನೆ. ಅವನ ಮಾತುಗಳಲ್ಲಿ ನೀವೇ ಕೇಳಿ...

"ನಿಮಗೆ ಫೋನ್ ಮಾಡುತ್ತಿರುವ ಆಗಂತಕನ ಬಗ್ಗೆ ನಮಗೆ ಈಗಾಗಲೇ ಸುಳಿವು ಸಿಕ್ಕಾಗಿದೆ, ಹೆಚ್ಚು ಕಮ್ಮಿ ಅವನ ಮುಖಚರ್ಯೆ ಕೂಡ ಗೊತ್ತಾಗಿದೆ, ಆದರೆ ಅವನ ಪೂರ್ಣ ಭಾವಚಿತ್ರ ಇನ್ನೂ ಸಿಕ್ಕಿಲ್ಲ."

"ಅಂದರೆ"

"ಅಂದರೆ ಅವನನ್ನು ನೋಡಿರುವ ಕಣ್ಣುಗಳು ನಮ್ಮಲ್ಲಿವೆ. ನಮಗೆ ಸಹಾಯ ಮಾಡಲು ತಯಾರಿವೆ. ಈಗ ಅವನನ್ನು ಹುಡುಕಿ ಹಿಡಿದುಕೊಳ್ಳಬೇಕಷ್ಟೇ, ನಮ್ಮ ಕೆಲಸ."

ಪವನ್ ಪ್ರಾಚಿ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡು, ಅವನ ಸುಳಿವು ಸಿಕ್ಕಿದೆ ಅಂದರೆ ಹೇಗೆ? ಅವನನ್ನು ನೋಡಿರುವವರಾದರೂ ಯಾರು? ಅವನೇ ನಮಗೆ ಫೋನ್ ಮಾಡುತ್ತಿರುವುದು ಅಂತ ಹೇಗೆ ಹೇಳುತ್ತೀರಾ? ಕೇಳಿದರು.

ತರುಣ್‌ಕುಮಾರ್ ಒಂದು ಪೊಲೀಸ್ ನೋಟ ಬೀರಿ ಮತ್ತೆ ಹೇಳತೊಡಗಿದ. "ನೀವು ರೆಕಾರ್ಡ್ ಮಾಡಿಕೊಟ್ಟ ಟೇಪನ್ನು ಹಾಕಿ ಕೇಳುತ್ತಿರುವಾಗ, ಅನಿರೀಕ್ಷಿತವಾಗಿ ಒಂದೆಣ್ಣು ನಮ್ಮ ಕೋಣೆಯಲ್ಲಿದ್ದಳು. ಆ ಧ್ವನಿಯನ್ನು ಕೇಳುತ್ತಾ ಕೇಳುತ್ತಾ ಹೌಹಾರಿದ ಆ ಹೆಣ್ಣು ಇವನೇ... ಇವನೇ... ಎಂದು ಕೂಗಾಡಲು ಶುರು ಮಾಡಿದಳು. ಅವನೊಬ್ಬ ದೊಡ್ಡ ಮಾಮನೈರುರ್ ಕೂಡ. ಆ ಹೆಣ್ಣನ್ನು ಮೂರ್ಛೆಗೊಳಿಸಿ, ರೇಪ್ ಮಾಡುತ್ತಿದ್ದಾಗ ಆ ಹೆಣ್ಣಿಗೆ ನಿಗದಿತ ಸಮಯಕ್ಕಿಂತ ಮೊದಲೇ ಜ್ಞಾನಬಂದು, ಕಣ್ಣು ಬಿಟ್ಟು ನೋಡಿದ ತಕ್ಷಣ, ಪಿಸ್ತೂಲ್ ತೋರಿಸಿ ಮತ್ತೆ ಮಾತ್ರೆ ನುಂಗಿಸಿ ಮೂರ್ಛೆಗೊಳಿಸಿ ಬೆಂಗಳೂರು ಅರಮನೆ ಆವರಣದಲ್ಲಿ ಬಿಟ್ಹೋಗಿದ್ದಾನೆ. ನನಗೆ ತಿಳಿದಂತೆ ಇನ್ನೂ ಕೆಲವು ಇದೇ ರೀತಿಯ ದೂರುಗಳು ದಾಖಲಾಗಿವೆ, ಬಹುಶಃ ಅವನೇ ಇದರಲ್ಲೆಲ್ಲಾ ಇನ್‌ವಾಲ್ವ್ ಆಗಿರಬೇಕೆಂದುಕೊಳ್ಳುತ್ತೇನೆ.

"ಆ ಹೆಣ್ಣು ಯಾರು?"

"ಕ್ಷಮಿಸಿ ಮಿಸ್ಟರ್ ಪವನ್, ಕೆಲವು ನಿಯಮಗಳ ಮೇರೆಗೆ ಅವಳ ಪರಿಚಯವನ್ನು ನಿಗೂಢವಾಗಿಯೇ ಇಡಲಾಗಿದೆ."

"ಅಂದರೆ ನೀವು ಅವನನ್ನು ಹಿಡಿದುಕೊಳ್ಳುವುದಕ್ಕೆ ಏನು ಯೋಚಿಸಿದ್ದೀರಾ?"

"ಅದಕ್ಕೆ ನಾನು ಬಂದಿರುವುದು. ಕೆಲವು ಪ್ಲಾನುಗಳನ್ನು ರೂಪಿಸಿದ್ದೇವೆ, ಜೊತೆಗೆ ನೀವೂ ನಮಗೆ ಸ್ವಲ್ಪ ಸಹಾಯ ಮಾಡಿದರೆ ಹತ್ತಿರದಲ್ಲೇ ಅವನನ್ನು ಹಿಡಿದುಕೊಳ್ಳಬಹುದೆನ್ನುವ ಅಭಿಪ್ರಾಯ ನಮಗಿದೆ. ಒಂದು ಪ್ರಯತ್ನ ನಾವೇ ಮಾಡುತ್ತಿದ್ದೇವೆ. ಎರಡನೆಯದು ನೀವು ಪೊಲೀಸ್ ಜೊತೆಗೆ ಸಹಕಾರ ನೀಡಬೇಕು."

"ಅದು ಹೇಗೆ?"

"ಮಿಸ್ಟರ್ ಪವನ್, ನಾವೇಳಿದಂತೆ ಆ ಆಗಂತಕನು ಫೋನ್ ಮಾಡಿದಾಗ ಅವನ ಅಪೇಕ್ಷೆಯಂತೆ ನಡೆದುಕೊಳ್ಳುವ ಹಾಗೆ ನಟಿಸಿ, ಅವನು ಕರೆದಲ್ಲಿಗೋ ಅಥವಾ

ಮಿಸಸ್ ಪ್ರಾಚಿ ಅವನನ್ನು ಒಂದು ಸ್ಥಳದಲ್ಲಿ ಭೇಟಿಯಾಗುವ ರೀತಿಯಲ್ಲೊ ಹಿಡಿದುಕೊಳ್ಳಬೇಕು.

ಪ್ರಾಚಿ ಹೌಹಾರಿ ಒಮ್ಮೆಲೇ ಭಯಭೀತಳಾದಳು. "ಅಂದರೆ ಮೊದಲು ಅವನಿಂದ ಸಂಪರ್ಕ ಬೆಳೆಸಿಕೊಳ್ಳಬೇಕು. ನಂತರ ಅವನನ್ನು ಹಿಡಿದುಕೊಳ್ಳುವುದಕ್ಕೆ ತೊಂದರೆಯಾಗುವುದಿಲ್ಲ. ಈಗ ಅವನು ಹೊರಗಡೆಗೆ ಬರಬೇಕಷ್ಟೇ."

"ನಿಮಗೆ ಯಾವ ರೀತಿಯಲ್ಲೂ ತೊಂದರೆ ಆಗದಂತೆ ನೋಡಿಕೊಳ್ಳುವ ಜವಾಬ್ದಾರಿ ನಮಗಿರಲಿ" ಪ್ರಾಚಿಯ ಕಡೆ ನೋಡುತ್ತಾ ಹೇಳಿದ ಪೊಲೀಸ್ ಅಧಿಕಾರಿ.

ಪ್ರಾಚಿ ಅವನ ಬಗ್ಗೆ ಕೇಳುತ್ತಾ ಕೇಳುತ್ತಾ ಇನ್ನಷ್ಟು ಭಯಭೀತಳಾಗಿ ದಿಗ್ಭ್ರಾಂತಳಾಗಿದ್ದಾಳೆ. ಪವನ್ ಮಾತ್ರ ವಿಧವಿಧವಾಗಿ ಯೋಚಿಸುತ್ತಾ ಕೇಳಿಸಿಕೊಳ್ಳುತ್ತಿದ್ದಾನೆ.

ಅಷ್ಟರಲ್ಲಿ ಅಡಿಗೆ ಕೆಲಸದಾಳು ರಾಮು ಟ್ರೇನಲ್ಲಿ ಕೆಲವು ತಿಂಡಿಗಳ ಜೊತೆಗೆ ಕಾಫಿ ಕಪ್‌ಗಳನ್ನು ಮೇಜಿನ ಮೇಲಿಟ್ಟು ಒಳಕ್ಕೋದ. ತರುಣ್‌ಕುಮಾರ್ ಚೇಳಿನಿಂದ ಕುಟ್ಟಿಸಿಕೊಂಡವನಂತೆ ತನ್ನ ಪೊಲೀಸ್ ವಾಸನೆಯ ಮುಖಾಂತರ ಏನೋ ಸಂದೇಹಿಸಿ "ಈ ಹುಡುಗ ಯಾರು?" ಕೇಳಿದ.

ನಮ್ಮ ಕೆಲಸದಾಳು, ಪವನ್ ಉತ್ತರಿಸಿದ. "ಈ ಹುಡುಗ ಬಹಳ ಚಾಲೂ ಇದ್ದಾನೆ"

"ಹೌದು, ಮಿಸಸ್ ಪವನ್‌ಗೆ ಫೋನ್ ಬಂದಿದ್ದು ಸರಿಯಾಗಿ ಹತ್ತು ಗಂಟೆ ಇರಬಹುದೆಂದು ತಿಳಿಸಿದ್ದಿರಿ, ಅದರ ಮಧ್ಯೆ ಮನೆಗೇನಾದರೂ ಫೋನ್ ಬಂದಿತ್ತೆ?"

ಪವನ್ ಸ್ವಲ್ಪ ಆಶ್ಚರ್ಯಚಕಿತನಾಗಿ "ಹೌದು ಫೋನ್ ಬಂದಿತು" ಎಂದ ಉತ್ತರ ಕಂಡುಕೊಂಡ ತರುಣ್‌ಕುಮಾರ್ "ಇದಕ್ಕೆ ಮುಂಚೆಯೂ ಅಷ್ಟೇ ಮಿಸೆಸ್ ಪವನ್‌ಗೆ ಹೊರಗೆ ಕೂಡ ಫೋನ್ ಬರುತ್ತದೆಂದಿರಿ, ಅವರ ಚಲನೆಯ ಬಗ್ಗೆ ಯಾವುದೋ ಒಂದು ಮೂಲದಿಂದ ಆಗಂತಕ ತಿಳಿದುಕೊಳ್ಳುತ್ತಿದ್ದಾನೆ. ಆ ಮೂಲ ಇವನೇ ಇರಬೇಕೆನಿಸುತ್ತದೆ. ನೀವು ಅಪ್ಪಣೆ ಕೊಟ್ಟರೆ ಎರಡೆ ನಿಮಿಷಗಳಲ್ಲಿ ಅವನಿಂದ ವಿಷಯ ಕಕ್ಕಿಸಿ ಬಿಡುತ್ತೇನೆ" ತರುಣಕುಮಾರ್ ಹೇಳಿದ್ದೆ,

ಪವನ್, ಪ್ರಾಚಿ ಇಬ್ಬರೂ ಒಬ್ಬರನ್ನೊಬ್ಬರು ನೋಡಿಕೊಂಡರು.

"ಇಲ್ಲ ಇಲ್ಲ ಅವನು ಅಂತಹವನಲ್ಲ" ಪ್ರಾಚಿ ಭೀತಿಗೊಂಡವಳಂತೆ ಹೇಳಿದಳು. "ಅವನೇ ಅಂತ ನಾನೆಲ್ಲಿ ಹೇಳಿದೆ? ಬಹುಶಃ ಏನಾದರೂ ಸಂಬಂಧವಿದೆಯೇನೋ ತಿಳಿದುಕೊಂಡರೆ ಸಹಾಯವಾಗಬಹುದು" ತರುಣ್‌ಕುಮಾರ್ ಹೇಳಿದ.

"ನೀವೊಂದು ಕೆಲಸಮಾಡಿ, ನಾನೇ ಅವನಿಂದ ಮೊದಲು ತಿಳಿದುಕೊಳ್ಳುತ್ತೇನೆ." ಪವನ್ ಹೇಳುವುದನ್ನು ಮಧ್ಯೆದಲ್ಲಿ ತುಂಡರಿಸಿದ ತರುಣ್ "ಈಗಾಗಲೇ ಸಾಕಷ್ಟು ತಲೆ ಕೆಡಿಸಿರುವ ಈ ಕೇಸನ್ನು ಇನ್ನಷ್ಟು ದಿನ ಬಿಟ್ಟರೆ ಸಾಕಷ್ಟು ತಲೆ ನೋವಾಗುತ್ತದೆ. ನಮಗಂತೂ ಏನೂ ಇಲ್ಲ, ತೊಂದರೆ ನಿಮಗೆ ಮಾತ್ರ"

"ಹಾಗಾದರೆ ಏನು ಮಾಡೋಣ ಎನ್ನುತ್ತೀರಾ?"

"ಏನೂ ಇಲ್ಲ, ನೀವು ಅವನನ್ನು ಕರೆಯಿರಿ"

"ನೀವು ಅವನನ್ನು ಹೊಡೆಯಬೇಡಿ" ಪ್ರಾಚಿ ಹೇಳಿದಳು.

"ಇಲ್ಲ, ಹೊಡೆಯುವುದಿಲ್ಲ."

"ರಾಮು... ರಾಮು..." ಎಂದಿದ್ದೆ ರಾಮು ಒಳಕ್ಕೆ ಬಂದ. ಸಿವಿಲ್ ಉಡುಪಿನಲ್ಲಿದ್ದ ತರುಣ್‌ಕುಮಾರ್ ಎದ್ದು ನಿಂತು ಮೇಲಿನಿಂದ ಕೆಳಗಿನವರೆಗೂ ನೋಡಿ "ಈ ಕಡೆ ಬಾರೋ" ಕರೆದ. ಪವನ್, ಪ್ರಾಚಿ ಇಬ್ಬರನ್ನೂ ನೋಡಿದ ರಾಮು ಸ್ವಲ್ಪ ಹತ್ತಿರಕ್ಕೆ ಸರಿದು ನಿಂತುಕೊಂಡ.

"ನೋಡು, ನಾನು ಪೊಲೀಸ್ ಇನ್ಸ್‌ಪೆಕ್ಟರ್, ಪೊಲೀಸ್ ಠಾಣೆಯಿಂದ ಬಂದಿದ್ದೇನೆ. ನೀನು ದಿನಾ ಫೋನ್‌ನಲ್ಲಿ ಮಾತನಾಡಿ ಮೇಡಮ್ ಎಲ್ಲಿಗೋಗಿದ್ದಾರೆ ಅನ್ನುವುದನ್ನು ತಿಳಿಸುವುದು, ಅವನ ಜೊತೆ ಮಾತನಾಡುವುದು, ಹಣ ತೆಗೆದುಕೊಳ್ಳುವುದು ಎಲ್ಲಾ ಗೊತ್ತಾಗಿಹೋಗಿದೆ, ನಿನ್ನನ್ನು ಬಂಧಿಸಿ ಪೊಲೀಸ್ ಠಾಣೆಗೆ ಎಳೆದುಕೊಂಡು ಹೋಗುವುದಕ್ಕಾಗಿಯೇ ಬಂದಿದ್ದೇನೆ" ಅಷ್ಟೇಳಿ ಅವನ ಮುಖವನ್ನೇ ದುರುಗುಟ್ಟಿ ನೋಡಿದ.

ಈ ಪೊಲೀಸ್‌ನವರಿಗೆ ಹೇಗಪ್ಪಾ ಗೊತ್ತಾಗಿಬಿಡುತ್ತೆ ಎಲ್ಲಾ ಎನ್ನುವಂತೆ ತಮ್ಮ ಮಾಲೀಕರ ಕಡೆಗೊಮ್ಮೆ ನೋಡಿದ.

"ನೋಡೋ ರಾಮು ನಿಜ ಹೇಳಿಬಿಡು. ನಾವು ನಿನ್ನನ್ನು ಪೋಲಿಸ್‌ನವರಿಗೆ ಒಪ್ಪಿಸುವುದಿಲ್ಲ. ನಿಜ ಹೇಳಿದರೆ ಪೊಲೀಸಿನವರೂ ಏನೂ ಮಾಡುವುದಿಲ್ಲ" ಪವನ್ ಹೇಳಿದ.

ರಾಮು, ತರುಣ್‌ಕುಮಾರ್ ಕಡೆಗೊಮ್ಮೆ ನೋಡಿದ. ಇದ್ದಕ್ಕಿದ್ದಾಗೆ ತರುಣ್‌ಕುಮಾರ್ ಮುಖದಲ್ಲಿದ್ದ ಕಣ್ಣುಗಳು ಬೆಂಕಿಯಿಂದ ಹೊತ್ತಿಕೊಂಡು ಮುಖದ ಸ್ನಾಯುಗಳು ಬಿಗಿದುಕೊಂಡವು. ಅವನ ರೂಪ ನೋಡಿದ ರಾಮುನೇ ಅಲ್ಲ ಪ್ರಾಚಿಯ ಮೈ ಕೂಡ ಕಂಪನಗೊಂಡಿತು.

"ನೋಡೋ ಇನ್ನೊಂದು ಸಲಾ ಹೇಳ್ತಾ ಇದ್ದೇನೆ, ನಿಮ್ಮ ಸಾಹೇಬರು

ಹೇಳಿದಂತೆ ಮಾಡು, ನಾನೇನೂ ಮಾಡುವುದಿಲ್ಲ, ಇಲ್ಲಾ ಅಂದರೆ, ಅಷ್ಟೇ... ನಿ ಪೊಲೀಸ್ ಠಾಣೆಗೆ ಬಂದು ಬಿಟ್ಟೆ ಅಂದರೆ ನಿನ್ನ ಕತೆ ಮುಗಿದೇ ಹೋಗುತ್ತೆ" ಎಲ್ಲವೂ ತಿಳಿದುಹೋಗಿದೆ ಎಂದುಕೊಂಡ ರಾಮು "ನಂದೇನು ತಪ್ಪಿಲ್ಲ. ಅವರೇ ಫೋನ್ ಮಾಡಿ ಕೇಳ್ತಾರೆ" ಎಂದ.

ಪ್ರಾಚಿ ಪವನ್ ಇಬ್ಬರೂ ಹೌಹಾರಿಬಿಟ್ಟರು.

"ಯಾರು? ನೀನು ನೋಡಿದ್ದೀಯಾ ತಾನೆ?"

"ನೋಡಿದ್ದೇನೆ."

"ಎಲ್ಲಿ?"

"ನಾನು ತರಕಾರಿ ಕೊಂಡುಕೊಳ್ಳುವುದಕ್ಕೋಗಿದ್ದಾಗ ಬಂದಿದ್ದ ಎರಡು ಸಲ ನೂರು ನೂರು ರೂಪಾಯಿ ಕೊಟ್ಟು ಮೇಡಮ್ ಎಲ್ಲಿಗೋಗುತ್ತಾರೆ ಅನ್ನುವುದು ಮಾತ್ರ ತಿಳಿಸು ಅಂತ ಹೇಳಿದರು."

"ಯಾವ ಮಾರ್ಕೆಟ್‌ನಲ್ಲಿ ಸಿಕ್ಕಿದ್ದ?" ಹೇಳಿದ.

"ಅವನೆಲ್ಲಿರುತ್ತಾನೆ ಗೊತ್ತೆ?"

"ಗೊತ್ತಿಲ್ಲ"

"ಹೇಗಿದ್ದಾನೆ?"

"ಉದ್ದಕ್ಕೆ ಕೆಂಪಗೆ ಇದ್ದಾರೆ" ಅವನ ಎಲ್ಲಾ ಫಿಜಿಕಲ್ ಅಪಿಯರನ್ಸ್ ಬಗ್ಗೆ ತಿಳಿದುಕೊಂಡು, ಜೊತೆಗೆ ಮಿಸ್ ದರ್ಶನಾ ತಿಳಿಸಿರುವ ಹೋಲಿಕೆಗಳಿಗೆ ತಾಳೀಕೆ ಮಾಡಿದಾಗ, ಅವನೇ ಇವನೆನ್ನುವುದು ಯಾವ ರೀತಿಯಲ್ಲೂ ಸಂದೇಹವಿಲ್ಲ ಎಂದುಕೊಂಡ ತರುಣ್ "ಅವನ ಬಗ್ಗೆ ಇನ್ನೇನೂ ಗೊತ್ತಿಲ್ಲವೆ?"

"ಸತ್ಯವಾಗಿಯೂ ಗೊತ್ತಿಲ್ಲ ಸಾರ್" ಎಂದ ರಾಮು.

"ಅವನೆಲ್ಲಿರುತ್ತಾನೆ ಅಥವಾ ಮತ್ತೆ ಇಂತಹ ದಿನ ಸಿಗುತ್ತೇನೆ ಅಂತ ಏನಾದರೂ ಹೇಳಿದ್ದಾನೋ"

"ಇಲ್ಲ"

"ಒಳ್ಳೆ ಹುಡುಗ, ನಿಜ ಹೇಳಿಬಿಟ್ಟೆ, ಇಲ್ಲ ಅಂದರೆ ಜೈಲಿಗೆ ಹೋಗಿಬಿಡುತ್ತಿದ್ದೆ"

"ಇವನು ನಮ್ಮ ಮನೆಯಲ್ಲಿರುವುದು ಬೇಡ, ಈಗಲೇ ಕಳುಹಿಸಿಬಿಡಿ" ಪ್ರಾಚಿ ಹೇಳಿದಳು. "ಇಲ್ಲ ಸದ್ಯಕ್ಕೆ ಅವನಿರಲಿ, ಅದನ್ನ ಆ ಮೇಲೆ ಮಾತನಾಡೋಣ" ಪವನ್ ಹೇಳಿದ.

ಈ ಹುಡುಗ ಒಳ್ಳೆಯವನೇ, "ನೋಡೋ ರಾಮು ನಾವೇಳಿದಂಗೆ ಮಾಡಬೇಕು. ಸದ್ಯಕ್ಕೆ ನಿನ್ನ ಕೆಲಸ ಮಾಡುಹೋಗು, ಎಲ್ಲಿಗೂ ಓಡಿಬಿಡಬೇಡ, ನಿನ್ನನ್ನ ಏನೂ ಮಾಡುವುದಿಲ್ಲ" ತರುಣ್ ಧೈರ್ಯ ಹೇಳಿದ. ರಾಮು ತಲೆ ಬಗ್ಗಿಸಿಕೊಂಡು ಒಳಕ್ಕೋದ. ಮುವರೂ ಮತ್ತೆ ಮಾತನಾಡಿ ಒಂದು ಅಂತಕ್ಕೆ ತಲುಪಿದರು. "ನಿಮ್ಮ ಸಹಾಯದಿಂದ ಅವನನ್ನು ಹಿಡಿದುಕೊಳ್ಳಬೇಕೆಂದು ಕೊಂಡಿದ್ದೆವು, ಆದರೆ ನಿಮ್ಮ ಅದೃಷ್ಟ ರಾಮೂನೇ ನಿಮ್ಮ ಸಹಾಯಕ್ಕೆ ಬಂದಿದ್ದಾನೆ, ಒಳ್ಳೆಯದೇ ಆಯಿತು" ತರುಣ್ ಹೇಳಿದ.

ರಾಮುನನ್ನು ಮತ್ತೆ ಕರೆದು ಅವನು ಮಾಡಬೇಕಾಗಿರುವ ಕೆಲಸದ ಬಗ್ಗೆ ಆದೇಶ ನೀಡಿ ಪ್ರತಿ ನಿಮಿಷವೂ ಅವನನ್ನು ಜಾಗೃತನಾಗಿರುವಂತೆ ಹೇಳಿ ಅಂದಿನ ಭಾರವನ್ನು ಇಳಿಸಿಕೊಂಡವನಂತೆ ಸ್ವಲ್ಪ ಸಮಾಧಾನದಿಂದ ನಿಟ್ಟುಸಿರಿಟ್ಟರು.



ಟೆಸ್ಟೋಸ್ಟಿರೋನ್ ಎನ್ನುವುದೊಂದು ಪುರುಷರಲ್ಲಿರುವ ಪ್ರತ್ಯೇಕ ಹಾರ್ಮೋನ್. ಬಹುಶಃ ಗಂಡಸರಲ್ಲಿ ಹೆಚ್ಚು ಕ್ರೂರತೆಯನ್ನೂ, ಧೈರ್ಯವನ್ನೂ ಪ್ರೇರೇಪಿಸುವುದು ಇದೇ ಟೆಸ್ಟೋಸ್ಟಿರೋನ್.

ಫೋನ್ ಬರುವುದನ್ನೇ ಎಲ್ಲರೂ ಕಾಯುತ್ತಿದ್ದಾರೆ. ಕೊನೆಗೊಮ್ಮೆ ಫೋನ್ ರಿಂಗಾಯಿತು. ಎಲ್ಲರ ಹೃದಯಗಳಲ್ಲೂ ಏನೋ ಒಂದು ರೀತಿಯ ಪುಡುಕಾಟ ಶುರುವಾಗಿದೆ. ಕ್ರೆಡಲ್ ಮೇಲಿನಿಂದ ರಿಸೀವರ್ ತೆಗೆದುಕೊಂಡ ರಾಮು "ಹಲೋ... ಹಲೋ..." ಎಂದ ಅಷ್ಟೆ.

"ಏನೋ ರಾಮು, ನಿಮ್ಮ ಮೇಡಮ್ ಇದ್ದಾರೋ?" ರಾಮು ಮಾತನಾಡುವುದನ್ನೇ ಮರೆತವನಂತೆ ಸುತ್ತಲೂ ನೋಡಿದ. ಅದೇ ಸ್ವರ, ಅವನ ಕಣ್ಣುಗಳು ಕಕ್ಕಾಬಿಕ್ಕಿಯಾಗಿ ಹೊತ್ತಿಕೊಂಡು ಉರಿದವು. ಸುತ್ತಲಿದ್ದವರು ತಮ್ಮ ಅಂಗಭಾವಗಳ ಜೊತೆಗೆ ಆದೇಶಕೊಟ್ಟರು ಮಾತನಾಡುವಂತೆ.

ರಾಮು ಮಾತನಾಡಿದ. "ಮೇಡಮ್ ಮನೆಯಲ್ಲಿಲ್ಲ."

"ಎಲ್ಲಿಗೋಗಿದ್ದಾರೆ?"

"ಎಲ್ಲೋ ಬೆಳಿಗ್ಗೇನೇ ಹೋದರು, ನಮ್ಮ ಸಾಹೇಬರ ಜೊತೆ, ಮತ್ತೆ ಬರುವುದು ಸಾಯಂಕಾಲಾನೆ. ಹೋಗುವಾಗ ಬರುವುದಕ್ಕೆ ಸಾಯಂಕಾಲ ಆಗುತ್ತೆ ಅಂತ ತಿಳಿಸಿದ್ದಾರೆ, ಆದರೆ ಎಲ್ಲಿಗೆ ಅಂತ ತಿಳಿಸಲಿಲ್ಲ"

"ಸರಿ, ಮತ್ತೆ ಫೋನ್ ಮಾಡುತ್ತೇನೆ."

"ಸಾರ್ ಸ್ವಲ್ಪ ಇರಿ, ಫೋನ್ ಕೆಳಗಿಡಿಬೇಡಿ."

"ಯಾಕೋ?"

"ಏನೂ ಇಲ್ಲ ನನಗೆ ಸ್ವಲ್ಪ ಹಣ ಬೇಕು, ಬರೋವಾರ ನಮ್ಮ ಹಳ್ಳಿಗೋಗಬೇಕು, ನಮ್ಮ ತಾಯಿಗೆ ಮೈ ಹುಷಾರಿಲ್ಲಾಂತ ಕಾಗದ ಬಂದಿದೆ. ನೀವು ದಯವಿಟ್ಟು ಸಹಾಯ ಮಾಡಬೇಕು ಸಾರ್"

"ಎಷ್ಟು ಬೇಕು?"

"ಒಂದು ಐನೂರು ಬೇಕಿತ್ತು, ನಿಮ್ಮಿಷ್ಟ ಎಷ್ಟು ಕೊಟ್ಟರೂ ಸರೀನೆ"

"ಅದು ಸರಿ, ನೀನು ಎಲ್ಲಿಗೆ ಬರುತ್ತೀಯಾ. ನೀವೇ ಹೇಳಿ ನಾನೇ ಬರುತ್ತೇನೆ."

ಇಷ್ಟು ಮಾತುಗಳನ್ನು ಫೋನ್‌ನಲ್ಲಿ ಮಾತನಾಡುತ್ತಿರುವಾಗಲೇ ಇನ್ನೊಂದು ಫೋನ್ ಮುಖಾಂತರ ದೂರವಾಣಿಯ ಸಹಾಯ ಇಂಜಿನೀಯರ್, ಫೋನ್ ಬರುತ್ತಿರುವ, ಮೀಟರುಗಳಿಗಿರುವ ಪೂರ್ತಿ ರ್‍ಯಾಕನ್ನೇ ವೆಡ್ಜ್‌ನಲ್ಲಿಟ್ಟು ಒಂದೊಂದೇ ಮೀಟರನ್ನು ಚಕಚಕನೆ ಚೆಕ್ ಮಾಡಿ ಫೋನ್ ಬರುತ್ತಿರುವ ಸಂಖ್ಯೆಯನ್ನು ಗುರುತಿಸಿಕೊಂಡು, ನಗರ ಫ್ಲಾಯಿಂಗ್ ಸ್ಕ್ವಾಡ್‌ಗೆ ತಿಳಿಸುತ್ತಾನೆ.

ತರುಣ್‌ಕುಮಾರ್ ಇರುವ ಫ್ಲಾಯಿಂಗ್ ಸ್ಕ್ವಾಡ್ ಫೋನ್ ಬರುತ್ತಿರುವ ವಿಳಾಸಕ್ಕೆ ಒಂದೇ ವೇಗದಲ್ಲಿ ಧಾವಿಸುತ್ತದೆ. ಶರವೇಗದಲ್ಲಿ ಧಾವಿಸಿ ಬರುತ್ತಿರುವ ರೋಪ್ಲಸ್ ಗಾಡಿ ಫೋನ್ ಬರುತ್ತಿರುವ ಸ್ಥಳಕ್ಕಿಂತ ಸುಮಾರು ಆರು ಕಿ.ಮೀಟರು ದೂರದಲ್ಲಿದೆ. ಇನ್ನೂ ಹೆಚ್ಚೆಂದರೆ ಸುಮಾರು ಐದು ನಿಮಿಷಗಳಾದರೂ ಹಿಡಿಯುತ್ತದೆ. ಹೇಗಾದರೂ ಮಾಡಿ ಹಿಡಿದುಕೊಳ್ಳುವ ಚಲ ಕ್ಷಣಕ್ಷಣಕ್ಕೂ ಅವನನ್ನು ಹುಚ್ಚನಾಗಿಸಿಬಿಟ್ಟಿದೆ. ಮೈಮರೆತವನಂತೆ ಸಣ್ಣಗೆ ಕಂಪನಗೊಂಡಿದ್ದಾನೆ. ರೋಪ್ಲಸ್ ಅವನ ಮನವನ್ನು ಅರಿತಂತೆ ಓಡುತ್ತಿದೆ.

ಎಲ್ಲೋ ತನ್ನ ಮೆದುಳಿನ ಒಂದು ಮೂಲೆಯಲ್ಲಿ ಸಣ್ಣದಾಗಿ ಎದ್ದ ಒಂದೆಳೆ ಸಂಶಯವನ್ನು ಹಾಗೆ ಒತ್ತಿಟ್ಟ ಆಗಂತಕ ಆಯಿತು ಕೊಡುತ್ತೇನೆ, ನೀನು ಸರಿಯಾಗಿ ಹೆನ್ನೆರಡು ಗಂಟೆಗೆ ಒಂದು ಸ್ಥಳದ ಹೆಸರೇಳಿ ಅಲ್ಲಿಗೆ ಬಾ" ಎಂದಿದ್ದೆ ಫೋನ್ ಕೆಳಗಿಟ್ಟ, ಸಾರ್ವಜನಿಕ ಬೂತ್‌ನಿಂದ ಹೊರಗೆ ಬಂದು ಸುತ್ತಲು ನೋಡಿದ. ಅವನಿಗೆ ಅನುಮಾನ ಬರುವಂತಹ ಯಾವ ದೃಶ್ಯವೂ ರಸ್ತೆಯ ಮೇಲೆ ಗೋಚರವಾಗಲಿಲ್ಲ. ರಸ್ತೆಯ ಪಕ್ಕದಲ್ಲೇ ನಿಲ್ಲಿಸಿದ್ದ ಕಾರಿನ ಬಾಗಿಲು ತೆರೆದು ಒಳಗಡೆ ಕುಳಿತುಕೊಳ್ಳುತ್ತಾ ಬಾಗಿಲನ್ನು ಮುಚ್ಚಿಕೊಂಡು ಕಾರನ್ನು ರಸ್ತೆಯ ಮಧ್ಯಕ್ಕೆ ಓಡಿಸಿ ಎಡಬಲಗಳಿಂದ ಕಿಟಕಿಯ ಬದಿಗಳನ್ನು ನೋಡಿದ. ಫೋಟೋಕ್ರೋಮ್ ದರ್ಪಣಗಳಿಂದ ಅಕ್ಕಪಕ್ಕದ

ವಸ್ತುಗಳು ತಂಪನ್ನು ತುಂಬಿಕೊಂಡಿದ್ದರ ಜೊತೆಗೆ ಒಳಗಿನ ಚಿತ್ರಣವನ್ನು ಹೊರಗಿನವರಿಗೆ ತೋರಿಸದೆ ರಹಸ್ಯವಾಗಿಯೇ ಇಟ್ಟುಕೊಂಡಿವೆ.

ಆಗ ಎದುರಿಗೆ ತರುಣ್‌ಕುಮಾರ್ ಇರುವ ರೋಪ್ಲಸ್ ಫ್ಲಾಯಿಂಗ್ ಸ್ಕ್ವಾಡ್ ವೇಗವಾಗಿ ಕಾಣಿಸಿಕೊಳ್ಳುತ್ತದೆ. ಎಲ್ಲೋ ಕುಟ್ಟಿಸಿಕೊಂಡಂತಾದ ಕಾರು ತನ್ನ ವೇಗವನ್ನು ಹೆಚ್ಚಿಸಿಕೊಳ್ಳದೆ ಸಾಮಾನ್ಯವಾಗಿಯೇ ಓಡತೊಡಗುತ್ತದೆ. ಹತ್ತಿರ ಹತ್ತಿರ ಬರುತ್ತಿರುವಂತೆ ತರುಣ್ ಕಾರಿನ ಸಂಖ್ಯೆಯನ್ನು ಗುರುತಿಸಿಕೊಳ್ಳುತ್ತಾನೆ. ಇನ್ನೇನು ತಾನು ಸೇರಬೇಕಾಗಿರುವ ವಿಳಾಸ ಸಾರ್ವಜನಿಕ ಬೂತ್ ಬಂದೇ ಬಿಟ್ಟಿತ್ತಲ್ಲಾ ಎಂದುಕೊಂಡವನೆ ವೇಗವನ್ನು ಕಡಿಮೆ ಮಾಡಿಕೊಳ್ಳುತ್ತಾ ಕಾರಿನ ಕಡೆ ನೊಡುತ್ತಾನೆ. ಆದರೆ ಕಾರಿನೊಳಗಿರುವುದು ಗಂಡೋ ಹೆಣ್ಣೋ ಎನ್ನುವುದು ಕೂಡ ಗುರುತಿಸಲಾರದೆ ಮುಂದಕ್ಕೆ ಹೋಗಿ, ರಸ್ತೆಯ ಪಕ್ಕಕ್ಕೆ ನಿಲ್ಲಿಸಿ ಬೂತ್ ಹತ್ತಿರಕ್ಕೋಗುತ್ತಾನೆ. ಬೂತ್‌ನಲ್ಲಿ ಯಾರೂ ಇಲ್ಲ. ರೋಪ್ಲಸ್ ಹಿಂದಕ್ಕೆ ತಿರುಗಿಕೊಳ್ಳುತ್ತದೆ.

ಆ ಕಾರು ಒಂದು ಎರಡು ಮೂರು ಅಡ್ಡ ರಸ್ತೆಗಳನ್ನು ದಾಟಿ ಬಂದು ಒಂದು ಕಡೆ ನಿಲ್ಲುತ್ತದೆ. ಚಕಚಕನೆ ಇಳಿದು ಬಂದ ಆ ವ್ಯಕ್ತಿ ಕಾರಿನ ಸಂಖ್ಯೆಯನ್ನು ಬದಲಿಸುತ್ತಾನೆ. ಕಾರು ಮತ್ತೆ ಓಡುತ್ತದೆ. ಕಾರು ಓಡುತ್ತಿರುವಾಗಲೇ ತನ್ನ ಕಿಟಕಿಯ ಗಾಜುಗಳನ್ನು ತನ್ನ ಹೊಟ್ಟೆಯಲ್ಲಿ ಅಡಗಿಸಿಕೊಳ್ಳುತ್ತಾ ತನ್ನ ರೂಪವನ್ನೇ ಬದಲಾಯಿಸಿಕೊಳ್ಳುತ್ತದೆ.

ತರುಣ್‌ಕುಮಾರ್ ಮತ್ತೊಮ್ಮೆ ಪೆಚ್ಚುಮೋರೆ ಹಾಕಿಕೊಂಡು 'ಡ್ಯಾಮಿಟ್' ಎಂದು ಬೈಯುತ್ತಾ ಬೆನ್ನಟ್ಟುತ್ತಾನೆ. ಆದರೆ ಆ ಕಾರು ಅವನಿಗಿಂತ ಬಲು ದೂರದಲ್ಲಿ ತಾನು ಸೇರಬೇಕಾಗಿರುವ ಸ್ಥಳಕ್ಕೆ ತಲುಪುತ್ತದೆ. ಮುಂದಿನ ಚೆಕ್‌ಪೋಸ್ಟ್‌ಗೆ ವಾಯರ್‌ಲೆಸ್ ಮುಖಾಂತರ ತಿಳಿಸುತ್ತಾನೆ. ತನಗೆ ಸಂಶಯ ಬಂದ ರಸ್ತೆಗಳೆಲ್ಲವನ್ನೂ ಸುತ್ತುತ್ತಾನೆ. ಆದರೂ ಏನೂ ಉಪಯೋಗವಿಲ್ಲದೆ ಮತ್ತೊಮ್ಮೆ ಪವನ್ ಮನೆಗೆ ಬರುತ್ತಾನೆ.

ಪ್ರಾಚಿ ಪವನ್ ಆತುರದಿಂದ ತರುಣ್‌ನನ್ನು ಎದುರುಗೊಳುತ್ತಾರೆ. ಆದರೆ, ಉತ್ತರ ಅವನಲ್ಲಿರಲಿಲ್ಲ. ಪ್ರಾಚಿ ಪವನ್ ಇಬ್ಬರೂ ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತಾರೆ. ಒಂದರ್ಧ ನಿಮಿಷ ತಡವಾಯಿತು, ಅಷ್ಟೇ, ಪರಾರಿಯಾಗಿಬಿಟ್ಟ. ಕೈ ಕೈ ಹಿಸುಕಿಕೊಳ್ಳುತ್ತಾ ಹೇಳಿದ.

"ಆಯಿತು... ರಾಮು ಎಲ್ಲಿ?"

"ಇಲ್ಲೇ ಇದ್ದಾನೆ." ರಾಮು ಬಂದು ಎದುರಿಗೆ ನಿಂತುಕೊಂಡ. "ನೋಡು ರಾಮು, ನೀನೇನೂ ಭಯ ಪಡಬೇಡ, ಅವನೇಳಿರುವ ಸ್ಥಳ ಗೊತ್ತು ತಾನೆ"

"ಗೊತ್ತು"

"ಅಲ್ಲಿಗೋಗು, ಅವನು ಬಂದು ಹಣ ಕೊಟ್ಟರೆ ತೆಗೆದುಕೊಂಡು ಬಾ ಮಿಕ್ಕಿದ ವಿಷಯ ತಾನು ನೋಡಿಕೊಳ್ಳುತ್ತೇನೆ"

"ಪ್ರಯತ್ನ ಮಾಡುತ್ತೇನೆ, ಮಿಕ್ಕಿದ್ದು ಸಮಯವೇ ಉತ್ತರಿಸುತ್ತದೆ, ಎಂದವನೇ ಪವನ್‌ನ ಭುಜ ತಟ್ಟಿ ಹೊರಕ್ಕೆ ನಡೆಯುತ್ತಾನೆ, ತರುಣ್.

ರೋಪ್ಲಸ್ ಪೊಲೀಸ್ ಠಾಣೆಯ ಮುಂದೆ ನಿಂತುಕೊಳ್ಳುತ್ತದೆ. ತನ್ನ ಪೊಲೀಸ್ ಉಡುಪನ್ನು ಬಿಚ್ಚಿಟ್ಟು ಸಿವಿಲಿಯನ್ ಬಟ್ಟೆ ಧರಿಸಿ ೦.೩೬ ಪಿಸ್ತೂಲನ್ನು ಒಳ ಜೇಬಿಗೆ ಇಳಿಸಿ, ವಾಹನವನ್ನು ಠಾಣೆಯಲ್ಲೇ ಬಿಟ್ಟು ರಸ್ತೆಗೆ ಬಂದು ಆಟೋ ನಿಲ್ಲಿಸಿ ಸ್ಥಳ ತಿಳಿಸುತ್ತಾನೆ. ಆಟೋ ತಿಳಿಸಿದ ಸ್ಥಳದಲ್ಲಿ ನಿಲ್ಲುತ್ತದೆ. ಹಣಕೊಟ್ಟು ಸರಸರನೆ ನಡೆಯುತ್ತಾ ಬಂದು ಮುಕ್ತವಾಗಿ ಕಾಣುವ ಎರಡನೇ ಅಂತಸ್ತಿನಲ್ಲಿರುವ ಒಂದು ರೆಸ್ಟೋರೆಂಟ್‌ನ ಕಿಟಕಿಯಲ್ಲಿ ಕುಳಿತುಕೊಳ್ಳುತ್ತಾನೆ. ಅವನು ತಿಳಿಸಿರುವ ಸಮಯಕ್ಕೆ ಇನ್ನೂ ನಲವತ್ತೈದು ನಿಮಿಷಗಳಿವೆ. ಆ ಸ್ಥಳಕ್ಕೆ ಇನ್ನೂ ರಾಮು ಕೂಡ ಬಂದಿಲ್ಲ. ಏನೋ ಹೊಳೆದಂತೆ ಎದ್ದ ತರುಣ್‌ಕುಮಾರ್ ರೆಸ್ಟೋರೆಂಟ್‌ನ ವ್ಯವಸ್ಥಾಪಕನಲ್ಲಿಗೆ ಬಂದು "ನೋಡಿ ಇಲ್ಲಿಗೆ ನಮ್ಮ ಗೆಳೆಯರೊಬ್ಬರು ಬರುತ್ತೇನೆ ಅಂತ ತಿಳಿಸಿದ್ದಾರೆ, ಅವರು ಇನ್ನೇನು ಅರ್ಧ ಗಂಟೆಯೊಳಗೆ ಬರಬಹುದು, ನಿಮಗೆ ಏನೂ ಅಭ್ಯಂತರ ಇಲ್ಲ ಅಂದರೆ ಅಲ್ಲೇ ಕುಳಿತಿರುತ್ತೇನೆ" ಹೇಳಿದ.

"ಅರೆ ಅರ್ಧಗಂಟೆ ಅಲ್ಲ ಅಂದರೆ ಒಂದು ಗಂಟೇನೇ ಇರಿ" ಮಾಲಿಕ ಹೇಳಿದ. ತರುಣ್‌ಕುಮಾರ್ ಕುಳಿತುಕೊಂಡು ಕಿಟಕಿಯ ಹೊರಕ್ಕೆ ನೋಡತೊಡಗಿದ. ಹೋಟಲಿನಲ್ಲಿ ಮಾಮೂಲಿಯಾಗಿ ಜನರಿದ್ದಾರೆ. ಈಗ ರಾಮು ತಾನು ನಿಲ್ಲಬೇಕಾಗಿರುವ ಸ್ಥಳದಲ್ಲಿ ನಿಂತುಕೊಂಡಿದ್ದಾನೆ. ಕ್ಷಣಗಳು ನಿಮಿಷಗಳು ಉರುಳಿದವು. ಸಮಯ ಹನ್ನೆರಡು ಗಂಟು ದಾಟಿ ಒಂದು ಗಂಟೆಯ ಹತ್ತಿರ ಹತ್ತಿರಕ್ಕೆ ಬಂದಿದೆ. ಅದು ಹಾಗೆ ಆಗುತ್ತದೆಂದು ಅವನಿಗೆ ಮೊದಲೇ ತಿಳಿದಿದ್ದರಿಂದ, ಏನೂ ತಲೆ ಕೆಡಿಸಿಕೊಳ್ಳದಿದ್ದರೂ, ಸಾರ್ವಜನಿಕ ಬೂತಿನ ಎದುರಿಗೆ ಬಂದ ಕಾರು ಮಾತ್ರ ಅವನನ್ನು ಪದೇ ಪದೇ ರೊಚ್ಚಿಗೇಳಿಸುತ್ತಿದೆ, ಬೇರೆ ಯಾರೂ ಅಲ್ಲ ಆ ಕಾರಿನಲ್ಲಿದ್ದವನೇ ಆಗಿರಬೇಕು...?

ಹೋಟಲಿನಿಂದ ಹೊರಕ್ಕೆ ಬಂದು ಮತ್ತೆ ಆಟೋ ನಿಲ್ಲಿಸಿ ಒಂದು ಸ್ಥಳದ ಹೆಸರೇಳಿದ, ಆಟೋ ನೇರವಾಗಿ ಆರ್.ಟಿ.ಓ ಕಚೇರಿಯ ಮುಂದೆ ನಿಂತುಕೊಂಡಿತು. ನೇರವಾಗಿ ಮುಖ್ಯಾಧಿಕಾರಿಯಲ್ಲಿಗೆ ಹೋಗಿ ತನ್ನ ಪರಿಚಯ ತಿಳಿಸಿ ಕಾರಿನ ಸಂಖ್ಯೆ ಹೇಳಿದ. ಅಧಿಕಾರಿ ವಾಹನಗಳ ದಾಖಲೆ ಮಾಡಿರುವ ರಿಜಿಸ್ಟರ್ ತೆಗೆದುಕೊಂಡು

ಹೇಳಿದ ಸಂಖ್ಯೆಯನ್ನು ತರುಣ್ ಗುರುತಿಸಿಕೊಂಡ. ಆ ಸಂಖ್ಯೆ ಕುಮಾರ್ ಪಾರ್ಕಿನಲ್ಲಿರುವ ಒಂದು ವಿಳಾಸವಾಗಿದ್ದು, ತರುಣ್‌ಕುಮಾರ್ ನೇರವಾಗಿ ವಿಳಾಸಕ್ಕೆ ತಲುಪಿದರು ಅದೊಂದು ಮಂತ್ರಿಯ ಮನೆಯಾಗಿದ್ದು ಒಳಕ್ಕೋದ. ಸುಮಾರು ಜನ ನಿಂತಿದ್ದರು. ಅಲ್ಲಿಯೇ ಎದುರಿಗೆಯೇ ಅದೇ ಸಂಖ್ಯೆಯ ಕಾರು ನಿಂತಿದೆ, ಆದರೆ ಅಲ್ಲಿ ನೋಡಿದ ಕಾರು, ಈ ಕಾರು ಬೇರೆ ಬೇರೆ ಮಾಡೆಲ್ ಅಲ್ಲದೆ ಕಂಪನಿ ಕೂಡ ಬೇರೆ ಬೇರೆ... ಅಂದರೆ ಆ ಕಾರಿನ ಸಂಖ್ಯೆ ನಖಲು...? ತರುಣ್ ಮುಖವೆಲ್ಲಾ ಕೆಂಪಗಾಯಿತು. ತಲೆ ಸಿಡಿದಂತಾಗಿ ಹೊರಕ್ಕೆ ಬಂದ.



"Marriages are made in heaven" ಎನ್ನುವುದೊಂದು ಹಳೆ ಗಾದೆ, ಮದುವೆ ಎಲ್ಲಿಯೇ ಆಗಲಿ, ಆದರೆ ಮದುವೆಯಾದ ಮೇಲೆ ಸ್ವರ್ಗ ಅನ್ನುವುದೊಂದು ಇದೆ ಎನ್ನುವುದನ್ನು ಹೆಣ್ಣು-ಗಂಡುಗಳು ಕಂಡಿಡಿಯುತ್ತಾರೆ. ಹೆಣ್ಣಿಗೆ ಸರಿಯಾದ ಪ್ರಾಯದಲ್ಲಿ ಮದುವೆಯಾದರೆ ಅವಳ ಸೊಗಸು ಇಮ್ಮಡಿ ಆಗುತ್ತದಂತೆ, ಅದೇ ಪ್ರಾಯ ತಪ್ಪಿದ ಮೇಲೆ ಮದುವೆಯಾದರೆ ಅದು ಮದುವೆಯಲ್ಲ ಎನ್ನುತ್ತಾರೆ ದೊಡ್ಡವರು.

ಶಾಲಿನಿಯ ಚೆಲುವು ದಿನದಿನಕ್ಕೆ ಇಮ್ಮಡಿಯಾಗುತ್ತಾ ಇನ್ನಷ್ಟು ರಂಗು ತುಂಬಿಕೊಳ್ಳುತ್ತದೆ. ಕೂದಲು ವಿದ್ಯುತ್ ಕಿರಣಗಳಲ್ಲಿ ಜಳಕವಾಡಿದಂತೆ ಹೊಳೆಯುತ್ತಿವೆ. ತಂಪು ರಾತ್ರಿಯ ಮುಸುಕಿನಲ್ಲಿ ನಿದ್ದೆಹೋಗಿದ್ದ ಗುಲಾಬಿ ಮೊಗ್ಗುಗಳು ಬೆಳಿಗಿನ ಎಳೆ ಬಿಸಿಲಿಗೆ ಅರಳಿಕೊಳ್ಳುವಂತೆ ಅವಳ ಎದೆಗಳು ಅರಳುತ್ತಿವೆ. ವಿನೋದ್ ಕೂಡ ಅಷ್ಟೇ ದಿನದಿನಕ್ಕೆ ಇನ್ನಷ್ಟು ಸ್ಮಾರ್ಟ್ ಆಗಿ ಕಾಣತೊಡಗಿದ್ದಾನೆ. ದಿನಗಳನ್ನು ಅವರಿಬ್ಬರೂ ಬಹಳ ಸಣ್ಣಗೆ ಕುಗ್ಗಿಸಿಬಿಟ್ಟಿದ್ದಾರೆ.

ಮೆತ್ತನೆಯ ಜೋಡಿ ಹಾಸಿಗೆಯ ಮೇಲೆ ಇಬ್ಬರು ಬಹಳ ಹಳೆಯ ಗೆಳೆಯರಂತೆ ಯದ್ವಾತದ್ವಾ ಉರುಳಿಕೊಂಡಿದ್ದಾರೆ. ಸುಗಂಧ ಅವನ ಮುಖವನ್ನು ರಾಚುತ್ತದೆ. ಕೈಗಳ ಜೊತೆ ದೇಹವೂ ಅವಳನ್ನು ಹೆಣೆದುಕೊಳ್ಳುತ್ತವೆ. ನಿಧಾನವಾಗಿ ಶುರುವಾದ ಆಟ ವೇಗವಾದ ಶ್ವಾಸೋಚ್ಛ್ವಾಸಗಳಾಗಿ ಮಾರ್ಪಡುತ್ತವೆ.

ಒಂದೊಂದು ಕ್ಷಣವೂ ಕ್ರಿಯೆಯಲ್ಲಿ ಪಾಲ್ಗೊಳ್ಳುತ್ತವೆ. ಅವಳ ಅಪರೂಪವಾದ ಉಬ್ಬುತಗ್ಗುಗಳನ್ನು, ಕಾಂತಿಯುಕ್ತ ದೇಹವನ್ನು ನೋಡಲು ಅವನ ಮನ ಬಯಸುತ್ತದೆ. ಆದರೆ ಶಾಲಿನಿಯ ಲಜ್ಜೆ ವಿನೋದ್ ಮುಂದೆ ಇನ್ನೂ ಪೂರ್ತಿಯಾಗಿ ಮಾಯವಾಗದ ಕಾರಣ ಮುಖಕ್ಕೆ ಇರಿಸಿಕೊಂಡ ಬಲ್ಬ್ ಕತ್ತಲಲ್ಲಿ ತನ್ನ

ಇರುವಿಕೆಯನ್ನು ಕಳೆದುಕೊಳ್ಳುತ್ತದೆ. ಹೇಳಲಾರದ ಅನುಭವವನ್ನು ಅವರಿಬ್ಬರ ದೇಹಗಳ ಒಂದೊಂದು ಕಣವೂ ತುಂಬಿಕೊಂಡಿವೆ.

ಮತ್ತೆ ಬಲ್ಬ್ ಹೊತ್ತಿಕೊಂಡಾಗ ಅಲ್ಲೇನೂ ನಡೆದೇ ಇಲ್ಲವೆನ್ನುವಂತಹ ದೃಶ್ಯ ನೋಡಿದ ಬಲ್ಬ್ ಮಾತ್ರ ಮಂದವಾಗಿ, ಮಂಕಾಗಿ ಕೋಣೆಯಲ್ಲಿರುವ ಬೆಳಕಿಗೂ ತನಗೂ ಯಾವ ಸಂಬಂಧವೂ ಇಲ್ಲವೆನ್ನುವಂತೆ ಸರಿಯುತ್ತಿದೆ.

"ತಂದೆಯವರು ಹನಿಮೂನ್‌ಗೆ ಹೋಗುವಂತೆ ಬಲವಂತ ಮಾಡುತ್ತಿದ್ದಾರೆ. ನನಗೇನೂ ಹಣ ಸುಮ್ಮನೆ ಪೋಲು ಮಾಡುವುದಕ್ಕೆ ಇಷ್ಟವಿಲ್ಲ, ಅದೇ ಹಣಕ್ಕೆ ಇನ್ನೇನಾದರೂ ಕೊಂಡುಕೊಳ್ಳಬಹುದು, ನೀವೊಂದು ಮಾತು ತಂದೆಗೇಳಿದರೆ ಒಪ್ಪಿಕೊಳ್ಳಬಹುದು" ಶಾಲಿನಿ ಹೇಳಿದಳು.

"ಇಲ್ಲ, ನಾನು ಹೇಳುವುದಿಲ್ಲ. ಎಲ್ಲಿಗಾದರೂ ಒಂದು ಸಣ್ಣ ಟ್ರಿಪ್ ಹೋಗಿಯೇ ಬರೋಣ, ಮತ್ತೆ ಈ ಯೌವ್ವನ, ಈ ಸಮಯ" ನಿಲ್ಲಿಸಿದ. ಅರೆಕ್ಷಣ ಆಶ್ಚರ್ಯಪಟ್ಟ ಶಾಲಿನಿ "ನಿಮ್ಮಿಷ್ಟ ಹೋಗೋಣವೆಂದರೆ ನನಗೇನೂ ಅಭ್ಯಂತರವಿಲ್ಲ, ಹಣ ಜಾಸ್ತಿ ಖರ್ಚಾಗುತ್ತದೆ, ಯೋಚಿಸೋಣ, ಬಹಳ ಸ್ಥಳಗಳಿವೆ, ಹತ್ತಿರದ ಸ್ಥಳಗಳೂ ಇವೆ" ಎಂದಳು.

"ಒಂದೊಂದೇ ಹೇಳಿ" ಶಾಲಿನಿ ಹೇಳಿದಳು.

"ಸ್ವಿಡ್ಜರ್‌ಲೆಂಡ್, ಹಾಂಗ್‌ಕಾಂಗ್, ಸಿಂಗಾಪೂರ್, ಜಪಾನ್, ಪ್ಯಾರಿಸ್, ಲಂಡನ್, ಅಮೆರಿಕ, ಅಂಟಾರ್ಕ್‌ಟಿಕಾ, ಅರ್ಕ್‌ಟಿಕ್, ಗೌರಿಶಂಕರ", ಹೇಳುತ್ತಾ ಹೇಳುತ್ತಾ ಶಾಲಿನಿಯ ಮುಖವನ್ನೇ ನೋಡಿದ.

"ಅಷ್ಟೇನೇ, ಇನ್ನೂ ಹೇಳಿ, ಫೆಸಿಫಿಕ್ ಸಾಗರ, ಬಂಗಾಳಕೊಲ್ಲಿ, ಅರಬ್ಬೀಸಮುದ್ರ", ವಿನೋದ್ ನಗಾಡಿದ. ಶಾಲಿನಿ ನೇರವಾಗಿ ವಿಷಯಕ್ಕೆ ಬಂದಳು.

"ಬಸ್ಸು ರೈಲಿನ ಬಗ್ಗೆ ಮಾತಾಡಿ. ವಿಮಾನ ಸಮುದ್ರಯಾನದ ಬಗ್ಗೆಯಲ್ಲ."

"ಸಮುದ್ರಯಾನದ ಬಗ್ಗೆ ನಾನೆಲ್ಲಿ ಮಾತನಾಡಿದೆ?" ವಿನೋದ್ ಮತ್ತೆ ನಕ್ಕ. ಶಾಲಿನಿ ತುಸು ಸಂಕಟಕ್ಕೆ ಸಿಕ್ಕಿಕೊಂಡವಳಂತೆ ಮುಖವಿಟ್ಟುಕೊಂಡಳು.

"ಆಯಿತು, ಕರ್ನಾಟಕದಿಂದ ಪ್ರಾರಂಭಿಸಲೇ?"

"ಕರ್ನಾಟಕದಲ್ಲಿರುವ ಸ್ಥಳಗಳನ್ನು ಯಾವಾಗಲಾದರೂ ನೋಡಬಹುದು, ಇದು ಯಾತ್ರೆಯಲ್ಲ, ಹನಿಮೂನ್"

"ಓ... ಸಾರಿ, ಮರೆತೇಬಿಟ್ಟೆ"

"ಆಯಿತು. ಹೇಳಿ, ಕನಿಷ್ಟ ನೋಡುವಂತಹ ಸ್ಥಳಗಳನ್ನಾದರೂ ತಿಳಿದು ಕೊಂಡಂತಾಗುತ್ತದೆ."

"ಮೈಸೂರು, ಹಂಪಿ, ಹಳೆಬೀಡು, ಶ್ರವಣಬೆಳಗೊಳ" ಶ್ರವಣಬೆಳಗೊಳ ಎನ್ನುವ ಹೆಸರನ್ನು ಒತ್ತಿ ಹೇಳಿದ ವಿನೋದ್ ಅರೆಕ್ಷಣ ಶಾಲಿನಿಯ ಮುಖ ನೋಡಿದ, ಶಾಲಿನಿ ವಿನೊದ್ ಕಡೆ ನೋಡಿ ಅರ್ಥವಾಗದಂತೆ ಮುಖವನ್ನು ಕೆಂಪಗೆ ಮಾಡಿಕೊಂಡಳು. "ಜೋಗ್ ಜಲಪಾತ, ನಾಗರಹೊಳೆ, ನಂದಿ?"

"ಸಾಕು, ಬೇರೆ ಹೇಳಿ"

"ಬೇರೇ... ತಮಿಳುನಾಡಿನ ಊಟಿ, ಆಂಧ್ರದ ತಿರುಪತಿ."

"ರಾಮ ರಾಮ. ಈ ದಿನ ಏನಾಯಿತು ನಿಮಗೆ"

"ಏನೂ ಆಗಿಲ್ಲ" ಮತ್ತಷ್ಟು ನಕ್ಕ. "ನಾಗಾರ್ಜುನ ಸಾಗರ. ಕೇರಳಾದ ಸೈಲೆಂಟ್ ವ್ಯಾಲಿ, ಮಹಾರಾಷ್ಟ್ರದ ಅಜಂತಾ ಎಲ್ಲೋರ, ಎಲಿಫೆಂಟಾ, ಬಾಂಬೆ, ಗೋವಾದ ದಡಗಳು, ರಾಜಸ್ತಾನದ ಪಿಂಕ್‌ನಗರ, ಉದಯಪುರ, ಮೌಂಟ್ ಅಭು, ಅರಾವಳಿ ಬೆಟ್ಟಗಳು, ಗುಜರಾತಿನ ಶಬರಮತಿ, ಹಿಮಾಚಲದ ಕುಲು ಮನಾಲಿ, ಕಾಶ್ಮೀರದ ಶ್ರೀನಗರದ ದಾಲ್ ಸರೋವರ, ಸೋನಾಮಾರ್ಗ್, ಉತ್ತರ ಪ್ರದೇಶದ ಆಗ್ರಾ, ಪುಲೋಂಕಿ ಘಾಟ್, ಘಡ್‌ವಾಲ್, ಸಿಮ್ಲಾ, ಮಸೂರಿ, ನೈನಿತಾಲ್, ಗಂಗೋತ್ರಿ, ಯಮುನೋತ್ರಿ, ಕಾಶಿ, ಉತ್ತರ ಈಶಾನ್ಯದ ಗಂಡುನದಿ ಬ್ರಹ್ಮಪುತ್ರ ಅದರ ಸುತ್ತಲಿನ ಟೀತೋಟಗಳು, ಕಾಜಿರಂಗಾ, ನೀಲಿ ಪರ್ವತಗಳು (ಉತ್ತರ ಈಶಾನ್ಯದ ಪರ್ವತಗಳು) ಪಶ್ಚಿಮ ಬಂಗಾಲದ ಕಲ್ಕತ್ತಾ, ಮಧ್ಯಪ್ರದೇಶದ ಚಂಬಲ್ ಬಜರೂಹೊ" ಹೀಗೆ ವಿನೋದ್ ಹೇಳುತ್ತಾ ಹೋಗುತ್ತಿದ್ದ.

ಶಾಲಿನಿ ಬರೆದುಕೊಂಡಿದ್ದ ಪಟ್ಟಿಯನ್ನು ವಿನೋದ್ ಮುಂದಿಟ್ಟು, ಇದರಲ್ಲಿ ಕೆಲವನ್ನು ಆಯ್ಕೆ ಮಾಡುವಂತೆ ಹೇಳಿದಳು. ಸುಮಾರು ಹೊತ್ತು ಚರ್ಚಿಸಿದ ಮೇಲೆ ಕೆಲವು ಸ್ಥಳಗಳನ್ನು ಪಿನ್ ಮಾಡಿಕೊಳ್ಳಲಾಯಿತು.



ತರುಣ್‌ಕುಮಾರ್ ತನ್ನ ತಲೆ ಒಳಗಿರುವ ಮೆದುಳನ್ನೆಲ್ಲಾ ಚೆದುರಿಸಿ ಕೊಂಡವನಂತೆ ತನ್ನ ಕಚೇರಿಯ ಕೋಣೆಯಲ್ಲಿ ಕುಳಿತಿದ್ದಾನೆ, ಅವನ ಮುಂದೆ ಮಹಾನಗರ ಬೆಂಗಳೂರಿನ ನಕ್ಷೆ ನಾಲ್ಕು ಕಡೆಯೂ ಹಬ್ಬಿಕೊಂಡಿದೆ. ರೈಲು ಮಾರ್ಗ ಮತ್ತು ಮುಖ್ಯವಾದ ಹೆದ್ದಾರಿಗಳು ಬಣ್ಣಬಣ್ಣದ ಗೆರೆಗಳಲ್ಲಿ ಮಹಾನಗರದ ಮೇಲೆಲ್ಲಾ ಹರಿದಾಡಿವೆ. ಕೆಲವು ಐಶ್ವರ್ಯ ಬಡಾವಣೆಗಳು, ಮುಖ್ಯವಾದ ಸ್ಥಳಗಳು ಮತ್ತು ರಾತ್ರಿ

ಚಟುವಟಿಕೆಗಳನ್ನು ಹೆಚ್ಚಿಸಿಕೊಳ್ಳುವ ಹೋಟೆಲ್‌ಗಳನ್ನು ಒಂದೊಂದಾಗಿ ವೀಕ್ಷಿಸುತ್ತಿದ್ದಾನೆ. ಇದ್ದಕ್ಕಿದ್ದ ಹಾಗೆ ಆ ಕಣ್ಣುಗಳ ಒಳಗೆದ್ದ ಒಂದು ಊಹೆ ಹೆರಾಲ್ಡ್ ರಾಬಿನ್‌ಸನ್ ಕಾದಂಬರಿಯಲ್ಲಿನ ನಾಯಕನಂತೆ ಉತ್ತೇಜಿಸುತ್ತದೆ.

ಕೇಸಿಗೆ ಸಂಬಂಧಿಸಿದ ವ್ಯಕ್ತಿಗಳನ್ನು ಎರಡು ಭಾಗಗಳಾಗಿಸಿಕೊಳ್ಳುತ್ತಾನೆ. ಒಂದರಲ್ಲಿ ಪವನ್ ಪ್ರಾಚಿ ಬಂದರೆ, ಇನ್ನೊಂದರಲ್ಲಿ ದರ್ಶನಾ, ರಾಮು ಬರುತ್ತಾರೆ. ಇಬ್ಬರು ನೋಡಿಲ್ಲದೆ ಸಿಲುಕಿಕೊಂಡರೆ, ಇನ್ನಿಬ್ಬರು ನೋಡಿ ಸಿಲುಕೊಂಡಿದ್ದಾರೆ. ಈಗಿನ ಹಂತದಲ್ಲಿ ಎಲ್ಲರೂ ಹೆಚ್ಚುಕಮ್ಮಿ ಒಂದೇ ಮಟ್ಟದಲ್ಲಿದ್ದು ನಾಲ್ಕು ಜನರಿಂದಲೂ ತನಗೆ ತೊಂದರೆ ಇದೇ ಎನ್ನುವುದನ್ನು ಅರಿತಿರುವ ಹಂತಕ ತನ್ನ ಬಗ್ಗೆಯಂತೂ ಹೆಚ್ಚಾಗಿಯೇ ಜಾಗ್ರತೆ ವಹಿಸಿರುತ್ತಾನೆ ಎನ್ನುವುದು ಸಂದೇಹವಿಲ್ಲ ಎಂದುಕೊಳ್ಳುತ್ತಾನೆ ತರುಣ್.

ಆಗಲಿ ಕೊನೆ ಪ್ರಯತ್ನವಂತೂ ಯಾರ ಸಹಾಯವಿಲ್ಲದೆ ತಾನೇ ಮಾಡಬೇಕೆಂದು ನಿರ್ಧಾರ ಮಾಡಿಕೊಳ್ಳುತ್ತಾನೆ. ತನಗೆ ಇಷ್ಟವಾದ ಪಿಸ್ತೂಲನ್ನು ಐದು ಗುಂಡುಗಳಿಂದ ತುಂಬಿಕೊಂಡು ನೇರವಾಗಿ ಮನೆಗೆ ಹೋಗುತ್ತಾನೆ.

ಎರಡು ಸಲ ಕರೆಗಂಟೆ ಸ್ವಿಚ್ಚನ್ನು ಒತ್ತಿದ ಮೇಲೆ ಚೆಲುವಾದ ಒಂದೆಣ್ಣು ವೈಯ್ಯಾರವಾಗಿ ಬಳಕುತ್ತಾ ಬಂದು ಬಾಗಿಲನ್ನು ತೆಗೆದಳು.

"ಓ ಪ್ರಿಯಾಂಕ, ಒಳ್ಳೆ ಸಮಯಕ್ಕೆ ಬಂದಿದ್ದೀಯಾ, ನಿನ್ನಿಂದ ನನಗೊಂದು ಸಹಾಯವಾಗಬೇಕು."

"ನನ್ನಿಂದ... ನನ್ನಿಂದ ನಿಮಗೇನು ಸಹಾಯ, ಖಂಡಿತ ಮಾಡುತ್ತೇನೆ ಭಾವ" ಪ್ರಿಯಾಂಕ ಹೇಳಿದಳು. ಪ್ರಿಯಾಂಕ ಶ್ರೀಮತಿ ತರುಣ್‌ನ ತಂಗಿ. ಒಳ್ಳೆ ಆರ್ಟಿಸ್ಟ್ ಕೂಡ, ಬೆಂಗಳೂರಿನಲ್ಲೇ ಇರುವ ಒಂದು ಒಳ್ಳೆ ಆರ್ಟಿಸ್ಟ್ ಕಲಾಶಾಲೆಯಲ್ಲಿ ತರಬೇತಿ ಪಡೆದಿರುವ ಪ್ರಿಯಾಂಕ ನೋಡಿದ ದೃಶ್ಯಗಳನ್ನು ಹಾಗೆ ಸೆರೆ ಹಿಡಿಯಬಲ್ಲಳು.

ಇಬ್ಬರೂ ಒಂದು ಕೋಣೆಯ ಒಳಹೊಕ್ಕರು. ತನ್ನ ಗಂಡನ ವಾಸನೆ ಹಿಡಿದು ಹಿಂದೆಯೇ ಬಂದ ಮಿಸೆಸ್ ತರುಣ್‌ಕುಮಾರ್ "ಏನು ಪೊಲೀಸ್ ತನಿಖೆ ನಡೆಯುತ್ತಿದೆ" ಎಂದಳು. "ಏನೂ ಇಲ್ಲ. ನೀನು ಸ್ವಲ್ಪ ಕಾಫಿ ಕಳುಸಿ, ನಾವು ಸ್ವಲ್ಪ ಆರ್ಟ್ ಬಗ್ಗೆ ಚರ್ಚಿಸಬೇಕಿದೆ." ತರುಣ್ ಹೇಳಿದ. ಮಿಸೆಸ್ ತರುಣ್‌ಕುಮಾರ್ ಹೊರಕ್ಕೆ ಬಂದಳು.

"ನೋಡು, ಪ್ರಿಯಾಂಕ, ನಾನು, ನೀನು, ನಿಮ್ಮಕ್ಕ ಒಮ್ಮೆ... ಇರು ಸರಿಯಾದ ತಾರೀಖನ್ನೇ ಹೇಳುತ್ತೇನೆ ಎಂದು ತನ್ನ ಡೈರಿ ತೆಗೆದು ದಿನಾಂಕ ತಿಳಿಸಿ ತಾವು ಹೋಗಿದ್ದ ರೆಸ್ಟೋರೆಂಟ್, ಸಮಯ ಎಲ್ಲವನ್ನೂ ತಿಳಿಸಿದ. ಸ್ವಲ್ಪ ಸಮಯ

ತೆಗೆದುಕೊಂಡ ಪ್ರಿಯಾಂಕ ದೃಶ್ಯವನ್ನು ತನ್ನ ಮನಃಪಟಲದಲ್ಲಿ ತುಂಬಿಕೊಳ್ಳುತ್ತ ಹೋಗಿ "ಹೌದೆಂದಳು."

"ನಾವು ಹೋಟೆಲ್ ಒಳಹೊಕ್ಕಾಗ ಎಲ್ಲಾ ಮೇಜುಗಳು ತುಂಬಿದ್ದು, ಒಬ್ಬನೇ ಕುಳಿತಿದ್ದ. ಒಂದು ಮೇಜಿನ ಮುಂದೆ ಕುಳಿತುಕೊಂಡೆವು. ಆಗ ಅವನೇ ನಮ್ಮ ಜೊತೆ ಸ್ವಪರಿಚಯಿಸಿಕೊಂಡ, ಜ್ಞಾಪಕವಿದೆಯೇ?"

"ಆ ಮಿಸ್ಟರ್... ಮಿಸ್ಟರ್..." ಎನ್ನುತ್ತಾ ತನ್ನ ಎಡಕೈ ತೊರುಬೆರಳನ್ನು ಕೆಂಪು ಗಲ್ಲದ ಮೇಲಿಟ್ಟು ಯೋಚನೆಗಳನ್ನು ಕೆದಕುತ್ತಾಳೆ. "ಮಿಸ್ಟರ್... ಉದಯ್, ಫಿಲಾಸಫಿ ಅಧ್ಯಾಪಕ ತಾನೆ?"

"ಹೌದು, ಯು ಆರ್ ವೆರಿಕರೆಕ್ಟ್ ಅವನ ಮುಖಚರ್ಯೆ ನಿನಗೆ ಜ್ಞಾಪಕವಿದೆ ತಾನೆ?" ತನ್ನ ಕಣ್ಣುಗಳನ್ನು ಸಣ್ಣದಾಗಿಸಿಕೊಂಡು "ಇದೆ" ಎಂದಳು.

"ಹಾಗಾದರೆ ಅವನ ಮುಖವನ್ನು ಹಾಗೆ ಬಿಡಿಸಿಕೊಡು, ಈ ವಿಷಯವನ್ನು ಯಾರಿಗೂ ಹೇಳಬೇಡ, ಮಿಕ್ಕ ವಿಷಯಗಳನ್ನು ವಿವರವಾಗಿ ಒಂದು ದಿನ ಹೇಳುತ್ತೇನೆ. ನಿನಗೆ ಬೇಕಾಗಿರುವ ವಸ್ತುಗಳನ್ನು ತೆಗೆದುಕೊಂಡು ನಿಧಾನವಾಗಿ ಬಿಡಿಸು ಎಂದೇಳಿ ಹೊರಕ್ಕೋಗಿ ತನ್ನ ಹೆಂಡತಿಯ ಜೊತೆ ಕುಳಿತ.

ಪ್ರಿಯಾಂಕ ಬಹಳ ಅಚ್ಚುಕಟ್ಟಾಗಿ ಅವನ ಮುಖವನ್ನು ಪೆನ್ಸಿಲ್ ಗೆರೆಗಳಲ್ಲಿ ಬಿಡಿಸಿ ತೋರಿಸಿದಳು. ಅವಳ ಕೈ ಕಲೆಯಿಂದ ಮೂಡಿ ಬಂದ ಆ ಚಿತ್ರ, ಅರೆಕ್ಷಣದಲ್ಲಿ ಸ್ವಯಂಚಾಲಿತ ಕ್ಯಾಮರಾದ ಹೊಟ್ಟೆಯೊಳಗಿಂದ ಹೊರಕ್ಕೆ ಬಂದ ನಕುಲಂತಿತ್ತು.

ಚಿತ್ರವನ್ನು ನೋಡಿದ ತರುಣ್, ಪ್ರಿಯಾಂಕಾಳ ಸಹಾಯಕ್ಕೆ ಮೆಚ್ಚುಗೆ ತೋರಿಸಿ, ಮತ್ತೊಮ್ಮೆ ಅವನ ಮುಖವನ್ನು ನಿಖರವಾಗಿ ಮನಸಿನಲ್ಲಿ ತುಂಬಿಕೊಂಡು, ಸಿವಿಲಿಯನ್ ಬಟ್ಟೆಗಳನ್ನು ಧರಿಸಿ ತನ್ನ ಖಾಸಗೀ ಸ್ಕೂಟರ್ ತೆಗೆದುಕೊಂಡು ಹೋಗಬೇಕಾಗಿರುವ ಕಡೆಗೆ ಓಡಿಸಿತೊಡಗಿದ.

ಸ್ಕೂಟರ್ ನೇರವಾಗಿ ಹೋಗಿ ಒಂದು ಕಂಪನಿಯ ಪೋರ್ಟಿಕೊ ಕೆಳಗೆ ನಿಂತುಕೊಂಡಿತು. ಸ್ಕೂಟರ್ ನಿಲ್ಲಿಸಿದ ತರುಣ್‌ಕುಮಾರ್ ತಾನು ಸೇರಬೇಕಾಗಿರುವ ಕೋಣೆಯ ಕಡೆ ನಡೆಯತೊಡಗಿದ. ಎಷ್ಟೇ ನಿಧಾನವಾಗಿ ನಡೆದರೂ ಶಬ್ದಗೊಳಿಸುವಂತಹ ಮೊಜಾಯಿಕ್ ನೆಲ. ಎರಡು ಕಡೆಯ ಕೋಣೆಗಳು ತಮ್ಮ ಬಾಗಿಲುಗಳ ಮೇಲೆ ನೀಟಾಗಿ ಬರೆಸಿಕೊಂಡು ನೇತಾಕಿಕೊಂಡಿರುವ ವಿಜ್ಞಾನಿಗಳ ನಾಮಫಲಕಗಳು. ಡಾ. ವೈ.ಎಂ. ಭಾರ್ಗವ್, ಡಾ. ಉನ್ನಿಕೃಷ್ಣವನ್, ಡಾ. ಘನಶ್ಯಾಮ್, ಡಾ. ತಮ್ಮಯ್ಯ, ಡಾ. ಪ್ರಮೋದ್, ಮಿಸ್ ದರ್ಶನಾಸಿಂಗ್, ಅವನು ಸೇರಬೇಕಾಗಿರುವ ಕೋಣೆ ಸಿಕ್ಕಿತು.

ಬಾಗಿಲ ಮುಂದೆ ಯಾರೂ ಇಲ್ಲ. ಒಂದು ಸಣ್ಣ ಸ್ಟೂಲ್ ಮಾತ್ರ ಸ್ವಲ್ಪ ದುರದಲ್ಲಿದೆ, ಬಹುಶಃ ಅಲ್ಲಿನ ಕಾವಲುಗಾರನ ಸ್ಟೂಲ್ ಇರಬಹುದು.

ಕೋಣೆಯ ಮುಂದೆ ಅರೆಕ್ಷಣ ನಿಂತು ಕರೆಗಂಟೆ ಸ್ವಿಚ್ಚನ್ನು ಒತ್ತಿದ. ಉತ್ತರವಿಲ್ಲ ಅಷ್ಟರಲ್ಲಿ ಒಬ್ಬ ಬಿಳಿ ಯೂನಿಫಾರಂ ತೊಟ್ಟಿರುವ ಸೇವಕ ಓಡಿಬಂದು "ಯಾರು ಬೇಕಾಗಿದೆ ಸಾರ್" ಎಂದ. "ದರ್ಶನಾಸಿಂಗ್‌ರವರನ್ನು ನೋಡಬೇಕಾಗಿದೆ."

ಯಾರೋ ದೊಡ್ಡ ಸಾಹೇಬರೇ ಇರಬಹುದೆಂದುಕೊಂಡರೂ, ಬಾಗಿಲು ತೆಗೆದು ಕೂರಿಸಿದೆ ಮತ್ತೊಂದು ಮಹಡಿಯ ಕಡೆ ಕರೆದುಕೊಂಡೋಗಿ ಕೋಣೆ ತೋರಿಸಿದ.

ತರುಣ್ ಬಾಗಿಲು ತೆಗೆದು ಒಳಕ್ಕೆ ಇಣಿಕಿನೋಡಿದ. ದರ್ಶನಾ ಮೈಕ್ರೋಸ್ಕೋಪ್ ಮುಂದೆ ಕುಳಿತಿದ್ದಾಳೆ.

"ಕ್ಷಮಿಸಿ, ನಿಮಗೆ ತೊಂದರೆ ಮಾಡಲಿದ್ದೇನೆ" ಎಂದು ಒಳಕ್ಕೋದ. "ಓ, ಬನ್ನಿ, ಫೋನ್ ಮಾಡಿದ್ದರೆ ನಾನೇ ಬರುತ್ತಿದ್ದೆನಲ್ಲವೆ?" ಪಕ್ಕದ ಮೈಕ್ರೋಸ್ಕೋಪ್ ಮುಂದೆ ಕುಳಿತಿದ್ದ ಕನ್ನಡಕಧಾರಿಯೊಬ್ಬರು ತಲೆ ಎತ್ತಿ ನೋಡಿದರು ನಿಧಾನವಾಗಿ. ಆ ವಿಜ್ಞಾನಿಗಳ ಏಕಾಗ್ರತೆಯನ್ನು ಕದಡಿದ್ದಕ್ಕೆ ಅವನ ಮನ ತುಸು ಬೇಸರಗೊಂಡಿತು. "ಸ್ವಲ್ಪ ಮಾತನಾಡಬೇಕಿತ್ತು ಸಾಧ್ಯವಾದರೆ..." ಅರ್ಥಮಾಡಿಕೊಂಡಂತೆ ಎದ್ದುನಿಂತ ದರ್ಶನಾ ಪಕ್ಕದಲ್ಲಿರುವವರಿಗೆ ಈಗಲೇ ಬರುತ್ತೇನೆಂದು ತಿಳಿಸಿ, ತನ್ನ ಕೋಣೆಯ ಕಡೆಗೆ ನಡೆಯತೊಡಗಿದಳು.

ತರುಣ್ ಹಿಂದೆಯೇ ನಡೆದ. ಇಬ್ಬರೂ ದರ್ಶನಾ ಕೋಣೆಯಲ್ಲಿ ಬಂದು ಕುಳಿತುಕೊಂಡರು. ಕರೆಗಂಟೆ ಒತ್ತಿದ ದರ್ಶನಾ ಕಾಫಿ, ಟೀ, ಕೂಲ್‌ಡ್ರಿಂಕ್ಸ್ ಎಂದಳು. 'ಕಾಫಿ ಆಗಿದೆ', ಎಂದ. ಎರಡು ಟೀ ತರುವಂತೆ ಸೇವಕನಿಗೆ ತಿಳಿಸಿದಳು.

ತನ್ನ ಜೇಬಿನಿಂದ ಹೊರಕ್ಕೆ ಒಂದು ಕಾಗದವನ್ನು ತೆಗೆದ ತರುಣ್ ದರ್ಶನಾಳ ಮುಂದಿಟ್ಟ, ದರ್ಶನಾ ಪೆನ್ಸಿಲ್ ಗೆರೆಗಳಲ್ಲಿದ್ದ ಆ ಭಾವಚಿತ್ರವನ್ನು ನೋಡಿದ್ದೇ ತಡ "ಇವನೇ ಇವನೇ ಆ ಹಂತಕ" ಅವಳ ಮುಖ ಬೆಂಕಿಯಿಂದ ಹೊತ್ತಿಕೊಂಡಂತೆ ಒಮ್ಮೆಲೇ ಉರಿಯತೊಡಗಿತು. ಮತ್ತೆ ಅವಳ ಮುಖ ಸಾಮಾನ್ಯ ಸ್ಥಿತಿಗೆ ಬರಲು ಸುಮಾರು ಸಮಯವೇ ಹಿಡಿಯಿತು.

"ಇದನ್ನ ಹೇಗೆ ಸಂಪಾದಿಸಿದಿರಿ?" "ಬಹಳ ಈಜಿಯಾಗಿ ಇನ್ನು ಅವನು ಬೆಂಗಳೂರಿನಲ್ಲಿದ್ದರೆ ಕಂಡಿತ ತಪ್ಪಿಸಿಕೊಳ್ಳಲಾರ. ಅವನನ್ನು ಹಿಡಿದುಕೊಳ್ಳುತ್ತೇನೆ."

"ಚಿತ್ರ ಎಲ್ಲಿ ಸಿಕ್ಕಿತು?"

"ಸಾರಿ, ಏನೂ ತಪ್ಪು ತಿಳಿಯಬೇಡಿ, ಮತ್ತೆ ನಾನೇ ತಿಳಿಸುತ್ತೇನೆ."

"ಆಗಬಹುದು, ನನಗೇನು ಅಭ್ಯಂತರವಿಲ್ಲ"

"ಆಯಿತು, ನಾನು ಬರುತ್ತೇನೆ"

"ಇರಿ ಟೀ ಬರುತ್ತದೆ"

"ಓ... ಮರೆತೇಬಿಟ್ಟೆ"

"ನನ್ನ ಊಹೆ ವಾಸ್ತವವಾಯಿತು." ಒಳಗೊಳಗೇ ಖುಷಿಗೊಂಡ ತರುಣ್ ತನಗೇ ತಾನೇ ಹೇಳಿಕೊಂಡಂತೆ ಕಂಡ.

ಅಷ್ಟರಲ್ಲಿ ಟೀ ಬಂತು. ಇಬ್ಬರೂ ಟೀ ಕುಡಿದರು. "ಬಹಳ ವಂದನೆಗಳು, ಹಾಗೆ ನಿಮ್ಮ ಸಮಯ ಹಾಳು ಮಾಡಿದ್ದಕ್ಕೆ ಕ್ಷಮಾಪಣೆ ಕೂಡ" ಎನ್ನುತ್ತಾ ಅಲ್ಲಿಂದ ಬೀಳ್ಕೊಂಡ ತರುಣ್ ಮೊಜಾಯಿಕ್ ನೆಲದ ಮೇಲೆ ಟಕ್ ಟಕ್ ಎನ್ನುತ್ತಾ ನಡೆದು ಹೋದರು



ಕಣ್ಣುಕಾಣುವ ಜೀವಿಗಳೂ ಕೂಡ ಕತ್ತಲಲ್ಲೇ ಇದ್ದರೆ ನೋಟ ಕಳೆದುಕೊಳ್ಳುತ್ತವೆಯಂತೆ. ಕೈ ವಾಸಿಯಾದ ಪವನ್ ಬಹಳ ದಿನಗಳಿಂದ ಮನೆಯಲ್ಲೇ ಇದ್ದೂ ಹೊರಗಿನ ಲವಲವಿಕೆಯ ಪ್ರಪಂಚದ ಜೊತೆ ತನ್ನ ಕೊಂಡಿಯನ್ನು ಕಳೆದುಕೊಂಡವನಂತೆ ತವಕಿಸುತ್ತಿದ್ದಾನೆ.

ತನಗೆ ಇಷ್ಟವಾದ ಬಣ್ಣದ ಸೂಟನ್ನು ಧರಿಸಿಕೊಂಡ ಪವನ್ ಬ್ರೀಫ್‌ಕೇಸ್‌ನ್ನು ಒಮ್ಮೆ ತೆರೆದು ನೋಡಿದ. ಪ್ರಾಚಿ ಮಾತ್ರ ತನ್ನ ಅತ್ಯಂತ ಪ್ರೀತಿಯ ಗಂಡ ದೂರದ ದೇಶಕ್ಕೆ ಹೋಗುತ್ತಿರುವಂತೆ ಮುಖ ಉಬ್ಬಿಸಿಕೊಂಡಿದ್ದಾಳೆ. ಅದಕ್ಕೆ ಇನ್ನೊಂದು ಕಾರಣವೂ ಇತ್ತು. ಆ ಹಂತಕ ಯಾವ ರೀತಿಯಲ್ಲಿ ಕಾಡುವನೋ ಎನ್ನುವ ಭಯ. ಪವನ್ ಒಂದಷ್ಟು ದಪ್ಪವಾದಂತೆ ಕಾಣುವುದರ ಜೊತೆಗೆ ಆಕರ್ಷಕವಾದ ಒಂದು ಮುಖವಾಡವನ್ನು ತೊಡಗಿಕೊಂಡಿರುವಂತೆ ಕಾಣುತ್ತಿದ್ದಾನೆ. ನೀಟಾಗಿ ಸಣ್ಣದಾಗಿ ಕತ್ತರಿಸಿಕೊಂಡಿರುವ ಕೂದಲು, ಅವನನ್ನು ಎರಡು ಮೂರು ವರ್ಷಗಳಷ್ಟು ಸಣ್ಣವನಾಗಿಸಿದೆ. ಕೈಗೆ ಬ್ರೀಫ್‌ಕೇಸ್ ತೆಗೆದುಕೊಂಡು ಪ್ರಾಚಿಯ ಕಡೆ ನೋಡಿ ಒಂದೆಜ್ಜೆ ಇಟ್ಟ ಮೇಲೆ ಏನೋ ಮರೆತವನಂತೆ ಹಿಂದಕ್ಕೆ ತಿರುಗಿ ಪ್ರಾಚಿಯ ಕಡೆ ನೋಡುತ್ತಾನೆ. ಆಗ ಜ್ಞಾಪಕ ಬರುತ್ತದೆ. ತಾನು ದೊಡ್ಡ ತಪ್ಪು ಮಾಡುತ್ತಿದ್ದೇನಲ್ಲ ಎಂದು.

ಬ್ರೀಫ್‌ಕೇಸನ್ನು ಪಕ್ಕದಲ್ಲಿಟ್ಟು ಇಂಗ್ಲಿಷ್ ಸಿನಿಮಾದಲ್ಲಿನ ನಾಯಕನಂತೆ

ಪ್ರಾಚಿಯನ್ನು ಪ್ರಾಚಿಯನ್ನು ಹಗುರವಾಗಿ ತಬ್ಬಿಕೊಂಡು ತುಟಿಗಳ ಮೇಲೆ ಒಂದು ಮುದ್ರೆ ಒತ್ತುತ್ತಾನೆ. ಅದು ದೀರ್ಘವಾದ ಚುಂಬನವಾಗಿರದೆ ಒಳಗೊಳಗೆಯೇ ಪ್ರಾಚಿ ಖಿನ್ನಳಾಗಿದ್ದಾಳೆ. ಅವಳ ವ್ಯಕ್ಷಗಳನ್ನೊಮ್ಮೆ ಹಗುರವಾಗಿ ಸ್ಪರ್ಶಿಸಿ ಹೊರಕ್ಕೆ ನಡೆದು ಪೋರ್ಟಿಕೋದಿಂದ ಕಾರನ್ನು ಕಚೇರಿಯ ಕಡೆಗೆ ಓಡಿಸುತ್ತಾನೆ.

ಬೆಂಗಳೂರಿನ ರಸ್ತೆಗಳ ಮೇಲೆ ಮೊದಲ ಬಾರಿಗೆ ಹೋಗುತ್ತಿರುವವನಂತೆ ಅವನ ಮನ ಕುಪ್ಪಳಿಸುತ್ತಿದೆ. ಬಹಳ ದಿನಗಳ ನಂತರ ಆ ಕಾರು ಆ ಕಟ್ಟಡದ ಮುಂದೆ ನಿಂತುಕೊಂಡು ನಿರಾಳವಾಗಿ ಶ್ವಾಸ ತೆಗೆದುಕೊಳ್ಳುತ್ತದೆ. ಹೊರಗಡೆ ಬಂದ ಪವನ್ ಲಿಫ್ಟ್ ಹತ್ತಿರಕ್ಕೆ ನಡೆದು ಬಂದು ನಿಲ್ಲುತ್ತಾನೆ. ಲಿಫ್ಟ್ ಮೂರನೆಯ ಮಹಡಿಯಲ್ಲಿಂದ ಕೆಳಕ್ಕೆ ಬರುವುದನ್ನು ಸೂಚಿಸುತ್ತಿದೆ. ಕೆಂಪು ಬಣ್ಣದ ಮುಖಾಂತರ. ಕೆಲವೇ ಕ್ಷಣಗಳಲ್ಲಿ ಕೆಳಕ್ಕೆ ಬಂದ ಲಿಫ್ಟ್‌ನ ಬಾಗಿಲು ತೆಗೆದುಕೊಳ್ಳುತ್ತದೆ. ಪವನ್ ಮೂರೆಜ್ಜೆಯ ಸಹಾಯದಿಂದ ಲಿಫ್ಟ್ ಹೊಟ್ಟೆಯೊಳಕ್ಕೆ ಸೇರಿಕೊಂಡು ತಾನು ಸೇರಬೇಕಾದ ಮಹಡಿ ಸಂಖ್ಯೆಯ ಸ್ವಿಚ್ಚನ್ನು ಒತ್ತುತ್ತಾನೆ. ಲಿಫ್ಟ್ ಸಣ್ಣಗೆ ಶಬ್ದಮಾಡುತ್ತಾ ಮೇಲಕ್ಕೋಗಿ ಮತ್ತೊಮ್ಮೆ ಬಾಗಿಲನ್ನು ತೆರೆದುಕೊಳ್ಳುತ್ತದೆ. ಪವನ್ ಹೊರಕ್ಕೆ ಬಂದು ತನ್ನ ಕೋಣೆಯ ಕಡೆ ನಡೆದು ಹೋಗುತ್ತಾನೆ. ಬಹಳ ದಿನಗಳ ಮೆಡಿಕಲ್ ರಜಾನಂತರ ಕಛೇರಿಗೆ ಬಂದಿದ್ದರಿಂದ ಸಿಬ್ಬಂದಿಯೆಲ್ಲಾ ಒಬ್ಬೊಬ್ಬರಾಗಿ ಪವನ್ ಕೋಣೆಗೆ ಬಂದು ಆರೋಗ್ಯದ ಬಗ್ಗೆ ಕೇಳಿ ಹೋಗುತ್ತಿದ್ದಾರೆ. ಪವನ್ ಕೂಡ ಬಹಳ ಉತ್ಸಾಹದಿಂದ ಒಂದು ಹೊಸ ಜೀವನ ಪ್ರವೇಶಿಸಿದವನಂತೆ ನಗುಮುಖದಿಂದಲೇ ಚಟಾಕಿ ಹಾರಿಸುತ್ತಾ ಎಲ್ಲರನ್ನೂ ಹಸನ್ಮುಖವಾಗಿಸುತ್ತಿದ್ದಾನೆ.

ಮಿಸ್ ರುಚಿ ಸ್ವಲ್ಪ ಎತ್ತರವಾದ ಐ ಈಲ್ಸ್ ತೊಡಗಿಕೊಂಡು, ತುಟಿಗಳಿಗೆ ಮ್ಯಾಚ್ ಆಗುವಂತಾ ಲಿಪ್‌ಸ್ಟಿಕ್ ಬಳಿದುಕೊಂಡಿದ್ದಾಳೆ. ಬೆನ್ನಿನ ಮೇಲೆ 'ಯು' ಆಕಾರದಲ್ಲಿ ಕತ್ತರಿಸಿಕೊಂಡಿರುವ ಕೂದಲು ಸೊಗಸಾಗಿ ಹರಡಿಕೊಂಡಿವೆ. ಕಿವಿಗಳಲ್ಲಿ ಸಣ್ಣ ಉಂಗುರಗಳು, ಒಂದೇ ಹರಳಿನ ಹೊಳೆಯುವ ಸಣ್ಣ ಮೂಗುಬೊಟ್ಟು, ಅಷ್ಟೇ ದಪ್ಪ, ಅಷ್ಟೇ ಸಂಖ್ಯೆಗಳು, ಅವೇ ನಿತಂಬಗಳು, ಅದೇ ನಡೆ ಒಳಕ್ಕೆ ಪ್ರವೇಶಿಸಿ ಒಂದು ಆಯಸ್ಕಾಂತದಂತಹ ನಗು ಬೀರಿ ಶುಭ ಬೆಳಗನ್ನು ಕೋರುತ್ತಾಳೆ. ತಲ್ಲಣಗೊಂಡ ಪವನ್ ಅರೆಕ್ಷಣ ಅವಳನ್ನೇ ನೋಡಿ ತಾನೂ ಶುಭ ಬೆಳಗನ್ನು ಕೋರಿ ಕುಳಿತುಕೊಳ್ಳುವಂತೆ ಹೇಳಿದರೂ, ಅವಳ ನಿಲುವನ್ನು ಇನ್ನಷ್ಟು ಸವಿದಿರಬೇಕೆಂದು ಕೊಳ್ಳುತ್ತಾನೆ.

ರುಚಿ ಎದುರಿಗೆ ಕುಳಿತುಕೊಳ್ಳುತ್ತಾಳೆ. ಅವಳ ಕೆನ್ನೆಗಳು ಮಾತ್ರ ಇನ್ನಷ್ಟು ರೈಪ್ ಆಗಿರುವಂತೆ ತೋರಿ, ಈ ಕೆನ್ನೆಗಳ ರೈಪ್‌ನ ಹಿಂದೆ ಯಾರ ಕೈವಾಡವಾದರೂ ಇರಬಹುದೆ ಎಂದುಕೊಳ್ಳುತ್ತಾನೆ, ಒಳಗೊಳಗೆಯೇ?

ಕಚೇರಿ ವಿಷಯಗಳ ಬಗ್ಗೆ ಸುಮಾರು ಹೊತ್ತು ಚರ್ಚೆ ನಡೆದ ಮೇಲೆ ತುರ್ತಾಗಿ ಮೂವ್ ಆಗಬೇಕಾಗಿರುವ ಕೆಲವು ಪೈಲ್‌ಗಳನ್ನು ಆಯ್ಕೆ ಮಾಡಿಕೊಂಡು ಮುಗಿಸಲು ತೀರ್ಮಾನ ಮಾಡಿಕೊಳ್ಳುತ್ತಾರೆ.

ನೀನು ಬಹಳ ಆಕರ್ಷಕವಾಗಿದ್ದೀಯಾ ಎನ್ನುತ್ತದೆ ಅವನ ಮನ. ಆದರೆ ಈ ಮಾತು ಅವಳನ್ನು ಮೊದಲು ನೋಡಿದಾಗಲೇ ಹೇಳಬೇಕಿತ್ತು. ಕಚೇರಿಯ ವಿಷಯಗಳೆಲ್ಲಾ ಮಾತನಾಡಿದ ಮೇಲೆ ಹೇಳಿದರೆ ಸರಿ ಇಲ್ಲ ಎಂದು ಸುಮ್ಮನಾಗುತ್ತಾನೆ.

"ಮಿಸ್ಟರ್ ವಿನೋದ್ ಬಂದಿಲ್ಲವೆ?"

"ಇಲ್ಲಾ ಸಾರ್. ರಜಾದಲ್ಲಿದ್ದಾರೆ"

"ಎಷ್ಟು ದಿನ?"

"ನಾಳೆ ಬರಬೇಕಾಗಿದೆ"

"ಆಯಿತು ಮತ್ತೆ ಸಂಧಿಸೋಣ" ರುಚಿ ಎದ್ದು ನಡೆಯುತ್ತಾಳೆ. ಅವಳ ಹಿಂದಿನ ಪ್ರೊಫೈಲ್ ನೋಡಿದ ಮೇಲೆ ಇವು ಕೂಡ ಸ್ವಲ್ಪ ರೈಪ್ ಆದಂತಿವೆಯಲ್ಲಾ ಎಂದುಕೊಳ್ಳುತ್ತಾನೆ. ಈ ರೀತಿಯ ಕ್ರೂರ ಯೋಚನೆಗಳು ಬರುವುದು ಅವನಿಗೆ ಹೊಸದಲ್ಲದಿದ್ದರೂ, ಯಾಕಾದರೂ ಈ ರೀತಿಯ ಯೋಚನೆಗಳು ಬರುತ್ತವೆಯೋ ಮನಸ್ಸನ್ನು ಸ್ವಲ್ಪ ಹತೋಟಿಯಲ್ಲಿ ಇರಿಸಿಕೊಳ್ಳಬೇಕೆಂದುಕೊಳ್ಳುತ್ತಾನೆ.

ಬಾಗಿಲನ್ನು ನಿಧಾನವಾಗಿ ಕುಟ್ಟಿ ಒಳಕ್ಕೆ ಬಂದ ಅಂಚೆಯವ ಪವನ್ ಹೆಸರಿನಲ್ಲಿ ಬಂದಿದ್ದ ಏರ್‌ಮೇಲ್ ರಿಜಿಸ್ಟರ್ಡ್ ಪತ್ರವೊಂದನ್ನು ಪವನ್‌ಗೆ ನೀಡಿ ಸಹಿ ತೆಗೆದುಕೊಳ್ಳುತ್ತಾನೆ. ಅದರ ಜೊತೆಯಲ್ಲೇ ಇದ್ದ ಅದೇ ರೀತಿಯ ಇನ್ನೊಂದು ಪತ್ರವೊಂದನ್ನು ಅಂಚೆಯವನ ಕೈಯಲ್ಲಿ ನೋಡಿದ ಪವನ್, ತೆಗೆದು ನೋಡುತ್ತಾನೆ, ಎರಡು ಪತ್ರಗಳೂ ಒಂದೇ ಸ್ಥಳದಿಂದ ಬಂದಿವೆ. ಒಂದೇ ರೀತಿ ಇವೆಯಲ್ಲ ಎಂದುಕೊಂಡು ಹಿಂದಕ್ಕೆ ಕೊಟ್ಟುಬಿಡುತ್ತಾನೆ.

ತನಗೆ ಬಂದಿರುವ ಪತ್ರದ ವಿಳಾಸವನ್ನು ನೋಡುತ್ತಾನೆ. ಅಂದವಾಗಿ ಟೈಪ್ ಮಾಡಿದ ಅಕ್ಷರಗಳು. ಮಿಸ್ಟರ್ ಪವನ್ ಎಂದಿದೆ. ಅಮೆರಿಕಾದ ಸ್ಟಾಂಪ್‌ಗಳಿರುವ ಆ ಪತ್ರವನ್ನು ಹಿಂದಕ್ಕೆ ತಿರುಗಿಸಿ ನೋಡುತ್ತಾನೆ.

ಅಚ್ಚಾದ 'ಅಚಲಾ' ಎನ್ನುವ ಹೆಸರನ್ನು ನೋಡಿದ್ದೇ ಅವನ ಹೃದಯ ತಣ್ಣಗಾಗುತ್ತದೆ ಮತ್ತೆ ಅವನ ಹೃದಯದಲ್ಲಿ ಸಾವಿರಾರು ಬಣ್ಣಬಣ್ಣದ ಹಕ್ಕಿಗಳು ಒಮ್ಮೆಲೇ ಕುಪ್ಪಳಿಸಿ ಹಾರುತ್ತವೆ. ಅಚಲಾ ಹೆಸರಿನ ಪಕ್ಕದಲ್ಲಿ ಅದೊಂದು ಪ್ರಖ್ಯಾತ

ನಗರದ ಆಸ್ಪತ್ರೆ ಕೂಡ ಸೇರಿಕೊಂಡಿದೆ. ಆ ಆಸ್ಪತ್ರೆಯ ಹೆಸರನ್ನು ನೋಡಿದ ತಕ್ಷಣ ಹಾರುತ್ತಿದ್ದ ರೆಕ್ಕೆಗಳನ್ನು ಕತ್ತರಿಸಿಕೊಂಡು ನೆಲಕ್ಕೆ ಬೀಳುತ್ತವೆ.

ಭಯ, ಖುಷಿ ಸಂದೇಹ, ಉತ್ಸಾಹ, ಕುತೂಹಲ, ಆತುರ ಎಲ್ಲವೂ ಒಂದಾಗಿ ಅವನ ಮನ ಗೊಂದಲಗೊಳ್ಳುತ್ತದೆ. ಪತ್ರವನ್ನು ಒಡೆದು ಒಳಗಿರುವ ಒಂದು ಸಣ್ಣ ಲಕೋಟೆಯನ್ನು ಬಿಡಿಸಿ ಓದುತ್ತಾನೆ.

"ನನ್ನ ಪ್ರೀತಿಯ ಪವನ್ .....

(ಹೆಸರಿನ ಮೇಲೆ ಐದು ಚುಕ್ಕೆಗಳಿವೆ. ಆ ಚುಕ್ಕೆಗಳ ಮೇಲಿನ ತಾತ್ಪರ್ಯವಾದರೂ ಏನೋ...?)

ನಿನ್ನ ಹೆಸರಿನ ಮುಂದೆ ಪ್ರಿಯ ಎಂದು ಬರೆದಿದ್ದೇನೆ, ಅದೆಷ್ಟು ಸರಿಯೋ, ತಪ್ಪೋ ನನಗೆ ಗೊತ್ತಿಲ್ಲ. ನಾವಿಬ್ಬರೂ ಕೊನೆಯದಾಗಿ ಮಾತನಾಡಿಕೊಂಡಾಗ ಮತ್ತೆ ವಾಪಸ್ ಬರುತ್ತೇನೋ ಇಲ್ಲವೋ ಗೊತ್ತಿಲ್ಲ. ಮತ್ತೆ ಬೆಂಗಳೂರಿಗೆ ಬಂದಿದ್ದೇ ಆದರ ಖಂಡಿತ ಫೋನ್ ಮಾಡುತ್ತೇನೆ ಎಂದು ಹೇಳಿದ್ದೆ. ಈ ಪತ್ರ ಬರೆಯುವಾಗಲೂ ನನ್ನ ಮುಂದಿನ ಆರೋಗ್ಯದ ಸ್ಥಿತಿ ನನಗೆಯೇ ಗೊತ್ತಿಲ್ಲ. ಡಾಕ್ಟರ್‌ಗೇ ಏನಾದರೂ ಗೊತ್ತಿದೆಯೋ ಇಲ್ಲವೋ... ಒಟ್ಟಿನಲ್ಲಿ ನಿನ್ನನ್ನು ಸಂಧಿಸಿದ್ದೇಯಾದರೆ ನನ್ನ ಅದೃಷ್ಟ. ನಾನು ಮಾತನಾಡುವುದು ಸ್ಪಷ್ಟವಾಗಿ ಕೇಳುತ್ತಿದೆ ತಾನೆ?" ಪ್ರಶ್ನಿಸಿದಳು.

"ಕೇಳಿಸುತ್ತಿದೆ" ಮಗುವಿನಂತೆ ಅವನಿಗೆ ಅವನೇ ಉತ್ತರಿಸಿಕೊಂಡ. "ನನ್ನನ್ನು ಕ್ಷಮಿಸು" ಏನೇನೋ ಹೇಳಿ ನಿನ್ನ ಮನಸ್ಸನ್ನು ನೋಯಿಸುತ್ತಿದ್ದೇನೆ. ಅದೇನೋ ನಿನಗೆ ಮಾತ್ರ ಹೇಳಬೇಕೆನಿಸಿತು. ಹೇಳಿದೆ. ನಿನ್ನ ಪತ್ನಿ ಹೇಗಿದ್ದಾಳೆ? ಮೊದಲೊಂದು ಮಗುವಾಗಲಿ. ಏನಾದರೂ ಮಾತಾಡು. ಕೆಲವು ಕ್ಷಣಗಳು ಏನೂ ಮಾತನಾಡದೆ ಆ ಪದಗಳಿಗಿನ್ನು ಮುಂದೆ ಹೋಗಲಾರದೆ ಹಾಗೆ ಇದ್ದಳು.

"ಓ... ಪವನ್ ದಯವಿಟ್ಟು ಮಾತನಾಡು. ಪವನ್‌ಗೆ ಏನು ಮಾತನಾಡಬೇಕೋ ಅರ್ಥವಾಗದೆ ಇಂಗ್ಲಿಷಿನಲ್ಲಿ "ನಾನು ಪ್ರೀತಿಸುತ್ತೇನೆ ನಿನ್ನನ್ನು" ಎಂದ.

ಗಲಗಲನೆ ನಕ್ಕ ಅಚಲಾ ನೀನೇಳಿದ ಮಾತುಗಳು ಏಳು ಸಮುದ್ರಗಳನ್ನು ದಾಟಿ ನನ್ನ ಕಿವಿಗಳನ್ನು ಮುಟ್ಟಿವೆ ಎಂದಳು. ಕ್ಷಣದಲ್ಲಿನ ಅವಳ ಹಾಸ್ಯಕಾರಕ ತಿಳಿವಿಗೆ ಪವನ್ ಮಾರುಹೋದ. ಅವಳ ಮಾತುಗಳು ಪವನ್ ಯೋಚಿಸುವ ರೀತಿ ಒಂದಕ್ಕೊಂದು ಬಿಡಿಸಲಾರದ ಕೊಂಡಿಗಳಂತೆ ಬೆಳೆದುಕೊಂಡಿವೆ. ಪವನ್ "ಸ್ಪಿರಿಟ್" ಪ್ರಪಂಚವಿದೆಯೇ ಇಲ್ಲವೋ ಗೊತ್ತಿಲ್ಲ. ಬಹುಶಃ ಸತ್ತಮೇಲೆ ಸ್ಪಿರಿಟ್ ಪ್ರಪಂಚ

ಇದ್ದುದ್ದೆಯಾದರೆ ನಿನ್ನ ಬಗ್ಗೆ 'ಸ್ಪಿರಿಟ್' ಪ್ರಪಂಚಕ್ಕೆಲ್ಲಾ ತಿಳಿಸುತ್ತೇನೆ" ಜೋರಾಗಿ ನಕ್ಕಳು.

"ಓ ಅಚಲಾ, ಹಾಗೆಲ್ಲಾ ಮಾತನಾಡಬೇಡ"

"ಕ್ಷಮಿಸು ಪವನ್ ನಿನ್ನನ್ನು ಹಾಸ್ಯಮಾಡಬೇಕೆನಿಸಿತು."

"ಬೆಂಗಳೂರಿಗೆ ಯಾವಾಗ ಬರುತ್ತೀಯಾ..."

"ಗೊತ್ತಿಲ್ಲ. ಬಂದರೆ ಒಂದು ವಾರದೊಳಗೆಯೇ ಬರುತ್ತೇನೆ" ಆ ಮಾತೇಳುವಾಗ ಸ್ವರದಲ್ಲಿ ಸ್ವಲ್ಪ ತೊಂದರೆ ಇದ್ದಂತಿತ್ತು.

"ಅಚಲಾ ಅಚಲಾ" ಎಂದ.

"ಬೈ ಬೈ ಪವನ್" ಫೋನ್ ಕಟ್ಟಾದಂತಿತ್ತು. ಆ ಪತ್ರದ ಕೊನೆ ಪದದೊಂದಿಗೆ.

ಅವರಿಬ್ಬರೂ ಪತ್ರದೊಂದಿಗೆ ನೇರವಾಗಿ ಮಾತನಾಡಿಕೊಂಡಿದ್ದರು.

ಇನ್ನೊಂದು ಕೋಣೆಯಲ್ಲಿ ರುಚಿ ತನ್ನ ಹೆಸರಿಗೆ ಬಂದಿರುವ ರಿಜಿಸ್ಟರ್ಡ್ ಪತ್ರವನ್ನು ಒಡೆದು ಓದುತ್ತಾಳೆ. ಪತ್ರದ ಎಡಕೊನೆಯಲ್ಲಿ "ಅಚಲಾ" ಎಂದು ಬರೆದಿದೆ.

"ನನ್ನ ಅಕ್ಕರೆಯ ಗೆಳತಿ ರುಚಿ ಹೇಗಿದ್ದೀಯಾ? ನಿಮ್ಮ ತಾಯಿಗೆ ನನ್ನ ನಮಸ್ಕಾರಗಳನ್ನು ತಿಳಿಸು. ನಾನು ನ್ಯೂಯಾರ್ಕ್‌ಗೆ ಹೋಗುವುದಕ್ಕಿಂತ ಮುಂದೆ ನಿನ್ನನ್ನು ಸಂದಿಸಲು ಅವಕಾಶ ಸಿಗಲಿಲ್ಲ. ಕೆಲವು ದಿನಗಳಲ್ಲಿ ಬೆಂಗಳೂರಿಗೆ ಬರಬಹುದು, ಆಗ ಎಲ್ಲವೂ ವಿವರವಾಗಿ ಮಾತನಾಡೋಣ.

ನಿನಗೆ ಒಂದು ಮುಖ್ಯವಾದ ವಿಷಯವನ್ನು ಬಹಳ ದಿನಗಳಿಂದಲೂ ಹೇಳಬೇಕೆಂದಿದ್ದೆ. ಆದರೆ ಸಮಯ ಕೂಡಿ ಬರಲಿಲ್ಲ. ಏಕೆಂದರೆ ಈ ವಿಷಯದಲ್ಲಿ ನೀನು ಕೂಡ ಇನ್ವಾಲ್ವ್ ಆಗಿದ್ದೀಯ. ಕಳೆದ ನವೆಂಬರ್ ತಿಂಗಳಲ್ಲಿ ನೀನು ಸಂದರ್ಶನಕ್ಕೆ ಹೋಗಿ ಬಂದ ಮೇಲೆ ಮಿಸ್ಟರ್ ಪವನ್ ಬಗ್ಗೆ ತಿಳಿಸಿದ್ದೆ. ಮಿಸ್ಟರ್ ಪವನ್‌ನ ತಿಳಿವು, ಸೂಕ್ಷ್ಮಜಾನ ಮತ್ತು ಚತುರತೆಗೆ ಮಾರುಹೋದ ನಾನು ಅವರನ್ನು ಫೋನ್ ಮುಖಾಂತರ ಸತಾಯಿಸಲು ಹೋಗಿ ನಾನೇ ಅವರನ್ನು ಆಂತರಿಕವಾಗಿ ಪ್ರೀತಿಸಿಬಿಟ್ಟದ್ದೇನೆ...

ಸದ್ಯಕ್ಕೆ ಇಲ್ಲಿಗೆ ಮುಗಿಸುತ್ತೇನೆ, ನಿನ್ನ ಗೆಳತಿ ಅಚಲಾ – ಪತ್ರ ಅಲ್ಲಿಗೆ ಮುಗಿದಿದೆ.

ರುಚಿಯ ತಲೆಯೆಲ್ಲಾ ಒಮ್ಮೆಲೇ ಬಿಸಿಯಾದಂತಾಗಿ ಯಾವ ರೀತಿಯ ಪ್ರತಿಕ್ರಿಯೆಯೂ ಇಲ್ಲದೆ ಸ್ವಲ್ಪ ಸಮಯ ಸ್ಥಗಿತಗೊಂಡಿತು. ರುಚಿಯ ಎದುರಿಗಿದ್ದ ಫೋನ್ ರಿಂಗಾಯಿತು.

ಸುಮಾರು ಹೊತ್ತಾದ ಮೇಲೆ ತನ್ನ ಸಂದೇಹವನ್ನು ನಿವಾರಿಸಿಕೊಳ್ಳಲು ನಿಶ್ಚಯಿಸಿಕೊಂಡ ಪವನ್ ಇಂಟರ್‌ಕಾಮ್ ಒತ್ತಿದ್ದ. ರುಚಿ ಕನಸಿನಿಂದ ಎದ್ದಂತೆ ಪವನ್ ಕೋಣೆಯೊಳಕ್ಕೆ ಬಂದಳು.

ರುಚಿ ಕುಳಿತುಕೊಳ್ಳಲು ಕುರ್ಚಿ ತೋರಿಸಿದ ಪವನ್ ನೇರವಾಗಿ ವಿಷಯಕ್ಕೆ ಬಂದ. "ಮಿಸ್ ರುಚಿ, ಅಚಲಾ ನಿನಗೆ ಗೊತ್ತು ತಾನೇ?"

"ಹೌದು" ನೇರವಾಗಿ ಒಪ್ಪಿಕೊಂಡಳು. ತನ್ನ ಇಷ್ಟು ದಿನಗಳ ನಿಗೂಢವೆಲ್ಲಾ ಇಷ್ಟು ಸಿಂಪಲ್ ಆಗಿ ಬಹಿರಂಗವಾಗಿದ್ದಕ್ಕೆ ಒಮ್ಮೆಲೇ ಚಕಿತಗೊಂಡ ಪವನ್ ಮುಖದಲ್ಲಿ ನಾಚಿಕೆ ಇಣುಕಿತು. "ನಿಮಗ್ಯಾಗೆ ಗೊತ್ತು?" ಪ್ರಶ್ನಿಸಿದ.

"ನಾವಿಬ್ಬರು ಗ್ವಾಲಿಯರ್‌ನ ಜಾನ್ಸಿರಾಣಿ ಲಕ್ಷ್ಮಿಬಾಯಿ ಹೈಸ್ಕೂಲ್‌ನಲ್ಲಿ ಒಂದೇ ತರಗತಿಯಲ್ಲಿ, ಒಂದೇ ಹಾಸ್ಟಲ್‌ನ ಕೋಣೆಯಲ್ಲಿದ್ದೆವು. ಇಂಟರ್‌ಮೀಡಿಯೇಟ್ ಮುಗಿಸಿದ ಅಚಲಾ ಡೆಲ್ಲಿ ವಿಶ್ವವಿದ್ಯಾಲಯದಲ್ಲಿ ಬಿ.ಎಸ್ಸಿ ಮತ್ತು ಸ್ನಾತಕೋತ್ತರ ಪದವಿಯನ್ನು ಮುಗಿಸಿ ಗಣಿತದಲ್ಲಿ ಟಾಟಾ ಇನ್‌ಸ್ಟಿಟ್ಯೂಟ್ ಆಪ್ ಫಂಡಮೆಂಟಲ್ ರೀಸರ್ಚ್‌ನ ಗಣಿತ ವಿಭಾಗದಲ್ಲಿ ಸಂಶೋಧನೆ ಮಾಡಬೇಕೆನ್ನುವ ಹಂಬಲ ಇಟ್ಟುಕೊಂಡಿದ್ದಳು. ಆದರೆ ಅವಳ ಆಸೆ ಸಫಲಗೊಳ್ಳಲಿಲ್ಲ. ಅವಳ ದುರಾದೃಷ್ಟವೆಂದರೆ ಅವಳ ತಂದೆ ಹೃದಯಾಘಾತದಿಂದ ತೀರಿಕೊಂಡರು. ಎರಡು ವರ್ಷಗಳ ಹಿಂದೆ. ಬೇಕಾದಷ್ಟು ಐಶ್ವರ್ಯವೇನೋ ಇದೆ ಆದರೆ ದೇವರು ಅವಳಿಗೆ ಒಳ್ಳೆಯ ಆರೋಗ್ಯವನ್ನು ಕೊಟ್ಟಿಲ್ಲ. ತಾಯಿ ಮತ್ತು ಅವರಣ್ಣ, ಇಬ್ಬರೂ ಬೆಂಗಳೂರಿನಲ್ಲೇ ಇದ್ದಾರೆ.

"ಆರೋಗ್ಯ ಅಂದರೆ...?" ಪವನ್ ಪ್ರಶ್ನಿಸಿದ. ಹೃದಯದ ಬೆಳವಣಿಗೆ ದೇಹಕ್ಕೆ ತಕ್ಕಾಗಿ ಬೆಳೆಯುತ್ತಿಲ್ಲವಂತೆ. ಈ ರೀತಿಯೂ ಆಗುತ್ತದೆಯೇ? ಪವನ್ ಪ್ರಶ್ನಿಸಿಕೊಂಡ.

ಬಹುಶಃ ಸೃಷ್ಟಿ ಕೂಡ ಅವಳಿಗೆ ದ್ರೋಹ ಬಗೆದಿರಬಹುದು. ಅವನ ಹೃದಯ ಸಣ್ಣಗಾಯಿತು.

ಇಬ್ಬರ ಮಧ್ಯೆದ ಒಂದೆರಡು ಕ್ಷಣಗಳನ್ನು ಕಾಲ ಮೌನವಾಗಿ ನುಂಗಿಕೊಂಡಿತು.

ರುಚಿಗೆ ಗೊತ್ತಿದ್ದರೂ, "ಹೌದು ಅಚಲಾ ನಿಮಗೇಗೆ ಗೊತ್ತು" ಪ್ರಶ್ನಿಸಿದಳು. ಆ ಪ್ರಶ್ನೆ ಅವನ ಆಳದಲ್ಲಿನ ನಿಗೂಢವನ್ನೆಲ್ಲಾ ಭೇದಿಸಿದಂತಿತ್ತು. ಪವನ್‌ನ ಮುಖದಲ್ಲಿನ ಸ್ನಾಯುಗಳು ಸ್ವಲ್ಪ ಸಡಿಲಗೊಂಡರೂ, ಉತ್ತರ ಮಾತ್ರ ತಕ್ಷಣ ಹೊರಬರಲಿಲ್ಲ.

"ನಿಮಗೆ ಗೊತ್ತಿಲ್ಲವೆ? ಅಚಲಾ ಪತ್ರದಲ್ಲಿ ಬರೆದಿರುವುದನ್ನು ಓದಲಿಲ್ಲವೆ?" ಪ್ರಶ್ನಿಸಿದ. ಒಂದು ಕ್ಷಣ ಹೌಹಾರಿದ ರುಚಿ ನಿಮಗ್ಯಾಗೆ ಗೊತ್ತು ಎನ್ನುವ ಮಾತುಗಳು,

ತುಟಿಗಳವರೆಗೂ ಬಂದಿದ್ದರೂ, ಅಲ್ಲಿಯೇ ಹಿಡಿದಿಟ್ಟುಕೊಂಡಳು. ಪವನ್‌ನ ಸಮಯಪ್ರಜ್ಞೆಗೆ ರುಚಿ ದಂಗಾಗಿಬಿಟ್ಟಳು.

"ನಿಮ್ಮ ಮುಖಾಂತರವೇ ಪರಿಚಯವಾಗಿರುವುದು ಅಲ್ಲವೆ?" ಪವನ್ ತನ್ನ ತಿಳಿವನ್ನು ಇನ್ನಷ್ಟು ಕಾತರಿಪಡಿಸಿಕೊಳ್ಳುವಂತೆ ಕೇಳಿದ.

ರುಚಿ ಮತ್ತೊಮ್ಮೆ ಒಪ್ಪಿಕೊಂಡಳು. ಮಿಕ್ಕ ಕತೆಯನ್ನು ತಾನೇ ಪೋಣಿಸಿಕೊಂಡು ಅಚಲಾಳ ಬೆಂಗಳೂರಿನ ವಿಳಾಸವನ್ನು ತಿಳಿದುಕೊಂಡ.



ತರುಣ್ ಒಮ್ಮೆ ಕನ್ನಡಿಯಲ್ಲಿ ನೋಡಿಕೊಂಡ. ತನ್ನ ರೂಪ ಸಂಪೂರ್ಣವಾಗಿ ಭಿನ್ನವಾಗಿ ತೃಪ್ತಿ ಎನಿಸಿದ ಮೇಲೆ ತನಗೆ ನೆಚ್ಚಿನ ಪಿಸ್ತೂಲಿನಲ್ಲಿ ಐದು ಗುಂಡುಗಳನ್ನು ತುಂಬಿ ಜೇಬಿನಲ್ಲಿ ಇಟ್ಟುಕೊಂಡು, ಜೊತೆಗೆ ಯಾವುದಕ್ಕೂ ಒಳಿತೆಂದು ವಾಯರ್‌ಲೆಸ್ ಸೆಟ್ ಕೂಡ ತೆಗೆದುಕೊಂಡ.

ಬೆಂಗಳೂರಿನ ಮೇಲೆ ಸುಮ ಸುಮ ಸಾಯಂಕಾಲ ಧಾಳಿಮಾಡುತ್ತಿದ್ದು. ನಿದ್ದೆಯಿಂದ ಎಚ್ಚೆತ್ತ ದೀಪಗಳು ಮಿನುಗಲು ಪ್ರಾರಂಭಿಸಿದ್ದವು. ತಾನು ಸೇರಬೇಕಾಗಿರುವ ಸ್ಥಳಕ್ಕೆ ತರುಣ್ ಸೇರಿಕೊಂಡ. ಅದೊಂದು ಭವ್ಯವಾದ ರಸ್ಟೋರೆಂಟ್ ಕಂ ಬಾರ್‌ನ ಆವರಣ. ಸುತ್ತಲೂ ಒಮ್ಮೆ ಸೂಕ್ಷ್ಮವಾಗಿ ಗಮನಿಸಿದ ಮೇಲೆ ಮುಂದಕ್ಕೆ ಹೆಜ್ಜೆಯಾಕಿದ. ಈಗಾಗಲೇ ಅವನ ಸಂದೇಹದ ಪಟ್ಟಿಯಲ್ಲಿದ್ದ ಹೆಚ್ಚು ಕಮ್ಮಿ ಎಲ್ಲಾ ಲಗ್ಜುರಿ ರೆಸ್ಟೋರೆಂಟ್ಸ್ ಮತ್ತು ಬಾರ್‌ಗಳಲ್ಲಿ ಕಾಯುತ್ತ ಕೂತು ಕೂತು ದಣಿದು ಹೋಗಿದ್ದಾನೆ. ಆದರೆ, ಆಗ ತಾನು ಹಿಡಿದುಕೊಳ್ಳಬೇಕಿದ್ದ ಆಗಂತಕನ ಬಗ್ಗೆ ಏನೇನೂ ಗೊತ್ತಿಲ್ಲ. ಈಗ ತಾನು ಹಿಡಿದುಕೊಳ್ಳಬೇಕಿರುವ ಆಗಂತಕನ ಮುಖ ಚೆಹರೆ ನಿರ್ದಿಷ್ಟವಾಗಿ, ಸ್ಪಷ್ಟವಾಗಿ ಗೊತ್ತಿರುವುದೇ ಅವನಲ್ಲಿ ಚಿಮ್ಮುತ್ತಿರುವ ವಿಶ್ವಾಸ.

ಒಂದೊಂದು ರೀತಿಯ ಪ್ರಯತ್ನದಲ್ಲೂ ಒಂದೊಂದು ಚಳ್ಳೇಹಣ್ಣು ತಿಂದಿರುವ ತರುಣ್‌ಕುಮಾರ್ ಮೈ ಹುಳಿಯಿಂದ ತುಂಬಿ ಹೋಗಿದೆ. ಎದುರಿಗೆ ಸಿಕ್ಕರೆ ಸಾಕು ಪಿಸ್ತೂಲನ್ನು ತೆಗೆದು ನೇರವಾಗಿ ಅವನ ಹಣೆಯ ಮೇಲೆಯೇ ಗುರಿ ಹಿಡಿಯುವಷ್ಟು ಕೋಪದಲ್ಲಿದ್ದಾನೆ.

ಟಕ್‌ಟಕ್‌ನ ನೇರವಾಗಿ ಹೆಜ್ಜೆಯಾಕಿದ ತರುಣ್‌ಕುಮಾರ್ ಬಂದು ೪೫° ತಿರುವಿನಲ್ಲಿ ತಿರುಗಿಕೊಳ್ಳುತ್ತಾನೆ. ಎದುರು ಮುಖವಾಗಿ ಬರುತ್ತಿರುವ ಒಂದು ಯುವ ಜೋಡಿ ಅವನಿಗೆ ಸ್ಪರ್ಶಯಾಗುವಷ್ಟು ದೂರದಲ್ಲಿ ನಿಲ್ಲುತ್ತದೆ. ಎದುರಿಗೆ ನಿಂತಿರುವ ಮನುಷ್ಯನ ಮುಖ ನೋಡಿದ್ದೇ ತರುಣ್‌ಕುಮಾರ್ ಮೈಯಲ್ಲ ಒಮ್ಮೆಲೇ ಕಂಪನಗೊಳ್ಳುತ್ತದೆ.

ಒಳ ಜೇಬಿನಲ್ಲಿದ್ದ ಪಿಸ್ತೂಲನ್ನು ಕೈಗೆ ತೆಗೆದುಕೊಳ್ಳುವಷ್ಟರಲ್ಲಿ ಎದುರಿಗಿದ್ದ ಮನುಷ್ಯನಿಗೆ ಸಂದೇಹ ಮೂಡುತ್ತದೆ. ತನ್ನ ಶಕ್ತಿಯನ್ನೆಲ್ಲಾ ಹಿಡಿಯಾಗಿಸಿಕೊಂಡು ಮುಷ್ಠಿ ಎತ್ತಿ ಒಂದು ಗುದ್ದು ಗುದ್ದುತ್ತಾನೆ, ಮುಖದ ಮೇಲೆ. ತಲ್ಲಣಿಸಿದ ತರುಣ್‌ಕುಮಾರ್ ಸ್ಕೇಟಿಂಗ್ ಆಟಗಾರನಂತೆ ಅಷ್ಟು ದೂರದಲ್ಲಿ ಜಾರಿ ಬೀಳುವುದರ ಜೊತೆಗೆಯೇ ಪಿಸ್ತೂಲನ್ನು ಕೈಗೆ ತೆಗೆದುಕೊಳ್ಳುವುದರಲ್ಲಿ ಸಫಲನಾಗಿ ನೆಲದಿಂದಲೇ ಟ್ರಿಗರ್ ಒತ್ತುತ್ತಾನೆ. ಅಷ್ಟರಲ್ಲಿ ಚಿರತೆಯಂತೆ ಒಂದೇ ನೆಗೆತಕ್ಕೆ ತಪ್ಪಿಸಿಕೊಂಡು ಹೊರಗಡೆಗೆ ಹಾರಿ ಕಾರಿನ ಬಾಗಿಲು ತೆಗೆಯುತ್ತಾನೆ ಆಗಂತಕ.

ಅಷ್ಟರಲ್ಲಿ ಚೇತರಿಸಿಕೊಂಡು ಮೇಲೆದ್ದ ತರುಣ್ ಎರಡನೆಯ ಗುಂಡನ್ನು ಗುರಿಯಿಡುವಷ್ಟರಲ್ಲಿ ಜನರು ಅಡ್ಡಬಂದು ಇನ್ನೆರಡು ಹೆಜ್ಜೆಗಳನ್ನಿಟ್ಟು ಹತ್ತಿರ ಬರುವಷ್ಟರಲ್ಲಿ ಕಾರು ಚಲನೆಗಳ್ಳುತ್ತಾ ವೇಗವಾಗಿ ತಿರುಗಿಕೊಳ್ಳುತ್ತದೆ.

ಎರಡು ಮತ್ತು ಮೂರನೆಯ ಗುಂಡು ಕಾರಿನ ಎರಡೂ ಚಕ್ರಗಳಲ್ಲಿ ತೂರಿಕೊಳ್ಳುತ್ತವೆ. ಕಾರು ಮಾತ್ರ ವೇಗವಾಗಿ ರಸ್ತೆಗೆ ಕುಪ್ಪಳಿಸಿ ಎದುರಿಗೆ ಬರುತ್ತಿರುವ ಇನ್ನೊಂದು ಲಾರಿಗೆ ಡಿಕ್ಕಿ ಹೊಡೆಯುತ್ತದೆ. ಡಿಕ್ಕಿ ಹೊಡೆಸಿಕೊಂಡ ಕಾರು ಡಕ್ಕಾ ಮುಕ್ಕಾ ಆಗಿ ರಸ್ತೆಯ ಮೇಲೆ ಪಳಪಳನೆ ಜಾರಿ ಒಂದು ಕಟ್ಟಡವನ್ನು ಆಶ್ರಯಿಸಿಕೊಳ್ಳುತ್ತದೆ.

ಆಗಂತಕನಿರುವ ಕಾರು ಹತೋಟಿ ಕಳೆದುಕೊಂಡು ಹಿಂದಕ್ಕೆ ಒಂದು ಪಲ್ಟಿ ಹೊಡೆದು ಸ್ವಲ್ಪ ದೂರ ಜಾರಿಕೊಂಡೋಗಿ ನಿಲ್ಲುತ್ತದೆ. ಈ ಸಮಯವನ್ನು ಸದುಪಯೋಗಿಸಿಕೊಂಡ ತರುಣ್‌ಕುಮಾರ್ ವೇಗವಾಗಿ ಹತ್ತಿರಕ್ಕೆ ಧಾವಿಸಿ ನಾಲ್ಕನೆಯ ಗುಂಡನ್ನು ಅವನ ಹಣೆಯ ಮೇಲಿಟ್ಟು ಕಾರಿನಿಂದ ಹೊರಕ್ಕೆ ಬರುವಂತೆ ಆಜ್ಞಾಪಿಸುತ್ತಾನೆ. ಕತ್ತಲು ಬೆಳಕಿನ ಮಧ್ಯೆ ಅಲ್ಲಲ್ಲಿ ನಿಂತಿರುವ ಜನ ನಿಶಬ್ದವಾಗಿ ಎದುರಿನ ದೃಶ್ಯವನ್ನು ನೋಡುತ್ತಿದ್ದಾರೆ.

ಮುಖಬಿಟ್ಟು ದೇಹದ ಮೇಲೆ ಎಲ್ಲಾದರೂ ಒಂದು ಗುಂಡನ್ನು ತೂರಿಸಿದರೆ ಒಳಿತೇನೋ ಎನ್ನುವಂತೆ ಅವನ ದೆವ್ವದ ಒಂದು ಮನ ಹೇಳಿದರೂ, ಇನ್ನೇನೂ ಚಾಲಾಕಿತನ ತೋರಿಸಲಾರ ಎಂದುಕೊಂಡು ಹಣೆಗಿಟ್ಟ ಗುರಿಯನ್ನು ಸ್ವಲ್ಪ ಹಿಂದಕ್ಕಿಡುತ್ತಾ ಹೊರಕ್ಕೆ ಬರಲು ಸಹಾಯ ಮಾಡುತ್ತಿದ್ದಾನೆ.

ಅದರ ಜೊತೆಯೇ ಇನ್ನೇನೋ ಉಪಾಯ ಹೊಳೆದು ಹೊರಕ್ಕೆ ಬರದೆ ಒಳಗೆಯೇ ಇರುವಂತೆ ಆಜ್ಞಾಪಿಸುತ್ತಾನೆ. ಆಘಾತದಿಂದ ಚೇತರಿಸಿಕೊಳ್ಳುತ್ತಿರುವ ಆಗಂತಕ ಇವನಿಂದ ತಪ್ಪಿಸಿಕೊಂಡು ಓಡಲಾರನೆ? ಇದೆ ತನ್ನ ಕೊನೆಯ ಘಳಿಗೆಯೇ? ಯೋಚಿಸುತ್ತಿದ್ದಾನೆ. ಎಷ್ಟೋ ಅನಾಹುತಗಳಲ್ಲಿ ತನ್ನನ್ನು ಪಾರು

ಮಾಡಿಸಿರುವ ಕಾರು ರಾಣಾ ಪ್ರತಾಪ್‌ಸಿಂಗ್‌ನ ಚೇತಕ್ ಕುದುರೆಯಂತೆ ಮುರಿದುಬಿದ್ದಿದೆ.

ಜನ ಹೆಚ್ಚಾಗಿ ಸುತ್ತಲು ಬಂದರೆ ತಪ್ಪಿಸಿಕೊಳ್ಳಲು ಸಹಾಯವಾಗಬಹುದೇನೋ ಎನ್ನುವ ಯೋಚನೆ ಅವನ ಮನದಲ್ಲಿ ಒಮ್ಮೆ ಮಿಂಚಿ ಮಾಯವಾಯಿತು. ಏಕೆಂದರೆ ಹತ್ತಿರ ಬರುತ್ತಿರುವ ಜನರನ್ನು ದೂರದಲ್ಲೇ ನಿಲ್ಲುವಂತೆ ತರುಣ್‌ಕುಮಾರ್ ಆಜ್ಞಾಪಿಸಿದ. ಜನ ಎಲ್ಲಿದ್ದವರು ಅಲ್ಲಿಯೇ ನಿಂತುಕೊಂಡರು.

ತರುಣ್‌ಕುಮಾರ್ ವಯರ್‌ಲೆಸ್ ಮುಖಾಂತರ ಹತ್ತಿರದ ಪೊಲೀಸ್ ಠಾಣೆಗೆ ವಿಷಯ ತಿಳಿಸಿದ. ಕಾರಿನಿಂದ ಹೊರಕ್ಕೆ ಬಂದಿದ್ದರೆ ಹೇಗಾದರೂ ತಪ್ಪಿಸಿಕೊಳ್ಳ ಬಹುದಿತ್ತು. ಆದರೆ ಈ ತರುಣ್‌ಕುಮಾರ್ ಅಸಾಧ್ಯನೇ ಎಂದುಕೊಂಡ ಆಗಂತಕ. ಕಾರಿನ ಒಳಗಡೆಯೇ ಪ್ರಶ್ನೆಗಳಲ್ಲೇ ಸುತ್ತಿಕೊಂಡು ಅದೊಂದು ರೀತಿಯಲ್ಲಿ ಕುಳಿತಿದ್ದಾನೆ.

ಈಗಲೂ ತನ್ನ ಜೇಬಿನಲ್ಲಿರುವ ಪಿಸ್ತೂಲನ್ನು ತೆಗೆದು ತರುಣ್‌ನನ್ನು ಮುಗಿಸಿಬಿಡಬೇಕೆಂದುಕೊಂಡರು, ಕಾರಿನ ಒಳಗಿರುವ ತಾನು ಅವನನ್ನು ಮುಗಿಸಿ ಹೊರಗಡೆ ಹೋಗಲಾರೆ. ಹಾಗೆ ಪ್ರಯತ್ನಪಟ್ಟರೂ ಅಷ್ಟರಲ್ಲಿ ಅವನು ಉಳಿದಿರುವ ಎರಡು ಗಂಡುಗಳನ್ನು ತನ್ನ ಮೇಲೆ ಪ್ರಯೋಗಿಸುತ್ತಾನೆ.

ಇದ್ದಕ್ಕಿದ್ದ ಹಾಗೆ ಏನೋ ದೃಢವಾಗಿ ನಿಶ್ಚಯಿಸಿಕೊಂಡ ಅವನು ಪಿಸ್ತೂಲನ್ನು ಜೇಬಿನಿಂದ ಹೊರಕ್ಕೆ ತೆಗೆದು ತರುಣ್‌ಕುಮಾರ್ ಮೇಲೆ ಪ್ರಯೋಗಿಸಿಯೇಬಿಟ್ಟ. ಇದನ್ನು ಮೊದಲೇ ತಿಳಿದಿದ್ದ ತರುಣ್ ತಪ್ಪಿಸಿಕೊಂಡು ಕಾರಿನ ಪಕ್ಕಕ್ಕೆ ಉರುಳಿಕೊಂಡು ನಿಧಾನವಾಗಿ ಕಾರಿನ ಹಿಂದಕ್ಕೆ ಹೋಗಿ ಬಗ್ಗಿ ಪಿಸ್ತೂಲಿನ ಟ್ರಿಗರ್ ಮೇಲೆ ಬೆರಳಿಟ್ಟು ತಯಾರಾಗಿದ್ದಾನೆ.

ಚಂಗನೆ ಕುಪ್ಪಳಿಸಿ ಹಾರುವಷ್ಟು ಶಕ್ತಿಯುಕ್ತಿ ಅವನಿಗಿದ್ದರೂ, ಒಂದೇ ನೆಗೆತಕ್ಕೆ ಕಾರಿನಿಂದ ಹೊರಕ್ಕೆ ಹಾರುವಷ್ಟು ದಾರಿ ಮಾತ್ರ ಇರಲಿಲ್ಲ. ಕ್ಷಣಗಳು ಉರುಳುತ್ತಿವೆ. ಈಗ ತಪ್ಪಿಸಿಕೊಳ್ಳದಿದ್ದರೆ ಮತ್ತೆ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಅಕ್ಕಪಕ್ಕದ ಪೊಲೀಸ್ ಠಾಣೆಗಳಿಂದ ಪೋಲಿಸರು ಬಂದುಬಿಡುತ್ತಾರೆ. ಇಬ್ಬರೂ ಸಿವಿಲ್ ಉಡುಪುಗಳಲ್ಲಿರುವುದರಿಂದ ಇದ್ಯಾವುದೂ ಬೆಂಗಳೂರಿನ ಆಯಿಲ್ ಕತೆಗಳೋ ಅಥವಾ ಅಂಡರ್‌ವರ್ಲ್ಡ್ ಕತೆಗಳೂ ಎನ್ನುವ ಗೊಂದಲದಲ್ಲಿದ್ದಾರೆ ನೋಡುವ ಜನ.

ತನ್ನ ಬಲವನ್ನೆಲ್ಲ ಕೇಂದ್ರೀಕರಿಸಿಕೊಂಡ ಅವನ ಮುಷ್ಟಿ ಕಾರಿನ ಒಂದು ಕಿಟಕಿಯನ್ನು ಪಳ್ಳನೆ ಒಡೆಯುತ್ತದೆ. ಶಬ್ದ ಬಂದ ಕಡೆ ತರುಣ್ ಬಗ್ಗಿ ನೋಡುತ್ತಾನೆ. ತನ್ನ ದೇಹವನ್ನೆಲ್ಲಾ ಕಾರಿನ ಹಿಂದೆಯೇ ಇಟ್ಟು, ಆದರೆ ಇನ್ನೊಂದು ಕಡೆಯಿಂದ

ಆಗಂತಕ ಕುಪ್ಪಳಿಸಿ ಮೀನಿನಂತೆ ಚಂಗನೆ ಹಾರುತ್ತಿದ್ದಂತೆ ತರುಣ್ ಪಿಸ್ತೂಲಿನಲ್ಲಿದ್ದ ಒಂದು ಗುಂಡು ಅವನ ತೊಡೆಯೊಳಕ್ಕೆ ತೂರಿಕೊಳ್ಳುತ್ತದೆ. ಸ್ವಲ್ಪ ಕತ್ತರಿಸಿದ ಆಗಂತಕ ಇನ್ನೊಂದು ಕಾಲನ್ನು ಭೂಮಿಗೆ ಬಲವಾಗಿ ಒತ್ತಿ ವೇಗವಾಗಿ ಓಡುತ್ತಾನೆ. ಐದನೆಯ ಗುಂಡನ್ನು ತರುಣ್ ಕಾರಿನ ಹಿಂದಿನಿಂದಲೇ ಇನ್ನೊಂದು ತೊಡೆಗೆ ಗುರಿಯಿಡುತ್ತಾನೆ. ಆ ಗುಂಡು ತೊಡೆಯಲ್ಲಿ ತೂರಿಕೊಳ್ಳುತ್ತವೆ. ಈಗ ಇನ್ನಷ್ಟು ತತ್ತರಿಸಿದ ಆಗಂತಕ ವೇಗವಾಗಿ ಓಡಿ ತಪ್ಪಿಸಿಕೊಳ್ಳಲಾರೆ ಎಂದು ತಿಳಿದು ಹಿಂದಕ್ಕೆ ತಿರುಗಿಕೊಂಡು ಒಮ್ಮೆ ನೋಡಿದ. ತರುಣ್‌ಕುಮಾರ್ ಕಾರಿನ ಹಿಂದೆ ನಿಂತುಕೊಂಡು ಪಿಸ್ತೂಲನ್ನು ಮುಷ್ಠಿಯಲ್ಲಿ ಗಟ್ಟಿಯಾಗಿ ಹಿಡಿದುಕೊಂಡಿದ್ದಾನೆ. ಅದರಲ್ಲಿ ಗುಂಡುಗಳಿಲ್ಲ ಎನ್ನುವುದು ಗೊತ್ತಾಗಿದೆ.

ಆಗಂತಕ ಕೈಯಲ್ಲಿರುವ ಪಿಸ್ತೂಲನ್ನು ತರುಣ್ ಕಡೆಗೆ ಗುರಿ ಇಟ್ಟು ಆದಷ್ಟು ವೇಗವಾಗಿ ಕಾರಿನ ಕಡೆ ಕಾಲುಗಳನ್ನೆಳೆಯುತ್ತಾ ನಡೆದು ಬರುತ್ತಿದ್ದಾನೆ. ತರುಣ್ ಸ್ವಲ್ಪ ಧೃತಿಗೆಟ್ಟವನಂತೆ ಅವನ ಕಡೆಗೆ ನೋಡುತ್ತಿದ್ದಾನೆ. ಜನರು ಹತ್ತಿರಕ್ಕೆ ಬರದೆ ದೂರದಿಂದಲೇ ನೋಡುತ್ತಿದ್ದಾರೆ. ಅದರ ಮಧ್ಯೆಯೇ ಇನ್ನೊಮ್ಮೆ ವಾಯರ್‌ಲೆಸ್ ಮುಖಾಂತರ ಪೊಲೀಸ್ ಠಾಣೆಗೆ ವಿಷಯ ತಿಳಿಸಿ ತಾನಿರುವ ಸ್ಥಳವನ್ನು ತಿಳಿಸಿದ್ದಾನೆ. ಹತ್ತಿರ ಬಂದು ಟ್ರಿಗರ್ ಒತ್ತಿದ ಒಂದು ಗುಂಡು ಕಾರಿನ ದೇಹಕ್ಕೆ ಸೋಕಿ ಸೋಕದಂತೆ ದೂರಕ್ಕೆ ಹಾರಿ ನೆಲ ಅಪ್ಪಳಿಸಿತು. ಪಿಸ್ತೂಲಿಗೆ ಎದುರಾಗಿ ತಲೆ ಮರೆಸಿಕೊಂಡ ತರುಣ್ ಕೆಳಗಿನಿಂದ ಅವನ ಕಾಲುಗಳ ಚಲನೆಯನ್ನು ವೀಕ್ಷಿಸುತ್ತಿದ್ದಾನೆ. ಸಲೀಸಾಗಿ ಬಗ್ಗಲಾರದ, ಕುಳಿತುಕೊಳ್ಳಲಾರದ, ಆಗಂತಕ ಚಿರತೆಯಂತೆ ಶ್ವಾಸಕೋಶ ಬಿಡುತ್ತಾ ಕೈಯಿಂದ ತಪ್ಪಿಸಿಕೊಂಡ ಹುಲ್ಲೆಯ ಮೇಲೆ ಹಾರಿ ಬೀಳಲು ಹೋರಾಟ ನಡೆಸುತ್ತಿದ್ದಾನೆ. ಸ್ವಲ್ಪ ಬಗ್ಗಿದ ಆಗಂತಕ ನೇರವಾಗಿ ಎದುರುಗಡೆ ಇರುವ ತರುಣ್ ಮೇಲೆ ಕಾರಿನ ಕೆಳಗಿಂದ ಟ್ರಿಗರ್ ಒತ್ತಿದ. ಗುಂಡು ಮುಂದಿನ ಎಡಗಡೆಯ ಟೈರಿನಲ್ಲಿ ತೂರಿ ಗಾಳಿ ಟುಸ್ಸನೆ ಶಬ್ದಮಾಡುತ್ತಾ ಹೊರಹೊಮ್ಮುತ್ತದೆ.

ಅಷ್ಟರಲ್ಲಿ ಒಂದು ಪೊಲೀಸ್ ವಾಹನ ವೇಗವಾಗಿ ಧಾವಿಸಿ ಬಂದು ನಿಲ್ಲುತ್ತದೆ. ಹಿಂದಿನಿಂದ ಟಪಟಪನೆ ಇಳಿದು ಬಂದ ಪೇದೆಗಳು ಗನ್ನುಗಳನ್ನೆತ್ತಿ ನೇರವಾಗಿ ಗುರಿ ಹಿಡಿದು ನಿಲ್ಲುತ್ತಾರೆ. ಮುಂದಿನಿಂದ ಕೆಳಗಿಳಿದು ಬಂದ, ಒಬ್ಬ ಪೊಲೀಸ್ ಅಧಿಕಾರಿ ಆಗಂತಕನ ಕಡೆ ಪಿಸ್ತೂಲನ್ನು ಹಿಡಿಯುತ್ತ ಕೈಗಳನ್ನು ಮೇಲೆತ್ತುವಂತೆ ಆಜ್ಞಾಪಿಸಿದ.



ಫೋನ್ ಎಂಬ ಹೆಸರನ್ನು ಕೇಳಿದೊಡನೆಯೇ ಬೆಚ್ಚಿ ಬೀಳುವಂತಾಗಿದ್ದ ಪ್ರಾಚಿ

ಫೋನ್ ಸಂಪರ್ಕವನ್ನು ತುಂಡರಿಸಿ ಮೂಲೆಯಲ್ಲಿರಿಸಿಬಿಟ್ಟಿದ್ದಳು. ಎಷ್ಟೋ ಹೊತ್ತು ಫೋನ್ ಸಂಪರ್ಕಕ್ಕಾಗಿ ಪ್ರಯತ್ನಪಟ್ಟು ತರುಣ್, ಕೊನೆಗೆ ಸುಮ್ಮನಾದ.

ತನ್ನ ಉತ್ಸಾಹವೆಲ್ಲಾ ನುಂಗಿಕೊಂಡಿದ್ದ ತರುಣ್ ಬೆಳಿಗ್ಗೆ ಫೋನ್ ತೆಗೆದುಕೊಂಡು ಪವನ್ ಕಚೇರಿಯ ಸಂಖ್ಯೆಗೆ ರಿಂಗ್ ಮಾಡಿದ. ಫೋನ್ ಮೊಳಗಿದ ತಕ್ಷಣ ತೆಗೆದುಕೊಂಡು "ಹಲೋ... ಪವನ್ ಮಾತನಾಡುವುದು" ಎಂದ. "ಮಿಸ್ಟರ್ ಪವನ್ ನಿಮ್ಮ ಮನೆ ಫೋನ್ ಕೆಲಸ ಮಾಡುವುದಿಲ್ಲವೆ?"

"ಇಲ್ಲ"

"ಹೌದು, ನೀವು ಮಿಸ್ಟರ್ ತರುಣ್ ಅಲ್ಲವೆ?"

"ಹೌದು"

"ಏನು ವಿಶೇಷ?"

"ಬಹಳ ದೊಡ್ಡ ವಿಶೇಷವೇ. ರಾತ್ರಿಯೇ ತಿಳಿಸಬೇಕೆಂದು ಬಹಳ ಪ್ರಯತ್ನ ಪಟ್ಟೆ. ಆದರೆ ಸಂಪರ್ಕ ಸಿಗಲಿಲ್ಲ."

"ಪ್ರಾಚಿ ಫೋನ್ ಸಂಪರ್ಕವನ್ನು ತುಂಡರಿಸಿ ಮೂಲೆಯಲ್ಲಿಟ್ಟಿದ್ದಾಳೆ."

"ಇನ್ನು ನೀವು ಫೋನ್ ಬಗ್ಗೆ ತಲೆ ಕೆಡಿಸಿಕೊಳ್ಳಬೇಕಾಗಿಲ್ಲ. ಆ ಹಂತಕ ನಮ್ಮ ಅತಿಥಿಯಾಗಿ ಹತ್ತು ಗಂಟೆಗಳೇ ಆಯಿತು. ಅಷ್ಟೇ ಅಲ್ಲ, ಎರಡು ಕಾಲುಗಳಲ್ಲೂ ಎರಡು ಗುಂಡುಗಳು ಇಳಿದಿವೆ."

ಪವನ್ ಒಮ್ಮೆಲೇ 'ಓ ದೇವರೇ' ಎಂಬ ಉದ್ಗಾರ ತೆಗೆದು ಬಹಳ ಧನ್ಯವಾದಗಳು ಮಿಸ್ಟರ್ ತರುಣ್ ನಿಮಗೊಂದು ಒಳ್ಳೆ ಔತಣ ಕೊಡುತ್ತೇನೆ." ಎಂದ. "ವಂದನೆಗಳು" ತರುಣ್ ಹೇಳಿದ. "ಮನೆಗೆ ಬನ್ನಿ ಪವನ್" ಆಹ್ವಾನಿಸಿದ. "ಇಲ್ಲ, ಇನ್ನೆರಡು, ಮೂರು ದಿನ ಬಿಟ್ಟು ಬರುತ್ತೇನೆ."

"ಆಯಿತು, ಬೆಳಿಗ್ಗೆ ಬಹಳ ಒಳ್ಳೇ ಸಮಾಚಾರವೇ ತಿಳಿಸಿದ್ದೀರಿ. ನಾನು ಮೊದಲು ಪ್ರಾಚಿಗೆ ತಿಳಿಸುತ್ತೇನೆ."

"ಆಗಬಹುದು ಮತ್ತೆ ಸಿಗೋಣ."

"ಓಕೆ" ಫೋನ್ ಕಟ್ಟಾಯಿತು.



ಪವನ್ ಪ್ರಾಚಿಗೆ ವಿಷಯ ತಿಳಿಸಲು ಈಗಲೇ ಮನೆಗೆ ಹೋಗಬೇಕೆಂದು

ನಿಶ್ಚಯಿಸಿಕೊಂಡು ಮೇಜಿನ ಮೇಲಿದ್ದ ಕರೆಗಂಟೆಯನ್ನು ಒತ್ತಿದ. ಅಷ್ಟರಲ್ಲಿ ಬಾಗಿಲು ತೆಗೆದುಕೊಂಡು ಒಳಕ್ಕೆ ಬಂದ ಮಿಸ್ ರುಚಿ ಶುಭ ಬೆಳಗ್ಗನ್ನು ಕೋರಿ ನೇರವಾಗಿ ವಿಷಯಕ್ಕೆ ಬಂದಳು.

"ಸಾರ್... ನಿಮಗೆ ಗೊತ್ತಿಲ್ಲವೆ?" ಸ್ವಲ್ಪ ಆಶ್ಚರ್ಯಪಟ್ಟ ಪವನ್ ಅವಳ ಮುಖವನ್ನೇ ನೋಡುತ್ತಾ ಏನು ಪ್ರಶ್ನಿಸಿದ.

"ಅಚಲಾ" ಅಚಲಾ ಹೆಸರು ಕೇಳಿದ್ದೇ ಬೆಚ್ಚಿಬಿದ್ದ ಪವನ್ "ಏನಾಯಿತು... ಅಚಲಾಗೆ" ಕೇಳಿದ. ಮೊದಲೇ ನೂರಾರು ತೊಂದರೆಗಳನ್ನು ತುಂಬಿಕೊಂಡಂತ್ತಿದ್ದ ಅವಳ ಮುಖ ಇನ್ನಷ್ಟು ವಿಷಾದವನ್ನು ತುಂಬಿಕೊಳ್ಳುತ್ತಾ "ಅಮೆರಿಕಾದಿಂದ ನಿನ್ನೆ ರಾತ್ರಿಯೇ ಬಂದಿದ್ದಾಳೆ" ಎಂದಳು.

ಅವನ ಹೃದಯ ಯಾವುದೋ ಒಂದು ಅನಿರೀಕ್ಷಿತ ತೊಡಕನ್ನು ಎದುರು ನೋಡುತ್ತಿದ್ದು ಅಮೆರಿಕಾದಿಂದ ಬಂದಿದ್ದಾಳೆ ಎಂದೊಡನೆಯೇ ಬದುಕಿಯೇ ಇದ್ದಾಳೆ ಎಂದುಕೊಂಡು ಸಾವಿರಾರು ವಿನಮ್ರ ವಂದನೆಗಳನ್ನು ಮನಸ್ಸಿನೊಳಗೆಯೇ ಹೇಳಿಕೊಂಡ ದೇವರಿಗೆ.

"ಆದರೆ..." ರುಚಿ, ಮುಂದಿನ ಪದಗಳನ್ನು ತಡೆದುಕೊಂಡಳು, ಹೇಳಲಾರದೆ. "ಆದರೆ" ಪವನ್ ಈಗ ನಿಜವಾಗಿಯೂ ಚೀರಿಕೊಳ್ಳುವಂತೆ ಕೇಳಿದ. "ಮಾತನಾಡುವುದಿಲ್ಲ"

"ಮಾತನಾಡುವುದಿಲ್ಲ"

"ಅಂದರೆ ಏನಾಗಿದೆ?"

"ಶಸ್ತ್ರಚಿಕಿತ್ಸೆ ಮಾಡಿದರಂತೆ ಶಸ್ತ್ರ ಚಿಕಿತ್ಸೆ ಮಾಡಿದ ಮೇಲೆ ಕೋಮಾ ಸ್ಟೇಜ್‌ಗೋಗಿ ಮತ್ತೆ ಏನೇನೋ ಪ್ರಯತ್ನಪಟ್ಟರೂ ಆಗದೆ ಪ್ರಾಣ ಇರುವಾಗಲೇ ತೆಗೆದುಕೊಂಡೋಗುವಂತೆ ತಿಳಿಸಿಬಿಟ್ಟರಂತೆ." ಆ ಮಾತನ್ನು ರುಚಿ ಹೇಳಲಾಗದೆ ಬಿಕ್ಕಿ ಬಿಕ್ಕಿ ಅತ್ತಳು. ಪವನ್ ಕೂಡ ಅಳುವುದೊಂದೇ ಬಾಕಿ, ರುಚಿ ಹೊರಗಡೆಗೆ ಹೋಗಿಬಿಟ್ಟಳು.

ಸ್ವಲ್ಪ ಸಮಯ ಹಾಗೆ ಕುಳಿತಿದ್ದ ಪವನ ಎದ್ದು ನೇರವಾಗಿ ಕೆಳಕ್ಕೆ ಬಂದು ಆಟೋದಲ್ಲಿ ಕುಳಿತುಕೊಂಡು ತಾನು ಹೋಗಬೇಕಾಗಿರುವ ಸ್ಥಳದ ಹೆಸರು ಹೇಳಿದ. ಆಟೋ ಸುಮಾರು ದೂರ ಹೋದ ಮೇಲೆ ಪ್ರಾಚಿಗೆ ಹೇಳಿರುವ ಮಾತುಗಳು ಜಾಪಕಕ್ಕೆ ಬಂದು ಮತ್ತೆ ಆಟೋದವನಿಗೆ ತನ್ನ ಮನೆಯ ಕಡೆಗೆ ಹೋಗುವಂತೆ ಹೇಳಿದ. ಇನ್ನೊಂದು ರಸ್ತೆಯ ಮುಖಾಂತರ ಆಟೋ ಸುತ್ತಾಕಿಕೊಂಡು ಪವನ್ ಮನೆಯ ಹತ್ತಿರ ನಿಂತುಕೊಂಡಿತು.

ಪವನ್‌ನ ಅನಿರೀಕ್ಷಿತ ಆಗಮನ ಮತ್ತು ಅವನ ಮುಖ ನೋಡಿ ಗಾಬರಿಯಾದ ಪ್ರಾಚಿ ಹತ್ತಿರಕ್ಕೆ ಬಂದು "ಏನಾಯಿತು, ಯಾಕೆ... ಕೇಳಿದಳು?"

"ಏನೂ ಇಲ್ಲ ನನ್ನ ಜೊತೆ ನಡಿ ಒಂದು ಸ್ಥಳಕ್ಕೋಗಬೇಕು." ಎಂದ.

"ಎಲ್ಲಿಗೆ?"

"ಅದೆಲ್ಲಾ ಆಮೇಲೆ ಹೇಳುತ್ತೇನೆ. ಈಗ ನೀನು ಹೊರಕ್ಕೆ ನಡಿ" ಎಂದ. ಅವನ ಮುಖವನ್ನು ನೋಡಿದ ಪ್ರಾಚಿ "ಇರಿ ಬಟ್ಟೆ ಬದಲಾಯಿಸಿಕೊಳ್ಳುತ್ತೇನೆ" ಎನ್ನುತ್ತಾ ಒಳಕ್ಕೆ ಹೋಗಿ ಬಟ್ಟೆ ಬದಲಾಯಿಸಿಕೊಂಡು ಬರುವಷ್ಟರಲ್ಲಿ ಸುಮಾರು ನಾಲ್ಕೈದು ಸಲ ಬೇಗನೇ, ಬೇಗನೇ ಎನ್ನುತ್ತಾ ಅವಸರ ಪಡುವುದನ್ನು ನೊಡಿ ಪ್ರಾಚಿ ಇನ್ನಷ್ಟು ಭಯಗೊಂಡಿದ್ದಾಳೆ. ಇಬ್ಬರೂ ಹೊರಕ್ಕೆ ಬಂದು ನೋಡುತ್ತಾರೆ. ಆಟೋದವನು ಅಲ್ಲಿಯೇ ನಿಂತಿದ್ದಾನೆ.

"ಓಹೋ..." ಪವನ್ ಉದ್ಗಾರ ತೆಗೆದು ಅವನಿಗೆ ನೂರು ರೂಗಳ ನೋಟೊಂದನ್ನು ಕೊಟ್ಟು ಹೋಗುವಂತೆ ಹೇಳಿದ.

ಇಬ್ಬರೂ ತಮ್ಮ ಕಾರಿನಲ್ಲಿ ಕುಳಿತುಕೊಳ್ಳುತ್ತಾರೆ. ಕಾರು ರಸ್ತೆಗೆ ಇಳಿದು ವೇಗವಾಗಿ ಓಡುತ್ತಿದೆ. ಆಗ ಪವನ್ ಅಚಲಾಳ ವಿಷಯ ತಿಳಿಸುತ್ತಾನೆ. ಕಾರು ಇನ್ನಷ್ಟು ವೇಗವನ್ನು ಹೆಚ್ಚಿಸಿಕೊಂಡು ರಸ್ತೆಯನ್ನು ಹಿಂದಕ್ಕೆ ಹಾಕುತ್ತಾ ಓಡುತ್ತಿದೆ. "ಪ್ರಾಚಿ, ನಿನಗೆ ಒಂದು ಒಳ್ಳೆಯ ಸಮಾಚಾರ ಗೊತ್ತೆ?"

"ಒಳ್ಳೆ ಸಮಾಚಾರ."

"ಏನದು?" ಅವನ ಮುಖವನ್ನೇ ನೋಡುತ್ತಾಳೆ.

"ಅದೇ, ನಿನಗೆ ಫೋನು ಮಾಡುತ್ತಿದ್ದನಲ್ಲ, ಆಗಂತಕ ಅವನನ್ನು ಪೊಲೀಸರು ಬಂಧಿಸಿದ್ದಾರೆ."

"ನಿಜವಾಗಿಯೂ" ಒಂದೇ ಉದ್ಗಾರ ಮಾಡಿದ ಪ್ರಾಚಿ ಪವನ್‌ನನ್ನು ತಬ್ಬಿಕೊಳ್ಳುತ್ತಾಳೆ. ಈ ವಿಷಯ ಈ ಸಮಯಕ್ಕಿಂತ ಬೇರೆ ಸಮಯದಲ್ಲಿ ತಿಳಿಸಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು. ಅಷ್ಟೊಂದು ಒಳ್ಳೆಯ ವಿಷಯವನ್ನೂ ಆಚರಿಸಲಾಗದ ಸಂದಿಗ್ಧ ಪರಿಸ್ಥಿತಿ. ಒಟ್ಟಿನಲ್ಲಿ ಪೀಡೆ ತೊಲಗಿತು ಎಂದುಕೊಂಡಳು ಪ್ರಾಚಿ.

ಕಾರು ಒಂದು ಭವ್ಯವಾದ ಮನೆಯ ಮುಂದೆ ನಿಂತುಕೊಳ್ಳುತ್ತದೆ. ನಿಧಾನವಾಗಿ ಇಬ್ಬರೂ ಇಳಿಯುತ್ತಾರೆ. ಪವನ್ ಬಾಗಿಲಿನ ಕರೆ ಗಂಟೆಯನ್ನು ಒತ್ತಿದ. ಬಾಗಿಲು ತೆರೆದುಕೊಂಡಿತು. ಒಬ್ಬ ಮಧ್ಯ ವಯಸ್ಸಿನ ಗಂಡಸು ಏನು ಬೇಕಾಗಿತ್ತು ಎನ್ನುವಂತೆ ನೋಡಿದ.

"ಮಿಸ್ ಅಚಲಾರವರನ್ನು ನೋಡಬೇಕಿದೆ"

ಆ ಮಾತು ಕೇಳಿದ ತಕ್ಷಣ "ಓ! ಬನ್ನಿ... ಬನ್ನಿ..." ಎನ್ನುತ್ತಾ ಆ ಕೋಣೆಯಿಂದ ಮುಂದಕ್ಕೆ ಕರೆದುಕೊಂಡೋದ. ಅಲ್ಲೊಂದು ದೊಡ್ಡ ಹಾಲು, ಹಾಲಿನಲ್ಲಿ ಸುಮಾರು ಏಳೆಂಟು ಜನ ನಿಶ್ಯಬ್ದರಾಗಿ ಕುಳಿತಿದ್ದು, ಪ್ರಾಚಿ ಮತ್ತು ಪವನ್ ಕಡೆಯೇ ನೋಡುತ್ತಿದ್ದಾರೆ. ಅಲ್ಲಿಂದ ಇನ್ನೊಂದು ಕೋಣೆಗೋಗುವ ದಾರಿಯಲ್ಲಿ ಇನ್ನೂ ಇಬ್ಬರು ಮೂವರು ನಿಂತು ಮೆತ್ತಗೆ ಮಾತನಾಡಿಕೊಳ್ಳುತ್ತಿದ್ದಾರೆ.

ಆ ಮಧ್ಯೆ ವಯಸ್ಸಿನ ಗಂಡಸು ಒಂದು ಕೋಣೆಯ ಬಾಗಿಲು ತೋರಿಸಿ ಒಳಕ್ಕೆ ಹೋಗುವಂತೆ ಹೇಳಿ ಅಲ್ಲೇ ನಿಂತುಕೊಂಡ. ಪವನ್ ನಿಧಾನವಾಗಿ ಸ್ವಲ್ಪವೇ ತೆಗೆದುಕೊಂಡಿದ್ದ ಬಾಗಿಲನ್ನು ಅಗಲ ಮಾಡಿಕೊಂಡು ಒಳಕ್ಕೆ ಹೋಗುತ್ತಾನೆ. ಪ್ರಾಚಿ ಹಿಂದೆಯೇ ಹೋಗುತ್ತಾಳೆ. ಅದೊಂದು ಕೋಣೆ. ಕೋಣೆಯೊಳಗೆ ಒಂದು ಮಂಚ. ಮಂಚದ ಮೇಲೆ ಒಂದು ಹೆಣ್ಣು ದೇಹವಿದೆ. ಪಕ್ಕದಲ್ಲಿ ಒಂದಿಬ್ಬರು ಹೆಣ್ಣುಗಳು ಬಹುಶಃ ಅಚಲಾಳ ಗೆಳತಿಯರಿರಬಹುದು, ಅಚಲಾಳನ್ನೇ ನೋಡುತ್ತಾ ಕುಳಿತಿದ್ದಾರೆ.

ಪವನ್, ಪ್ರಾಚಿ ಒಳಕ್ಕೆ ಬಂದಿದ್ದನ್ನು ಗಮನಿಸಿದ ಅಚಲಾಳ ಕಣ್ಣುಗಳಲ್ಲಿ ನಿಧಾನವಾಗಿ ತೇಜಸ್ಸು ತಂಬಿಕೊಳ್ಳುತ್ತದೆ. ಇಬ್ಬರು ಹೆಣ್ಣುಗಳಲ್ಲಿ ಒಂದೆಣ್ಣು ಅಚಲಾಳ ಕೈಯನ್ನು ಮೃದುವಾಗಿ ಒತ್ತಿ ಕೆಲವು ಕ್ಷಣಗಳಾದ ಮೇಲೆ ಹೊರಕ್ಕೆ ಬರುತ್ತಾಳೆ. ಜೊತೆಯೆ ಇನ್ನೊಂದು ಹೆಣ್ಣು ಕೂಡ ಹೊರಕ್ಕೆ ಬರುತ್ತಾಳೆ. ಆ ದೃಶ್ಯವನ್ನು ನೋಡಲಾರದ ಪವನ್ ಮತ್ತು ಪ್ರಾಚಿ ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತಾರೆ.

ಪ್ರಾಚಿ ಇನ್ನಷ್ಟು ಹತ್ತಿರಕ್ಕೆ ಬಂದು ಅಚಲಾಳನ್ನೇ ಸುಮಾರು ಹೊತ್ತು ಕನಿಕರವಾಗಿ ಬಹಳ ಅಪ್ಯಾಯಮಾನವಾಗಿ ನೋಡುತ್ತಾಳೆ. ಅಚಲಾ ನಗುವುದಕ್ಕೆ ಎಷ್ಟು ಪ್ರಯತ್ನ ಒಟ್ಟರೂ ಆಗದೆ ಕಣ್ಣುಗಳಲ್ಲೇ ನಗುತ್ತಿದ್ದಾಳೆ. ಪ್ರಾಚಿ, ಅಚಲಾ ನಕ್ಕರೆ ಹೇಗಿರಬಹುದೆಂದು ಮನಸ್ಸಿನಲ್ಲೇ ಊಹಿಸಿಕೊಳ್ಳುತ್ತಾಳೆ. ಮತ್ತೆ ಏನೋ ಜಾಪಕಬಂದವಳಂತೆ ಹೊರಕ್ಕೆ ಬಂದು ನಿಲ್ಲುತ್ತಾಳೆ.

ಪವನ್ ಕೆಲವು ಕ್ಷಣಗಳ ಮಾತನಾಡುವ ಅವಳ ಕಣ್ಣುಗಳನ್ನೇ ನೋಡಿ ಹೃದಯವನ್ನು ತುಟಿಗಳಿಗೆ ತಂದುಕೊಂಡು ಬಗ್ಗಿ ಅವಳ ಕೆನ್ನೆಗೊಂದು ಚುಂಬನ ನೀಡುತ್ತಾನೆ. ಅಚಲಾ ಕಣ್ಣುಗಳನ್ನು ಮುಚ್ಚಿಕೊಳ್ಳುತ್ತಾಳೆ, ಮಗುವಿಗೆ ಕಚಗುಳಿ ಯಾದಂತೆ.

ಅಷ್ಟರಲ್ಲಿ ಬಾಗಿಲಲ್ಲಿ ಶಬ್ದವಾಗಿ ಇನ್ನಷ್ಟು ಜನರು ಒಳಕ್ಕೆ ಬರುತ್ತಾರೆ. ಪವನ್

ಪೆಚ್ಚುಮುಖದ ಜೊತೆಯೇ ಸಾವಿರ ವರ್ಷಗಳ ಅಖಂಡ ತಪಸ್ಸಿನಿಂದ ಜೀವನದ ಒಂದು ಸತ್ಯವನ್ನು ಕಂಡು ಕೊಂಡವನಂತೆ ಹೊರಕ್ಕೆ ಬಂದು ನಿಂತುಕೊಳ್ಳುತ್ತಾನೆ.

ಆ ಮಧ್ಯ ವಯಸ್ಸಿನ ಗಂಡಸು ಮತ್ತೆ ಪ್ರಾಚಿ, ಪವನ್‌ನನ್ನು ಕರೆದುಕೊಂಡೋಗಿ ಹಾಲಿನ ಸೋಫಾದಲ್ಲಿ ಕೂರಿಸಿ ಕಾಫಿ ಕೊಡುವಂತೆ ಸೇವಕನಿಗೆ ಹೇಳುತ್ತಾನೆ.

ಅಷ್ಟರಲ್ಲಿ ಅಚಲಾ ಇದ್ದ ಕೋಣೆಯಿಂದ ಹೆಂಗಸರ ಚೀರಾಟ ಪ್ರಾರಂಭವಾಗುತ್ತದೆ.

"All is fair in love and sex"





ಭೂವಿಜ್ಞಾನಿ, ಮತ್ತು ಲೇಖಕರಾಗಿ ಹೆಸರು ಮಾಡಿರುವ ಡಾ. ಎಂ. ವೆಂಕಟಸ್ವಾಮಿ ಕೋಲಾರ ಜಿಲ್ಲೆಯ ಬಂಗಾರಪೇಟೆ ತಾಲೂಕಿನ ಬ್ಯಾಟರಾಯನಹಳ್ಳಿಯವರು. ಕನ್ನಡದ ಹೆಸರಾಂತ ಪತ್ರಿಕೆಗಳಲ್ಲಿ ಇವರ ಹಲವಾರು ಕತೆ, ಕವನ, ಕಾದಂಬರಿ, ವೈಚಾರಿಕ, ವಿಮರ್ಶೆ, ವಿಜ್ಞಾನ ಮತ್ತು ಪ್ರವಾಸ ಕಥೆಗಳು ಸೇರಿ ಒಟ್ಟು ೨೦ ಕೃತಿಗಳು ಪ್ರಕಟವಾಗಿವೆ. ಇವರು ಪ್ರಕಟಿಸಿರುವ ೨೦ ಕೃತಿಗಳಲ್ಲಿ ಅಸ್ಪೃಶ್ಯರು, ಅಲೆಮಾರಿಯ ಹೆಜ್ಜೆಗಳು, ಬೆಟ್ಟ ಗುಡ್ಡಗಳ ಬೋಗುಣಿಯಲ್ಲಿ , ಡ್ರ್ಯಾಗನ್ಸ್ ಮಹಾಗೋಡೆಯೊಳಗೆ, ಸುನಾಮಿ, ಪೃಥ್ವಿಯ ಯಶೋಗಾಥೆ ಮುಖ್ಯವಾದವು. ಕನ್ನಡ, ತೆಲುಗು, ತಮಿಳು, ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳನ್ನು ಬಲ್ಲವರಾಗಿರುವ ಇವರು ಭಾರತೀಯ ಭೂವೈಜ್ಞಾನಿಕ ಸರ್ವೇಕ್ಷಣ ಸಂಸ್ಥೆಯಲ್ಲಿ ೨೫ ವರ್ಷಗಳಿಂದ ದೇಶದ ಮೂಲೆ ಮೂಲೆ ಸುತ್ತಿ ಅಪಾರ ಅನುಭವ ಪಡೆದಿದ್ದಾರೆ. ಚೀನಾ ದೇಶದ ಪ್ರವಾಸವೂ ಮಾಡಿ ಬಂದಿದ್ದಾರೆ. ಕೋಲಾರ ಚಿನ್ನದ ಗಣಿಗಳ ಬಗ್ಗೆ ನಡೆಸಿದ ಸಂಶೋಧನೆಗೆ ಹಂಪಿ ಕನ್ನಡ ವಿಶ್ವವಿದ್ಯಾಲಯ ಇತ್ತೀಚೆಗೆ ಡಿ.ಲಿಟ್. ಪದವಿ ನೀಡಿ ಗೌರವಿಸಿದೆ.



ಸಂಕಲ್ಪ ಪ್ರಕಾಶನ